# ಕನ್ನಡ ಭಾಷಾ ಕಲಿಕೆಯ ಪಠ್ಯಗಳು
# ಮತ್ತು
# ಸಾಮಾಜಿಕ ಹೊಣೆಗಾರಿಕೆಯ ತೊಡಕುಗಳು

(ಬೆಂಗಳೂರು ವಿಶ್ವವಿದ್ಯಾಲಯದ ಪದವಿ ಹಂತದ ಭಾಷಾ ಕಲಿಕೆಯ ಪಠ್ಯಗಳನ್ನು ಮುಖ್ಯಮಾಡಿಕೊಂಡ ಅಧ್ಯಯನ)

ಪಿ.ಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ

೨೦೧೦


ಮಾರ್ಗದರ್ಶಕರು

ಡಾ. ಅಶೋಕ ಕುಮಾರ ರಂಜೇರೆ
ಸಹ ಪ್ರಾಧ್ಯಾಪಕರು, ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ-೫೮೩೨೭೬

ಸಂಶೋಧನಾ ವಿದ್ಯಾರ್ಥಿ

ಆರ್. ಚಲಪತಿ
ಪ್ರಾಧ್ಯಾಪಕರು, ಕನ್ನಡ ವಿಭಾಗ
ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜು
ಬೆಂಗಳೂರು-೫೬೦೦೨೦





ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬

# ಕನ್ನಡ ಭಾಷಾ ಕಲಿಕೆಯ ಪಠ್ಯಗಳು
# ಮತ್ತು
# ಸಾಮಾಜಿಕ ಹೊಣೆಗಾರಿಕೆಯ ತೊಡಕುಗಳು

(ಬೆಂಗಳೂರು ವಿಶ್ವವಿದ್ಯಾಲಯದ ಪದವಿ ಹಂತದ ಭಾಷಾ ಕಲಿಕೆಯ ಪಠ್ಯಗಳನ್ನು ಮುಖ್ಯಮಾಡಿಕೊಂಡ ಅಧ್ಯಯನ)

**ಪಿ.ಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ**

**೨೦೧೦**


ಮಾರ್ಗದರ್ಶಕರು

**ಡಾ. ಆಶೋಕ ಕುಮಾರ ರಂಜೇರೆ**
ಸಹ ಪ್ರಾಧ್ಯಾಪಕರು, ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ–೫೮೩೨೭೬

ಸಂಶೋಧನಾ ವಿದ್ಯಾರ್ಥಿ

**ಆರ್. ಚಲಪತಿ**
ಪ್ರಾಧ್ಯಾಪಕರು, ಕನ್ನಡ ವಿಭಾಗ
ಶೇಶಾದ್ರಿಪುರಂ ಸಂಜೆ ಪದವಿ ಕಾಲೇಜು
ಬೆಂಗಳೂರು–೫೬೦೦೨೦








ಕನ್ನಡ ಭಾಷಾಧ್ಯಯನ ವಿಭಾಗ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
**ವಿದ್ಯಾರಣ್ಯ–೫೮೩೨೭೬**

## ಮಾರ್ಗದರ್ಶಕರ ದೃಢೀಕರಣ ಪತ್ರ

ಆರ್. ಚಲಪತಿ ಅವರು **ಕನ್ನಡ ಭಾಷಾ ಕಲಿಕೆಯ ಪಠ್ಯಗಳು ಮತ್ತು ಸಾಮಾಜಿಕ ಹೊಣೆಗಾರಿಕೆಯ ತೊಡಕುಗಳು** ಎಂಬ ಈ ಸಂಶೋಧನ ಮಹಾಪ್ರಬಂಧವನ್ನು ಕನ್ನಡ ಭಾಷಾಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದು, ಈ ಪ್ರಬಂಧವು ಮೂಲವಾಗಿದ್ದು ಈ ಮೊದಲು ಇನ್ನಾವುದೇ ಪದವಿಗೆ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ. ಅಶೋಕ ಕುಮಾರ**
ಸಹ ಪ್ರಾಧ್ಯಾಪಕರು
ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩೨೭೬

ದಿನಾಂಕ : ೦೬-೦೮-೨೦೧೦

ಸ್ಥಳ : ವಿದ್ಯಾರಣ್ಯ

## ಸಂಶೋಧಕರ ದೃಢೀಕರಣ ಪತ್ರ

ಆರ್. ಚಲಪತಿ ಆದ ನಾನು **ಕನ್ನಡ ಭಾಶಾ ಕಲಿಕೆಯ ಪಠ್ಯಗಳು ಮತ್ತು ಸಾಮಾಜಿಕ ಹೊಣೆಗಾರಿಕೆಯ ತೊಡಕುಗಳು** ಎಂಬ ಈ ಸಂಶೋಧನ ಮಹಾಪ್ರಬಂಧವನ್ನು ಕನ್ನಡ ಭಾಶಾಧ್ಯಯನ ವಿಭಾಗದ ಸಹ ಪ್ರಾಧ್ಯಾಪಕರಾದ ಡಾ. ಅಶೋಕ ಕುಮಾರ ಅವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದೇನೆ. ಪಿಎಚ್.ಡಿ. ಪದವಿಗಾಗಿ ಭಾಶಾದ್ಯಯನ ವಿಭಾಗಕ್ಕೆ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ : 6-4-2010
ಸ್ಥಳ : ಹಂಪಿ

ಆರ್. ಚಲಪತಿ
ಸಂಶೋಧನಾ ವಿದ್ಯಾರ್ಥಿ

## ಇದು ನೆನಪೇನಲ್ಲ...

ಕೃತಜ್ಞತೆಗಳು,

ಅಧ್ಯಯನ ನಡೆಸಲು ಅವಕಾಶ ಒದಗಿಸಿದ ಕನ್ನಡ ವಿಶ್ವವಿದ್ಯಾಲಯಕ್ಕೆ, ವಿಶೇಶವಾಗಿ ಭಾಶಾಧ್ಯಯನ ವಿಭಾಗದ ಎಲ್ಲರಿಗೆ, ಮಾರ್ಗದರ್‍ಶನ ನೀಡಿದ ಅಶೋಕ ಕುಮಾರ ರಂಜೇರೆಯವರಿಗೆ, ತಮ್ಮ ತಿಳುವಳಿಕೆಯನ್ನು ಒದಗಿಸಿದ ತಜ್ನರಿಗೆ, ಕಲಿಕಾರ್‍ತಿಗಳಿಗೆ, ಕನ್ನಡ ಅಧ್ಯಾಪನ ಬಳಗಕ್ಕೆ.

ನನಗೆ ಸಂಬಂಧಿಸಿದ ಎಲ್ಲವೂ-ಎಲ್ಲರೂ ನನ್ನ ಬದುಕಿನ ಭಾಗವೇ ಆಗಿದೆ, ಆಗಿರುತ್ತಾರೆ ಎಂದು ತಿಳಿಯುವುದು ನನ್ನ ಕರ್‍ತವ್ಯ. ಯಾರ ಪಾಲು ಎಶ್ಟು ಅಂತ ಗುಣಿಸುವುದು, ಭಾಗಿಸುವುದು ಅಂದರೆ ಅದು ಅತ್ಯಂತ ಮುಜುಗರದ ಮತ್ತು ಸಭ್ಯವಲ್ಲದ ಕೆಲಸ. ಜೀವನದ ಪ್ರತಿ ಸಣ್ಣ ಸಂಬಂಧದ ತಿಳುವಳಿಕೆಯೂ ನನ್ನ ಆಲೋಚನೆಗಳನ್ನು ಕಾಯ್ದುಕೊಂಡಿರುತ್ತದೆ. ಹೀಗಿರುವಾಗ ಬಿಡುವುದು ಯಾವುದನ್ನು, ಯಾರನ್ನು? ಹಿರಿಯರು, ಬಂಧುಗಳು, ಗೆಳೆಯ-ಗೆಳತಿಯರು, ಮಕ್ಕಳು, ನನ್ನ ವಿದ್ಯಾರ್‍ತಿ ಬಳಗ... ನನ್ನ ಬದುಕಿನ ಭಾಗವೇ ಆಗಿರುವ ಎಲ್ಲರಿಗೂ ನಾನು ಕೃತಜ್ನ.

ವಿಶೇಶವಾಗಿ ಜೊತೆಗಾರ ಅನಿಕೇತನ್ ಗೆ...

ಏಪ್ರಿಲ್ ೦೩, ೨೦೧೦

ಬೆಂಗಳೂರು

ಆರ್.ಚಲಪತಿ

ಕನ್ನಡ ಪ್ರಾಧ್ಯಾಪಕರು
ಶೇಶಾದ್ರಿಪುರಂ ಸಂಜೆ ಪದವಿ ಕಾಲೇಜು
ಬೆಂಗಳೂರು-೫೬೦೦೨೦

ಪರಿವಿಡಿ

ಅಧ್ಯಾಯ–೪



ಅಧ್ಯಾಯ ೫



ಅಧ್ಯಾಯ ೬

ಅಧ್ಯಾಯ–೧

# ಈ ಅಧ್ಯಯನವನ್ನು ಪ್ರವೇಶಿಸುವ ಬಗೆ

## ಮೊದಲಿಗೆ

ಅಸಲಿಗೆ, ಕನ್ನಡ ಭಾಶೆಯ ಕಲಿಕೆ ಅನ್ನುವುದು ಏನು?

ನಿಜಕ್ಕೂ, ಕನ್ನಡ ಭಾಶೆಯ ಪಠ್ಯಕ್ರಮ ಹೇಗೆ?

ಕನ್ನಡ ಭಾಶೆ ಕಲಿಕೆಯ ಪಠ್ಯಗಳ ಸಾಮಾಜಿಕ ಹೊಣೆಗಾರಿಕೆ ಯಾವುದು?

ಅಧ್ಯಾಯ-೧

## ಈ ಅಧ್ಯಯನವನ್ನು ಪ್ರವೇಶಿಸುವ ಬಗೆ

**ಪ್ರವೇಶಿಸುವ ಮುನ್ನ;**

ಇಲ್ಲಿನ ಬರವಣಿಗೆಯ ಕುರಿತು ಒಂದು ಮಾತು: ಇವತ್ತಿನ ಕನ್ನಡ ಬರವಣಿಗೆಯಲ್ಲಿ ಅನೇಕ ಪಲ್ಲಟಗಳು ಕಾಣಿಸಿಕೊಳ್ಳುತ್ತಿವೆ. ಹೊಸಪದ ನಿರ್ಮಾಣ, ಕನ್ನಡ ಅಕ್ಕರಗಳನ್ನು ಬಳಸುವ ಬಗೆ ಮೊದಲಾಗಿ ಇದು ಉದ್ದೇಶಪೂರ್ವಕವಾಗಿಯೇ ನಡೆಯುತ್ತಿದೆ. ಕನ್ನಡ ಬರವಣಿಗೆಯನ್ನು ಸಂಸ್ಕೃತ ಮತ್ತು ಇಂಗ್ಲಿಶ್ ವ್ಯಾಕರಣಗಳಿಂದ ಉಂಟಾಗಿರುವ ಸ್ಕಾಲಿತ್ಯಗಳಿಂದ ಬಿಡಿಸಲು ಪಣತೊಟ್ಟವರಂತೆ ನಾಡಿನ ಬಹುದೊಡ್ಡ ಭಾಶಾ ತಜ್ನರಾದ ಡಾ. ಡಿ.ಎನ್. ಶಂಕರ ಭಟ್ ತಮ್ಮನ್ನು ಇಳಿವಯಸ್ಸಿನಲ್ಲೂ ತೀವ್ರವಾಗಿ ತೊಡಗಿಸಿಕೊಂಡಿದ್ದಾರೆ. ಮತ್ತೊಬ್ಬ ಭಾಶಾ ತಜ್ನ ಮತ್ತು ಸಂಸ್ಕೃತಿ ಚಿಂತಕರಾದ ಡಾ. ಕೆ.ವಿ. ನಾರಾಯಣ ಅವರು ಈ ಚಿಂತನೆಯನ್ನು ಬೆಳೆಸುತ್ತಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಭಾಶಾಧ್ಯಯನ ವಿಭಾಗವು ಇದನ್ನು ನಾಡಿನ ಜನತೆಗೆ ತಲುಪಿಸುವ ಕೆಲಸವನ್ನು ಬಹಳ ಹಿಂದೆಯೇ ಆರಂಭಿಸಿ ಕಾರ್ಯಪ್ರವೃತ್ತವಾಗಿದೆ. ಈ ಚಟುವಟಿಕೆಗಳು ಕನ್ನಡ ಬರವಣಿಗೆಯಲ್ಲಿ ತೊಡಗಿರುವ ಅನೇಕರನ್ನು ಪ್ರಭಾವಿಸುತ್ತಿವೆ. ಪ್ರಸ್ತುತ ಅಧ್ಯಯನದ ಬರವಣಿಗೆಯಲ್ಲಿ ಸಹ ಉದ್ದೇಶ ಪೂರ್ವಕವಾಗಿಯೆ ಷ, ಞ, ಙ-ಅರ್ಕಾವೊತ್ತು ಅಕ್ಕರಗಳನ್ನು ಬಳಸಲಾಗಿಲ್ಲ. ಪರ್ಯಾಯವಾಗಿ ಉಚ್ಚಾರಣೆಗೆ ಅನುಕೂಲವೂ, ಸ್ಪಶ್ಟವೂ, ಅರ್ಥಪೂರ್ಣವೂ ಆಗಿ ಬಳಸಬಹುದಾಗಿರುವ-ಬಳಕೆಯಲ್ಲಿರುವ 'ಶ' 'ನ'ವೊತ್ತು ( ್ನ), ಮತ್ತು 'ರ' ಅಕ್ಕರಗಳನ್ನು ಬಳಸಲಾಗಿದೆ. ಕನ್ನಡದ ಬರವಣಿಗೆಯ ಚರಿತ್ರೆಯಲ್ಲಿ ಕನ್ನಡದ ಕೆಲವು ಅಕ್ಕರಗಳು ಹೀಗೆ, ಆಗಾಗ ಬದಲಾವಣೆಯನ್ನು ಪಡೆಯುತ್ತ ಬಂದಿರುವುದು ನಾವೆಲ್ಲ ಗಮನಿಸಿರುವ ವಿಚಾರವೇ ಆಗಿದೆ. ಆ ಬಗೆಯ ಉದಾಹರಣೆಯೆಂದರೆ, 'ರಳ(ಱ), ಕುಳ(ೞ), ಋ'ಗಳು ಪರಿವರ್ತನೆಯಾದ ಪರಿ ಅಥವಾ ಬರವಣಿಗೆಯಿಂದ ಕೈಬಿಟ್ಟು ಹೋದದ್ದು. ಇವತ್ತಿಗೂ ನಾವು ಇವುಗಳನ್ನು ರ ಮತ್ತು ಳ ಗಳಾಗಿ ಮಾತ್ರವೇ ಬರೆಯುತ್ತೇವೆ. ಇದನ್ನು ಗಮನಕ್ಕೆ ತೆಗೆದುಕೊಳ್ಳುವುದು.

**ಮೊದಲಿಗೆ,**

ದಿನಪತ್ರಿಕೆಯೊಂದರಲ್ಲಿ, ನಮ್ಮ ಶಿಕ್ಷಣ ವ್ಯವಸ್ಥೆಯನ್ನು ಕುರಿತು ಚಿಂತಕರೊಬ್ಬರು **ಭಾರತೀಯ ಮೂರ್ಖರ ಸಂಸ್ಥೆ** ಎಂದು ಬರೆಯುತ್ತಾರೆ. ಅವರು ನಮ್ಮ ಒಟ್ಟು ಶಿಕ್ಷಣ ವ್ಯವಸ್ಥೆಯ ಬಗ್ಗೆ ಬರೆಯುತ್ತಾ, "ಆ ವಿಶಯ ಕೈಗೆತ್ತಿಕೊಂಡರೆ ನನ್ನ ರಕ್ತ ಕುದಿಯಲು ಪ್ರಾರಂಭಿಸುತ್ತದೆ. ನಿದ್ರೆ ಬರುವುದಿಲ್ಲ ಮತ್ತು ನನಗೆ ನಿಜಕ್ಕೂ ಗಾಸಿಗೊಂಡ ಅನುಭವವಾಗುತ್ತದೆ... ಅದು ದೇಶದ ಭವಿಶ್ಯಕ್ಕೆ ದಕ್ಕೆ ತರುತ್ತಿದೆ, ಹೆಚ್ಚು ಕಡಿಮೆ ಪ್ರತಿಯೊಂದು ಕುಟುಂಬದ ಮೇಲೂ ಪರಿಣಾಮ ಬೀರುತ್ತಿದೆ. ಪ್ರತಿಯೊಬ್ಬರಿಗೂ ಇದು ಗೊತ್ತಿದೆ... ಬದಲಾವಣೆಯನ್ನು ಎಲ್ಲಾ ರೀತಿಯಿಂದಲೂ ತಡೆಯುವುದು ಭಾರತೀಯ ಸಂಸ್ಕೃತಿಯಾಗಿದೆ. ಬದಲಾವಣೆಗೆ ಟೀಕೆಗಳನ್ನು ನಿರ್ಲಕ್ಷಿಸಿ ಧೈರ್ಯದಿಂದ ಹೆಜ್ಜೆ ಇಡಬೇಕಾಗುತ್ತದೆ. ದುರಂತವೆಂದರೆ, ಇದನ್ನು ಸಮಾಜ ನಮಗೆ ಕಲಿಸಿಲ್ಲ" ಎಂದು ಪ್ರತಿಕ್ರಿಯಿಸುತ್ತಾ, ನಮ್ಮ ಕಲಿಕೆಯ ಪಠ್ಯಗಳು, ಪರೀಕ್ಷೆ ಮತ್ತು ಬದುಕಿನ ಸಂಬಂಧಗಳನ್ನು ಕುರಿತು ಶಾಲೆ ಕಾಲೇಜುಗಳಲ್ಲಿ ಕಲಿಸುತ್ತಿರುವುದು ದೈನಂದಿನ ಬದುಕಿನಲ್ಲಿ ಉಪಯೋಗಕ್ಕೆ ಬರುತ್ತಿಲ್ಲ. ಸಾಮಾಜಿಕವಾಗಿ ತೀವ್ರವಾದ ಬದಲಾವಣೆಗಳು ನಡೆಯುತ್ತಿದ್ದರೂ ನಮ್ಮ ವ್ಯಾಸಂಗ ವಿಶಯಗಳು ಅದಕ್ಕೆ ತಕ್ಕ ಹಾಗೆ ಬದಲಾಗಿಲ್ಲ. ಬದಲಾಗಿದ್ದರೂ, ನಮ್ಮ ಪಠ್ಯಕ್ರಮವನ್ನು ಬದಲಾಯಿಸುತ್ತಿರುವವರಿಗೆ ಏನನ್ನು ಬದಲಾಯಿಸಬೇಕಾಗಿದೆ ಎನ್ನುವ ಬಗ್ಗೆ ಸರಿಯಾದ ಪರಿಜ್ಞಾನವಿಲ್ಲ. ಶಿಕ್ಷಣದ ಗುರಿ 'ಜ್ಞಾನದ ಅರಸುವಿಕೆಯಾದರೂ ವ್ಯಾಸಂಗದ ವಿಶಯಗಳು ಅದಕ್ಕೆ ಪೂರಕವಾಗಿಲ್ಲ. ವಿದ್ಯಾರ್ಥಿಗಳು ತಮ್ಮ ಪಾಠಗಳನ್ನು ಎಶ್ಟು ಚನ್ನಾಗಿ ಓದಿಕೊಂಡಿದ್ದಾರೆ ಎಂಬುದನ್ನು ಪರೀಕ್ಷಿಸುವುದಕ್ಕೆ ನಾವು ಅಂಟಿಕೊಂಡಿದ್ದೇವೆ. ನಾವು ಪಾಠಗಳನ್ನು ಪಾಲಿಸಲೇಬೇಕಾದ ನಿಯಮಗಳಂತೆ ಪರಿಗಣಿಸುತ್ತೇವೆ. ಹೆಚ್ಚು ಅಂಕ ಗಳಿಸುವುದಕ್ಕೆ ಆದ್ಯತೆ ನೀಡುತ್ತೇವೆ. ವಿದ್ಯಾರ್ಥಿಗಳ ಮತ್ತು ದೇಶದ ವಿಕಾಸಕ್ಕೆ ಅಗತ್ಯವಾಗಿರುವ, ಹೊಸತನ ತರುವಿಕೆ, ಕಲ್ಪನಾ ಶಕ್ತಿ ಮತ್ತು ಸೃಜನಶೀಲತೆಗಳಿಗೆ ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಜಾಗವಿಲ್ಲ. ವಾಸ್ತವವಾಗಿ ಮಕ್ಕಳಲ್ಲಿರುವ ಸೃಜನಶೀಲತೆಯ ಚೈತನ್ಯವನ್ನು ನಾವು ಕೊಲ್ಲುತ್ತಿದ್ದೇವೆ. ಎರಡನೆ ದರ್ಜೆಯ ಸಮಾಜದ ಸೃಶ್ಟಿ ಕಾರ್ಯದಲ್ಲಿ ತೊಡಗಿದ್ದೇವೆ ಎಂದು ಬರೆಯುತ್ತಾರೆ. ಇಂಥ ಮಾತುಗಳಲ್ಲಿ, ತೀವ್ರವಾದ ಸಿಟ್ಟು, ಹತಾಶೆಗಳು ವ್ಯಕ್ತವಾಗುತ್ತವೆ. ಏನನ್ನೂ ಪ್ರಶ್ನಿಸದವರನ್ನು ಒಳ್ಳೆಯ ಮಕ್ಕಳು ಎನ್ನುವಂತಾಗಿದೆ. ಹಿಂಬಾಲಕರ ಸಮಾಜವನ್ನು ಸೃಶ್ಟಿಸುತ್ತಿದ್ದೇವೆ ಎನ್ನುವ ಪ್ರತಿಕ್ರಿಯೆಗಳು ಬೇರೆ ಬೇರೆ ರೂಪಗಳಲ್ಲಿ ವ್ಯಕ್ತವಾಗುತ್ತಿರುವುದನ್ನು ಶಿಕ್ಷಣ ಸಂಸ್ಥೆಗಳು ಮತ್ತು ಶಿಕ್ಷಣವನ್ನು ಕುರಿತ

ಸಾಮಾನ್ಯ ಮಾತುಕತೆಗಳಲ್ಲಿ, ತಜ್ಞರ ಚಿಂತನೆಗಳಲ್ಲಿ, ಮಕ್ಕಳ ಬೆಳವಣಿಗೆಯ ಸಂದರ್ಭದಲ್ಲಿ, ದೇಶದ ಅಭಿವೃದ್ಧಿ ಕುರಿತ ಚರ್ಚೆಗಳಲ್ಲಿ ಕಾಣುತ್ತಿದ್ದೇವೆ.

ಇವತ್ತಿನ ಶಿಕ್ಷಣವನ್ನು ಮತ್ತು ಅದನ್ನು ಕೊಡಮಾಡುತ್ತಿರುವ ವ್ಯವಸ್ಥೆಯನ್ನು ಕುರಿತ ಬಹುತೇಕರ ಮಾತುಗಳಲ್ಲಿ ಒಂದಲ್ಲ ಒಂದು ಬಗೆಯಲ್ಲಿ ಇಂಥ ನಿರಾಶೆ, ಹತಾಶೆಗಳೇ ತುಂಬಿಹೋಗಿವೆ. ಶಿಕ್ಷಣದ ವ್ಯವಸ್ಥೆಯನ್ನು ಕುರಿತ ವರದಿಗಳು, ಅನೇಕ ಅಧ್ಯಯನಗಳು ಸಹ ಆಧುನಿಕ ಶಿಕ್ಷಣದ ಆರಂಭಕಾಲದಿಂದಲೂ ಇದನ್ನು ಗುರುತಿಸಿಕೊಂಡು ಪರಿಶ್ಕರಣೆಯ ಕುರಿತಾಗಿ ಚಿಂತಿಸುತ್ತಲೇ ಬರುತ್ತಿವೆ. ಆದರೂ ಈ ಹತಾಶೆ ಇಂದು ಬಹಳ ತೀವ್ರವಾಗಿಯೆ ಇದ್ದು ಒಟ್ಟು ಭಾರತ ಸಂದರ್ಭವನ್ನು ಇಟ್ಟುಕೊಂಡು ವ್ಯಕ್ತಪಡಿಸಲಾಗುತ್ತಿದೆ. ಅಧ್ಯಾಪನ ಸಮುದಾಯದ ಸಂದರ್ಭದಲ್ಲಿ ಕೂಡ, 'ವಿದ್ಯಾರ್ಥಿಗಳು ಸರಿಯಿಲ್ಲ, ಸಿನಿಮಾ, ಟೀವಿ, ಇಂಟರ್ನೆಟ್ ಬಂದಮೇಲೆ ಹಾಳಾಗಿದ್ದಾರೆ'. 'ಅಪ್ಪ ಅಮ್ಮ ಹಣ, ಆಸ್ತಿ ಮಾಡಿಟ್ಟಿರ್ತಾರೆ, ಅದನ್ನು ಮೋಜು ಮಾಡೋಕೆ ಕಾಲೇಜಿಗೆ ಬರ್ತವೆ'. 'ಇವತ್ತಿನ ವಿದ್ಯಾರ್ಥಿಗಳಿಗೆ ಶ್ರದ್ಧೆಯಿಲ್ಲ' ಎಂಬ ಮಾತುಗಳಲ್ಲಿ ಹೊಣೆಗಾರಿಕೆಯಿಂದ ತಪ್ಪಿಸಿಕೊಳ್ಳುತ್ತಿರುವುದನ್ನು ಕಾಣುತ್ತೇವೆ. ಅಥವ ಹೊಣೆಗಾರಿಕೆಯನ್ನು ಸರಿಯಾಗಿ ನಿರೂಪಿಸಿಕೊಳ್ಳದಿರುವುದರ ಪರಿಣಾಮವೂ ಇದಾಗಿದೆ.

ಶಿಕ್ಷಣದ ಮೂಲಕ ಸಮಾಜೀಕರಣ ಪ್ರಕ್ರಿಯೆಯನ್ನು ಕುರಿತು ಪ್ರಸ್ತಾಪಿಸುವ ಕನ್ನಡದ ಸಂಸ್ಕೃತಿ ಚಿಂತಕ, ಭಾಶೆ ಮತ್ತು ಶಿಕ್ಷಣ ತಜ್ಞರಾದ ಡಾ. ಕೆ.ವಿ ನಾರಾಯಣ ವಿಶ್ವವಿದ್ಯಾಲಯಗಳ ಶೈಕ್ಷಣಿಕ ಸನ್ನಿವೇಶವನ್ನು ಕುರಿತು "ನಮ್ಮ ವಿಶ್ವವಿದ್ಯಾಲಯ ಶಿಕ್ಷಣವೆಂಬುದು ಶಕ್ತಿ, ಕಾಲ ಹಾಗೂ ರಾಶ್ಟ್ರ ಸಂಪತ್ತು ಅನುಪಯುಕ್ತವಾಗಿ ವ್ಯಯವಾಗುತ್ತಿರುವ ವಲಯ" ಎನ್ನುತ್ತಾರೆ. 'ಸಾಮಾಜಿಕವಾದ ಹಲವು ಉನ್ನತ ಸ್ಥಾನಗಳನ್ನು ಪಡೆಯುವುದಕ್ಕೆ ಶಿಕ್ಷಣದ ಪದವಿಗಳು ಪರವಾನಗಿಯಾಗಿವೆ, ವಿಶ್ವವಿದ್ಯಾಲಯಗಳು ಇಂಥ ಪದವಿಗಳನ್ನು ಕೊಡುವ ನೋಂದಾವಣೆ ಕೇಂದ್ರವಾಗಿವೆ, ಸಮಾಜದ ಚಲನಶಕ್ತಿಗಳ ನಿಯಂತ್ರಣ ಹೊಂದಿರುವವರು ಇದನ್ನು ಹಿಡಿತದಲ್ಲಿಟ್ಟುಕೊಂಡಿದ್ದಾರೆ. ಈ ಕೇಂದ್ರಗಳು ಭ್ರಶ್ಟಗೊಂಡಶ್ಟೂ ಪರವಾನಗಿ ಪಡೆಯುವುದು ಸುಲಭ ಹಾಗೂ ಸರಳವಾಗಿದೆ. ಹೀಗಾಗಿ ವಿಶ್ವವಿದ್ಯಾಲಯದ ಶಿಕ್ಷಣ ಹೀಗೆ ಚಹರೆ ಕಳೆದುಕೊಂಡ ಸ್ಥಿತಿಯಲ್ಲಿ ಉಳಿಯುವುದೂ ಕೆಲವರಿಗೆ ಬೇಕಾಗಿದೆ' ಎಂದು ವಿವರಿಸುತ್ತಾ, ಶಿಕ್ಷಣ ವ್ಯವಸ್ಥೆಯ ಈ ಹಂತವನ್ನು ನಾವು ಕೈಬಿಡುವುದು ಸಾಧ್ಯವೆ? ಸುಮಾರು ನೂರೈವತ್ತು ವರುಶಗಳ ಈ ಪದ್ದತಿ ನಮಗೆ ಮೈಗೂಡಿದೆಯೇ? ಎಂದು ಅಭಿಪ್ರಾಯ ಪಡುತ್ತಾರೆ. ಶಿಕ್ಷಣ, ಅಧ್ಯಾಪನ ಮತ್ತು

ಕಲಿಕೆಯ ಸಂಬಂಧಗಳಲ್ಲಿ ಸಹಜವಾಗಿಯೆ ಅಪಮಾರ್ಗಗಳು ಬೆಳೆಯುತ್ತಿವೆ. ಶಿಕ್ಷಕರಾದವರು ಎಲ್ಲಿಯವರೆಗೆ ತಮ್ಮ ಮೌಲ್ಯಮಾಪನವನ್ನು ಮಾಡಿಕೊಳ್ಳಲು ಸಿದ್ಧವಾಗುವುದಿಲ್ಲವೋ ಅಲ್ಲಿವರೆಗೆ ಅವರಿಗೆ ತಮ್ಮ ವಿದ್ಯಾರ್ಥಿ ವೃಂದದ ಮೌಲ್ಯಮಾಪನ ಮಾಡಲು ಯಾವ ನೈತಿಕ ಹಕ್ಕೂ ಇಲ್ಲ ಎಂದು ಪ್ರತಿಕ್ರಿಯಿಸುತ್ತಾರೆ. ಹೀಗೆ ಇವತ್ತಿನ ಶಿಕ್ಷಣ, ಪಠ್ಯಕ್ರಮ, ಬೋಧನೆ, ಕಲಿಕೆಯ ಸಂಬಂಧ ಮತ್ತು ಸಂದರ್ಭವನ್ನು ವರ್ತಮಾನದ ಉಪಯೋಗಿ ಪ್ರಶ್ನೆಗಳನ್ನಿಟ್ಟುಕೊಂಡು ಆಲೋಚಿಸುವಾಗ ಅನೇಕ ಸವಾಲುಗಳು ಎದುರಾಗುತ್ತವೆ.

ಕರ್ನಾಟಕದ ಶಿಕ್ಷಣವ್ಯವಸ್ಥೆಯ ಸಂದರ್ಭದಲ್ಲಿ ಕನ್ನಡ ಭಾಶೆ ಮತ್ತು ಕನ್ನಡಸಾಹಿತ್ಯವನ್ನು ಕಲಿಕೆಯ ಪರಿಕರವಾಗಿ ಹೆಚ್ಚುಕಡಿಮೆ ಆಧುನಿಕ ಶಿಕ್ಷಣದ ಆರಂಭಕಾಲದಿಂದಲೂ ಕನ್ನಡವನ್ನು ಬೋಧಿಸುವ ಅಧ್ಯಾಪನ ಸಮುದಾಯ ಮತ್ತು ಕಲಿಯಲು ಆಯ್ಕೆ ಮಾಡಿಕೊಳ್ಳುವ ಕಲಿಕಾರ್ಥಿಗಳು ಅಭ್ಯಾಸ ಮಾಡುತ್ತಲೇ ಬರುತ್ತಿದ್ದಾರೆ. ಹೀಗೆ ಇಲ್ಲಿಯವರೆಗೆ ಭಾಶೆ ಮತ್ತು ಸಾಹಿತ್ಯದ ಕಲಿಕೆಯ ಪರಿಕರವಾದ ಪಠ್ಯಕ್ರಮ ಕನ್ನಡಸಾಹಿತ್ಯ ಅಥವಾ ಕನ್ನಡದಲ್ಲಿರುವ ಸಾಹಿತ್ಯವೇ ಆಗಿದೆ. ಸಾಹಿತ್ಯದ ಬಗೆಗಿನ ತಿಳುವಳಿಕೆ ಅಥವ ಸಾಹಿತ್ಯ ಪರಂಪರೆಯ ತಿಳುವಳಿಕೆಯನ್ನು ಕನ್ನಡ ಭಾಶೆಯ ಬಗೆಗಿನ ಜ್ಞಾನ ಎಂಬ ಗ್ರಹೀತಗಳು ಈ ಪ್ರಕ್ರಿಯೆಯಲ್ಲಿ ಅಧಿಕೃತವಾಗಿಯೇ ಚಾಲನೆಗೊಂಡಿವೆ. ವಸಾಹತು ಭಾರತ/ಕರ್ನಾಟಕವನ್ನು ಎದುರಿಸಲು ಆರಂಭವಾದ ಈ ಬಗೆಯ ಶಿಕ್ಷಣವು ಸ್ವತಂತ್ರಭಾರತ/ಕರ್ನಾಟಕದ ಸಂದರ್ಭದಲ್ಲಿ ಬದಲಾವಣೆಗೆ ಒಳಪಡದಿರುವುದು ಸ್ಪಶ್ಟವಾಗಿ ಕಾಣುವ ಸತ್ಯವಾಗಿದೆ. ಇದು ಸಾಮಾಜಿಕವಾಗಿ ಅಧಿಕಾರ ಸ್ಥಾನವನ್ನು ಕಾಪಾಡಿಕೊಂಡು ಬಂದ ನಿರ್ದಿಶ್ಟ ಸಮುದಾಯದ ಯಜಮಾನಿಕೆಯ ಉಪಾಯವಾಗಿಯೂ ಕಾಣುತ್ತದೆ. ಅಂದರೆ, ಕನ್ನಡಸಾಹಿತ್ಯ ಮತ್ತು ಸಾಹಿತ್ಯ ಪರಂಪರೆಯ ಬಗೆಗಿನ ತಿಳುವಳಿಕೆಯು ಭಾಶಿಕವಾಗಿ ಎದುರಾಗಬೇಕಾದ ಯಾವ ಸಂದರ್ಭಗಳಿಗಾಗಿ ವಿದ್ಯಾರ್ಥಿಗಳನ್ನು ತಯಾರು ಮಾಡುತ್ತದೆ, ಎನ್ನುವ ಪ್ರಶ್ನೆಯು ಬದಲಾಗುತ್ತಿರುವ ಇಂದಿನ ನವ ಆಧುನಿಕತೆಯ ಸಂದರ್ಭದಲ್ಲಿ ತಾನೇ ತಾನಾಗಿ ಎದುರಾಗುತ್ತದೆ. ಯಾಕೆಂದರೆ **ಕಲಿಸುವುದು** ಮತ್ತು **ಕಲಿಯುವುದು** ಎನ್ನುವುದು ಕೇವಲ ನಿರಪೇಕ್ಷವಾದದ್ದಲ್ಲ. ಅನೇಕ ಜಾತಿ, ಕುಲ, ಪ್ರದೇಶ, ಲಿಂಗ ಸಮುದಾಯಗಳ ಶ್ರೇಣೀಕೃತ ಸಂಬಂಧಗಳಿರುವ ಯಾವುದೇ ಸಮಾಜದಲ್ಲಿ ಕಲಿತ ಜ್ಞಾನ ಎನ್ನುವುದು ಸಮಾನ ಅವಕಾಶಗಳನ್ನು ನಿರೀಕ್ಶಿಸುತ್ತದೆ. ಆದರೆ, ಹೀಗೆ ಕಲಿತವರು ಮತ್ತು ಸಮಾಜದ ನಡುವೆ ಸಮಾನ ಅವಕಾಶಗಳನ್ನು ಪಡೆಯುವ ಕೌಶಲ ಜ್ಞಾನವನ್ನು ನಮ್ಮ ಪಠ್ಯಕ್ರಮಗಳು ಸೃಶ್ಟಿಸದೆ ಹೋದಲ್ಲಿ ಕಲಿಸುವ, ಕಲಿಯುವ ಪಠ್ಯಗಳ ಸಂದರ್ಭದಲ್ಲಿ ಅಂತಹ ಯಾವ ಹೊಣೆಗಾರಿಕೆಯೂ ಸ್ಪಶ್ಟವಾಗುವುದಿಲ್ಲ. ಹೀಗಾಗಿ ಒಟ್ಟು

ಸಾಮಾಜಿಕ ಸ್ವರೂಪದ ಹಿನ್ನೆಲೆಯಲ್ಲಿ ಬದುಕನ್ನು ನಿರ್ವಹಿಸಿಕೊಳ್ಳಲು ಇಂಥ ಕಲಿಕೆಯ ಪಠ್ಯಕ್ರಮವು ತಿಳುವಳಿಕೆಯ ಯಾವ ಉಪಯುಕ್ತ ನೆಲೆಯನ್ನು **ವ್ಯಕ್ತಿ**ಯ ಮುಂದಿಡುತ್ತದೆ? ಶಿಕ್ಷಣದ ಸನ್ನಿವೇಶದಲ್ಲಿದ್ದುಕೊಂಡು ಕನ್ನಡ ಭಾಷೆ, ಸಾಹಿತ್ಯಗಳ ಅಧ್ಯಾಪನ ಮತ್ತು ಕಲಿಕೆಯನ್ನು ತೀವ್ರವಾಗಿ ಗಮನಿಸುತ್ತಿರುವ ಹಿನ್ನೆಲೆಯಲ್ಲಿ ಕನ್ನಡ ಭಾಷೆಯ ಕಲಿಕೆಯ ಪಠ್ಯಕ್ರಮಗಳನ್ನು ಮುಖ್ಯಮಾಡಿಕೊಂಡು ಕನ್ನಡ ಭಾಷೆಯ ಕಲಿಕೆಯನ್ನು ಕುರಿತ ಇಂಥ ಗ್ರಹೀತಗಳನ್ನು ಪರಿಶೀಲಿಸಿಕೊಳ್ಳಬೇಕು ಅನಿಸುತ್ತದೆ. ಇಂಥ ಸನ್ನಿವೇಶದ ಹಿನ್ನೆಲೆಯಲ್ಲಿ ಪ್ರಸ್ತುತ **ಕನ್ನಡ ಭಾಷಾ ಕಲಿಕೆಯ ಪದವಿ ಪಠ್ಯಗಳು ಮತ್ತು ಸಾಮಾಜಿಕ ಹೊಣೆಗಾರಿಕೆಯ ತೊಡಕುಗಳು** ವಿಶಯದ ಅಧ್ಯಯನವು ರೂಪುಗೊಳ್ಳುತ್ತಿದೆ.

### ೧.೧ ಅಸಲಿಗೆ, ಕನ್ನಡ ಭಾಷೆಯ ಕಲಿಕೆ ಅನ್ನುವುದು ಏನು?

ಮೊದಲನೆಯದಾಗಿ, ಪದವಿ ಹಂತದ ಕಲಿಕೆಯ ಸಂದರ್ಭದಲ್ಲಿ **ಕನ್ನಡ ಭಾಷೆಯ ಕಲಿಕೆ** ಎಂದರೆ ಏನು ಎಂಬ ಪ್ರಶ್ನೆಯನ್ನು ನಿರ್ವಚಿಸಿಕೊಂಡಿರುವುದು ಕರ್ನಾಟಕದ ಶಿಕ್ಷಣ ವ್ಯವಸ್ಥೆಯಲ್ಲಿ ಎಲ್ಲೂ ಕಾಣುವುದಿಲ್ಲ. ಎನ್ನುವುದು ಆಶ್ಚರ್ಯ ಮತ್ತು ಆತಂಕದ ವಿಚಾರವೆ ಆಗಿದೆ. ಇದನ್ನು ಪ್ರಸ್ತುತ ಅಧ್ಯಯನವು ಗಂಭೀರವಾಗಿ ಪರಿಗಣಿಸುತ್ತದೆ. ಪಠ್ಯಕ್ರಮಗಳ ಕುರಿತಾಗಿ ಸಾಂಸ್ಥಿಕವಾಗಿ ನಡೆಯುವ ಚಟುವಟಿಕೆಗಳು ಮತ್ತು ನಾಡು-ನುಡಿ, ಸಮಾಜ-ಬದುಕು ಕುರಿತ ಚರ್ಚೆಗಳಲ್ಲಿ ವೈಯುಕ್ತಿಕವಾಗಿ ವ್ಯಕ್ತವಾಗಿರುವ ಪ್ರತಿಕ್ರಿಯೆಗಳನ್ನು ಇಟ್ಟುಕೊಂಡು ಇದನ್ನು ಗ್ರಹಿಸುವ ಪ್ರಯತ್ನವನ್ನು ಮಾಡುತ್ತಲೆ ಈ ಅಧ್ಯಯನವನ್ನು ನಡೆಸಬೇಕಾಗುತ್ತದೆ.

ಎರಡನೆಯದಾಗಿ, ಈ ಹಿನ್ನೆಲೆಯಲ್ಲಿ, ಪ್ರಸ್ತುತ ಸಾಮಾಜಿಕ ಸಂದರ್ಭದಲ್ಲಿ ಕನ್ನಡ ಭಾಷೆ ಎದುರಿಸುತ್ತಿರುವ ಆತಂಕಗಳು, ಸಂದೇಹಗಳು, ಸವಾಲುಗಳು ಯಾಕೆ ಹುಟ್ಟಿಕೊಂಡಿವೆ? ಜಾಗತೀಕರಣದ ಪ್ರಕ್ರಿಯೆಗಳಲ್ಲಿ **ಕನ್ನಡ ಶಿಕ್ಷಣ ವ್ಯವಸ್ಥೆ** ತನ್ನನ್ನು ಹೇಗೆ ಹೊಣೆಯಾಗಿಸಿಕೊಳ್ಳುತ್ತದೆ? ಎನ್ನುವುದು. ಇಂದು ಕನ್ನಡ ಭಾಷೆ ತಾನು ಒಡ್ಡಿಕೊಳ್ಳಲೇಬೇಕಾಗಿರುವ ಸವಾಲನ್ನು ತಂತ್ರಜ್ಞಾನ ಕ್ರಾಂತಿಯು ಮತ್ತಷ್ಟು ಗಾಢವಾಗಿಸುತ್ತಿದೆ[೨]. ಯಾಕೆಂದರೆ, ವಿಜ್ಞಾನ ಮತ್ತು ತಂತ್ರಜ್ಞಾನ ಎನ್ನುವ ಪರಿಭಾಷೆಯು ಅತ್ಯಾಧುನಿಕವಾದ ನಾಗರಿಕ ಪ್ರಜೆಯನ್ನು ಸಂಘಟಿಸುವಲ್ಲಿ ಹಿಂಸೆಯನ್ನು ಸಹ ಸಂಘಟಿಸುವ ರಹದಾರಿಯಾಗಿ ಮಾರ್ಪಟ್ಟಿದೆಯಾದ್ದರಿಂದ ಅದನ್ನು ಭಾಶಿಕವಾಗಿ ನಿರ್ವಹಿಸಿಕೊಳ್ಳುವುದು ಮುಖ್ಯವೇ ಆಗುತ್ತದೆ. ಜೈವಿಕ ತಂತ್ರಜ್ಞಾನ, ನ್ಯಾನೊ ತಂತ್ರಜ್ಞಾನ ಮೊದಲಾಗಿ ತಂತ್ರಜ್ಞಾನದಿಂದ ದೂರ ಇರಲಾಗದ

ಜೀವನಕ್ರಮದ ಬದಲಾಗುತ್ತಿರುವ ಸಾಮಾಜಿಕ ವಾತಾವರಣದಲ್ಲಿ ಭಾಶಿಕವಾದ ಸವಾಲುಗಳನ್ನು ಸಮರ್ಥವಾಗಿ ನಿಭಾಯಿಸಿಕೊಳ್ಳುವುದು ಅಗತ್ಯವಾಗುತ್ತದೆ. ತಂತ್ರಜ್ಞಾನ ಎಂದರೆ ಇಂಗ್ಲಿಶ್, ಇಂಗ್ಲಿಶ್ ಎಂದರೆ ಹೊಸ ಹೊಸ ಜ್ಞಾನ ಎನ್ನುವ ತಿಳುವಳಿಕೆಯು ತನ್ನನ್ನು ಸ್ಥಾಪಿಸಿಕೊಳ್ಳಲು ಹವಣಿಸುತ್ತಿರುವುದರಿಂದಾಗಿ, ಜ್ಞಾನ ಎಂದರೆ **ಅಧಿಕಾರ ಮತ್ತು ಹಣ** ಎನ್ನುವ ಕ್ರಿಯಾಯೋಜನೆಯು ಹಿಂದೆಂದಿಗಿಂತಲೂ ಇವತ್ತಿನ ಸಮಾಜ ವ್ಯವಸ್ಥೆಯಲ್ಲಿ ಹೆಚ್ಚೆಚ್ಚು ಪ್ರವೃತ್ತವಾಗುತ್ತಿರುವುದು ಕಣ್ಣೆದುರಿನ ಸಂಗತಿಯೇ ಆಗಿದೆ. ಇದು ಸಹಜವಾಗಿ ಶಿಕ್ಶಣ ವ್ಯವಸ್ಥೆಯನ್ನೂ ಪ್ರಭಾವಿಸುತ್ತಿದೆ. ಹೀಗಾಗಿ ಕನ್ನಡ ಭಾಶೆಯ ಕಲಿಕೆ ಮತ್ತು ಬಳಕೆಯ ಸಂಬಂಧದ ಪ್ರಶ್ನೆಗಳು ಅತ್ಯಂತ ಸೂಕ್ಶ್ಮವೂ ಮತ್ತು ಗಮನಿಸಲೇಬೇಕಾದ ವಿಚಾರವಾಗಿದೆ.

ಮೂರನೆಯದಾಗಿ, ಈ ವಿದ್ಯಮಾನವು ಕನ್ನಡ ಭಾಶೆಯ ಮೇಲಿನ **ಅಭಿಮಾನ**ವನ್ನು ಸಂಘಟಿಸುವಲ್ಲಿ ಮಾತ್ರ ಪರ್ಯಾವಸಾನಗೊಳ್ಳುವುದು. ಭಾಶೆಯ ಕುರಿತಾಗಿ ಭಾವನಾತ್ಮಕವಾದ ಪ್ರಚೋಧನೆಗಳನ್ನು ಮಾತ್ರ ನೀಡುತ್ತ ಸಂಭ್ರಮಿಸುವ ಹೊಣೆ ಇದು. ತಂತ್ರಜ್ಞಾನ ಮೂಲವಾದ 'ಜಾಗತಿಕ ಜ್ಞಾನ'ದ ಬಗೆಗಿನ ಆವೇಶವು ಇಂಗ್ಲಿಶನ್ನು ಬೆನ್ನಿಗಂಟಿಸಿಕೊಂಡಿದ್ದು, ಗಳಿಕೆಯ ಸಾಧನವಾಗಿಸಿಕೊಳ್ಳುವ ಪ್ರಯತ್ನಗಳಿಂದಾಗಿ ಇಂಗ್ಲಿಶ್ ಮಾರಾಟದ ವಸ್ತುವಾಗಿ ಕೋಚಿಂಗ್ ಕ್ಲಾಸುಗಳ ಮೂಲಕ ಬಿಕರಿಯಾಗುತ್ತದೆ. ಈ ವ್ಯವಹಾರಿಕ ವಾಸ್ತವವು ಬೌತಿಕ ಮತು ಬೌದ್ಧಿಕ ಮಾರುಕಟ್ಟೆಯ ಬೆನ್ನುಬಿದ್ದಿರುವ ಮಧ್ಯಮ ವರ್ಗದ ಮೂಲಕ ಅತ್ಯಂತ ಸುಲಭವಾಗಿ ಜಾರಿಯಾಗುತ್ತದೆ. ಇದರಲ್ಲಿ ಸ್ಪರ್ದಿಸಲಾಗದವರನ್ನು 'ಕನ್ನಡಿಗರಾಗಿ ಕನ್ನಡ ನಾಡಲ್ಲಿ ಹುಟ್ಟಿ, ಕನ್ನಡ ಭಾಶೆಯ ಬಗ್ಗೆ, ಕನ್ನಡಸಾಹಿತ್ಯ, ಸಾಹಿತಿಗಳ ಬಗ್ಗೆ ಹೆಮ್ಮೆಯನ್ನು ಪ್ರದರ್ಶಿಸುವ ಕನ್ನಡ ಪ್ರತಿನಿಧಿಗಳನ್ನಾಗಿಸಿ ಕನ್ನಡದ ಹೊರೆಯನ್ನು ಹೊರಿಸುತ್ತದೆ. ಮಕ್ಕಳನ್ನು ಕನ್ನಡ ಶಾಲೆಗಳಿಗೆ ಸೇರಿಸದ ಕನ್ನಡ ಅಧ್ಯಾಪಕರನ್ನು ಕನ್ನಡ ದ್ರೋಹಿಗಳಾಗಿ ಕಾಣಲಾಗುತ್ತದೆ. ಹೀಗೆ ಮಾತ್ರವೇ ಅಲ್ಲದೆ, ಕಲಿಕಾರ್ತಿಗಳು ಆಯ್ಕೆ ಮಾಡಿಕೊಳ್ಳುವ ಕೆಲವು ಪದವಿ ಕೋರ್ಸುಗಳು ಕನ್ನಡ ನೆಲಕ್ಕೆ ಸಂಬಂಧಪಟ್ಟವಲ್ಲದಂತೆಯೂ ಕೆಲವು ಕೋರ್ಸುಗಳು ಕನ್ನಡ ನೆಲದವೇ ಅನ್ನುವಂತೆಯೂ ಕಟ್ಟಿಕೊಡಲಾಗುತ್ತದೆ. ಹೀಗಾಗಿ ಕನ್ನಡ ತರಗತಿ ಮತ್ತು ಕನ್ನಡ ಕಲಿಕೆಯೆನ್ನುವುದು ಇತರೆ ವಿಶಯಗಳ ಅಭ್ಯಾಸದ ಒತ್ತಡದಲ್ಲಿ ರಿಲ್ಯಾಕ್ಸ್ ಅನ್ನು ಒದಗಿಸುವ ವಿದ್ಯಮಾನವನ್ನಾಗಿ ಮಾತ್ರ ಕಾಣಲಾಗುತ್ತದೆ. ಇದರ ಇನ್ನೊಂದು ಕೊನೆಯೆಂದರೆ, ಬೋಧನೆಯಲ್ಲಿ ಕನ್ನಡ ಭಾಶೆ, ಸಾಹಿತ್ಯ ಪರಂಪರೆಗಳಿಗೆ ಕಲಿಕಾರ್ತಿಗಳನ್ನು ಓಪನಪ್ ಮಾಡುವ ಸಾಂಸ್ಕೃತಿಕ ಹೊಣೆಯಾಗಿ

ಕಟ್ಟಿಕೊಳ್ಳುತ್ತಾ, ಕಲಿಕಾರ್ಥಿಗಳನ್ನು ಭಾಶಿಕವಾಗಿ ಕತ್ತಲಲ್ಲಿಡುವ ಕೆಲಸವನ್ನು ನಿರಂತರವಾಗಿ ಕಾಯ್ದುಕೊಂಡು ಬರಲಾಗುತ್ತದೆ.

ನಾಲ್ಕನೆಯದಾಗಿ, ಕನ್ನಡ ಕಲಿಕೆಯನ್ನು **ಚಾರಿತ್ರಿಕ** ಸಂಗತಿಗಳನ್ನಿಟ್ಟುಕೊಂಡು ಬೇರೊಂದು ಬಗೆಯಲ್ಲಿ ಕಟ್ಟಲಾಗುತ್ತದೆ. ಅದೆಂದರೆ, ಕ್ರಿಸ್ತಶಕ ೫ನೇ ಶತಮಾನದಿಂದ ೨೦ನೇ ಶತಮಾನದ ಆರಂಭದವರೆಗಿನ ಪ್ರಾಚೀನ ಕನ್ನಡ ಭಾಶೆಯ ಚಟುವಟಿಕೆಗಳು ಎಲ್ಲ ಕಾಲದ ಕನ್ನಡಿಗರ ನೆನಪುಗಳ ಭಾಗವಾಗಬೇಕು ಎನ್ನುವುದು. ಅಲ್ಲದೆ, ಏಕೀಕೃತ ಕರ್ನಾಟಕ, ಏಕೀಕೃತ ಕನ್ನಡಕ್ಕಾಗಿ ಹೋರಾಟಕ್ಕೆ ತೊಡಗಿದಂದಿನಿಂದ ಇವತ್ತಿನವರೆಗಿನ ಹೊಸಗನ್ನಡ ಚಟುವಟಿಕೆಗಳನ್ನು ವರ್ತಮಾನದ ಕಲಿಕಾರ್ಥಿಗಳ ಜ್ಞಾನದ ಭಾಗವಾಗಿಸಿ ಜೊತೆಯ ಭಾಶೆಗಳ ಸಂದರ್ಭವನ್ನು ಶತ್ರುವಾಗಿಸುತ್ತ ಹೋರಾಟವನ್ನು ನಿರಂತರವಾಗಿ ಕಟ್ಟಬೇಕು ಎನ್ನುವ ಒತ್ತಡ. ಕನ್ನಡ ಭಾಶೆಯ ಪಠ್ಯಕ್ರಮಗಳಲ್ಲಿನ ಕನ್ನಡ ನಾಡು ನುಡಿಯನ್ನು ಕುರಿತ ಪಠ್ಯಗಳಲ್ಲಿ ಇದು ಸ್ಪಶ್ಟವಾಗಿ ಕಾಣುತ್ತದೆ. ಈ ಮೂಲಕ ಯಾವ ಕನ್ನಡವನ್ನು, ಯಾರ ಕನ್ನಡವನ್ನು ಕಲಿಕಾರ್ಥಿಗಳಿಗೆ ಯಾಕೆ ಪರಿಚಯಿಸಬೇಕೆನ್ನುವ ಪ್ರಶ್ನೆಗಳನ್ನು ಗುಪ್ತವಾಗಿಯೇ ಇರಿಸಿ ಕನ್ನಡಿಗರ ಗುರುತನ್ನು ಉದಾರವಾಗಿ ಕಟ್ಟಿಕೊಡಲಾಗುತ್ತದೆ. ಹೀಗೆ ವಸಾಹತು ಆಧುನಿಕತೆಯು ಒದಗಿಸುವ ಸ್ಥಾನಮಾನಗಳಲ್ಲಿ ಕನ್ನಡವನ್ನು ಬ್ರಾಹ್ಮಣ್ಯ ಮಾಡಿಕೊಂಡು ಸಾಕುತ್ತಾ, ಅದನ್ನೆ ಕನ್ನಡ ಐಡೆಂಟಿಟಿಯಾಗಿ ಕಟ್ಟಿಕೊಳ್ಳುತ್ತಾ, ಶ್ರೇಣೀಕೃತವಾದ ಅಧಿಕಾರ ಸಂಬಂಧಗಳನ್ನು ಗಟ್ಟಿಯಾಗಿಸುತ್ತಿರುವುದು ಇಂದು-ನೆನ್ನೆಯ ಸಂಗತಿಯಾಗೇನೂ ಉಳಿದಿಲ್ಲ. ಇದು ೧೯ನೆಯ ಶತಮಾನದ ಉತ್ತರಾರ್ಧದಿಂದಲೂ ನಾಡು-ನುಡಿಯ ಎಚ್ಚರದ ಗುರುತುಗಳನ್ನು ಏಕರೂಪವಾಗಿಸುವ ನೆಪದಲ್ಲಿ ಕಟ್ಟಿಕೊಳ್ಳಲಾಗಿರುವ ಅಂಶವೇ ಆಗಿದೆ. ಇದನ್ನು, ೨೦ನೆಯ ಶತಮಾನದ ಆರಂಭದ ಹೊತ್ತಿಗೆ ಕರ್ನಾಟಕದಲ್ಲಿ ಆರಂಭವಾದ ಶಿಕ್ಶಣದ ಕಲಿಕಾ ಚಟುವಟಿಕೆಗಳಲ್ಲಿ ಅನೇಕ ಲೇಖಕರು ಮತ್ತು ನಾಡು-ನುಡಿಗಾಗಿ ಹೋರಾಟಗಳನ್ನು ಕಟ್ಟಿದವರ ಚಿಂತನೆಗಳ ಮೂಲಕವೆ ಅಧಿಕೃತಗೊಳ್ಳುವುದನ್ನು ಕಾಣಬಹುದಾಗಿದೆ. ಹೀಗಾಗಿ ಕನ್ನಡ ಭಾಶೆಯ ಕಲಿಕೆಯ ಸಂದರ್ಬದಲ್ಲಿನ ನಮ್ಮ ಪಠ್ಯಕ್ರಮವೂ ಇಂಥ ತಿಳುವಳಿಕೆಯ ಭಾಗವಾಗಿಯೇ ಬಂದಿದೆ ಎನ್ನುವುದನ್ನು ಕೆಲವು ಕುತೂಹಲಗಳ ನಡುವೆಯೇ ಪರಿಶೀಲಿಸಬೇಕಾಗುತ್ತದೆ.

ಐದನೆಯದಾಗಿ, ಒಂದು ಸಂಪ್ರದಾಯದ ಹಾಗೆ **ಏಕರೂಪಿ**ಯಾಗಿ ಕಟ್ಟಿರುವ ಕನ್ನಡ ಕಲಿಕೆಯ ವ್ಯವಸ್ಥೆಯನ್ನು ಕನ್ನಡ ಸಮುದಾಯಗಳ ನಡುವೆ ಹೀಗೆ ಉಳಿಸಿಕೊಂಡು ಬಂದಿರುವ **ರಾಜಕಾರಣ** ಯಾವುದು ಎನ್ನುವುದು. ಈ ಪ್ರಶ್ನೆಯು, ಕನ್ನಡ ಭಾಶೆಯ ಪಠ್ಯಕ್ರಮ ಮತ್ತು

ಕಲಿಕೆಯನ್ನು, ತಿರಸ್ಕಾರಕ್ಕೂ ಮತ್ತು/ಅಥವಾ ಪುರಸ್ಕಾರಕ್ಕೂ ಒಳಗು ಮಾಡುತ್ತಲೇ ಸಂಭಾಳಿಸಿಕೊಂಡು ಹೋಗಬೇಕಾಗಿ ಬಂದಿರುವ ಅಗತ್ಯವನ್ನು ಕುರಿತದ್ದು. ಅಂದರೆ, ಬೇಕಾದ ಕನ್ನಡ ಭಾಶೆಯ ಜ್ಞಾನ ಯಾವುದು, ಯಾಕೆ ಮತ್ತು ಹೇಗೆ ಎಂಬುದನ್ನು ಸ್ಪಶ್ಟಪಡಿಸಿಕೊಳ್ಳುವಲ್ಲಿ ಹಿಂದೆ ಸರಿಯುತ್ತಿರುವ ಹುನ್ನಾರ ಯಾವ ಬಗೆಯದು ಎಂಬ ಪ್ರಶ್ನೆಗಳನ್ನು ಮರೆಯಲ್ಲಿಟ್ಟು ವೇಶ ತೊಡುವುದು, ತೊಡಿಸಿ ಕುಣಿಸುವುದು ಯಾವತ್ತೂ ಯಜಮಾನಿಕೆಯ ಮುಖ್ಯ ಲಕ್ಶಣವೇ ಆಗಿರುತ್ತದೆಯಾದ್ದರಿಂದ ಇದನ್ನು ವಸಾಹತುಶಾಹಿ ಆಧುನಿಕತೆಯ ವಿದ್ಯಮಾನಗಳನ್ನು ಎದುರಿಸುವ ತನ್ನ ಉಪಾಯಗಳಿಗೆ ಅನುಗುಣವಾಗಿ ಕಲಿಕಾ ಸಮುದಾಯದ ಮೂಲಕ ಸಾಂಘಿಕ ಪ್ರಜ್ನೆಯನ್ನಾಗಿ ಸ್ಥಾಪಿಸಲು ಹವಣಿಸಲಾಗುತ್ತದೆ. ಇದಕ್ಕೆ ಪೂರಕವಾಗಿ ಸಂಘಟಿಸಲಾದ ಕನ್ನಡ ಭಾಶೆ ಮತ್ತು ಸಾಹಿತ್ಯ ಪರಂಪರೆಯನ್ನು **ನೆನಪು** ಆಗಿಸಲು ಪ್ರಯತ್ನಿಸುತ್ತದೆ. ಹೀಗಾಗಿ ತಮ್ಮ ಆಂತರಿಕ ಚಹರೆಯ ಹೆಸರಲ್ಲಿ ನಿಗದಿಪಡಿಸಿದ ಸಾಹಿತ್ಯವನ್ನು ಕಲಿಯಲು ಕಲಿಕಾರ್ಥಿಗಳಿಗೆ ಕೌತುಕ ಸನ್ನಿವೇಶಗಳನ್ನು ಸೃಶ್ಟಿಸಲಾಗುತ್ತದೆ[೬]. ಇದರಿಂದಾಗಿ ಬಳಕೆಗೆ ಬೇಕಾದ ಕನ್ನಡ ಭಾಶೆಯ ಜ್ಞಾನವನ್ನು ಸಹಜವಾಗಿಯೇ ಹಿಂದಕ್ಕೆ ತಳ್ಳಲ್ಪಟ್ಟಿದೆ ಎನ್ನುವುದನ್ನು ಗಂಭೀರವಾಗಿ ಪರಿಶೀಲಿಸುವ ಅಗತ್ಯವಿದೆ.

ಆರನೆಯದಾಗಿ, ಕಲಿಕೆಯ ನೆಲೆಯ ಇಂಥ ಆಂತರಿಕ ಗ್ರಹೀತಗಳಿಗೆ ಪೂರಕವಾಗಿ ಇನ್ನೊಂದು ವಾದವನ್ನು ಎದುರಿಗಿಡಲಾಗುತ್ತದೆ. ಅದೆಂದರೆ, ಕನ್ನಡ ಭಾಶೆಯ ಬಗೆಗಿನ ಜ್ಞಾನವನ್ನು **ಪ್ರಾಥಮಿಕ** ಮತ್ತು **ಪ್ರೌಢಶಾಲೆ**ಯ ಶಿಕ್ಶಣದಲ್ಲಿಯೇ ಕಲಿಸಲಾಗುತ್ತದೆ. ಆದ್ದರಿಂದಾಗಿ ಉನ್ನತ ಶಿಕ್ಶಣದಲ್ಲಿ ಭಾಶಿಕ ತಿಳುವಳಿಕೆಯ ಅಗತ್ಯವಿಲ್ಲ ಅನ್ನುವುದು. ಇದ್ದರೂ ಅದನ್ನು ಇತರೆ ವಿಶಯಾದಾರಿತ ಪತ್ರಿಕೆಗಳಂತೆ ಪ್ರಮುಖವಾಗಿ ಗಮನಿಸಬೇಕಿಲ್ಲ ಅನ್ನುವುದು. ಹೀಗೆ ಮುಂದುವರಿದ ಶಿಕ್ಶಣದಲ್ಲಿ ಕನ್ನಡ ಭಾಶೆಯ ಕಲಿಕೆಯನ್ನು ಪರಿಗಣಿಸಬೇಕಾದ ವಿಶಯವಲ್ಲ ಎಂಬ ಧೋರಣೆಯು ಭಾಶೆ, ಸಾಹಿತ್ಯ ಪರಂಪರೆಯ ನೆನೆಪಿನ ಕಾರಣವನ್ನು ಗಟ್ಟಿಗೊಳಿಸುವುದೇ ಆಗುತ್ತದೆ. ಹೀಗಾಗಿ **ಸ್ಮೃತಿ**ಯ ಕಾರಣವಾಗಿ ಚಾಲನೆಗೊಳ್ಳುವ ಪಠ್ಯಕ್ರಮ, ಬೋಧನೆ ಮತ್ತು ಕಲಿಕೆಗಳ ಮೂಲಕ ಸ್ಥಾಪಿತ ಯಜಮಾನಿಕೆಯನ್ನು ವ್ಯವಸ್ಥೆಯ ಭಾಗವಾಗಿ ಕಾಪಾಡಿಕೊಳ್ಳುವುದನ್ನು ಜೀವಂತವಾಗಿರಿಸಿಕೊಳ್ಳಲಾಗುತ್ತದೆ ಅನ್ನುವುದನ್ನು ವಿವರಿಸಿಕೊಳ್ಳಬೇಕಾಗುತ್ತದೆ.

ಈ ಹಿನ್ನೆಲೆಯಲ್ಲಿ, ಆಧುನಿಕವಾದ ಶೈಕ್ಶಣಿಕ ಚಟುವಟಿಕೆಗಳಲ್ಲಿ ತೀವ್ರವಾಗಿ ತೊಡಗಿಸಿಕೊಂಡ ಒಂದು ನಿರ್ದಿಶ್ಟ ಜಾತಿ ಸಮುದಾಯವು ಸಾಂಪ್ರದಾಯಿಕವಾಗಿ ಆಚರಿಸಿಕೊಂಡು

ಬಂದ ಒಪ್ಪಿತ ಮೌಲ್ಯಗಳು ಆಧುನಿಕ ಯಜಮಾನಿಕೆಯ ಭಾಗವೇ ಆದ ಪಠ್ಯಕ್ರಮಗಳು ಮತ್ತು ಪಠ್ಯಗಳಲ್ಲಿ ಜಾರಿಗೊಂಡಿರುವುದನ್ನು ಪರಿಶೀಲಿಸಬೇಕಾಗುತ್ತದೆ. ಆಧುನಿಕ ಶಿಕ್ಷಣದ ಆರಂಭಕಾಲದಿಂದಲೇ ಈ ವಿದ್ಯಮಾನಗಳು ರೂಢಿಗೊಂಡಿವೆಯಾದ್ದರಿಂದ, ಆಧುನಿಕವಾಗಿ ಬದಲಾವಣೆಗೆ ಒಳಗಾಗುತ್ತಿರುವ ಕನ್ನಡ ಸಮಾಜದ ಅಗತ್ಯಗಳು ಎಂದು ಸಂಕಥಿಸುವ ಕನ್ನಡ ಭಾಶೆಯನ್ನು ಅಸ್ಪೃಶ್ಯತೆಯಿಂದ ದೂರವಿಟ್ಟು ನೋಡುವ ದೃಶ್ಟಿಯು ಬಹಳ ಹಿಂದಿನಿಂದಲೇ ವ್ಯವಸ್ಥಿತವಾಗಿ ಪ್ರವೃತ್ತವಾಗಿದೆ ಎಂಬುದನ್ನು ವಿಶ್ಲೇಶಿಸಿ ನೋಡಬೇಕಾಗುತ್ತದೆ. ಈ ಕಾರಣವಾಗಿ ವರ್ತಮಾನದ ವಿದ್ಯಮಾನಗಳಿಗೆ ಬೇಕಾದ ಸಂವಹನ ಶಕ್ತಿಯನ್ನು ಅದೇ **ಸ್ಥಾಪಿತ ಕನ್ನಡ ಭಾಶೆ**ಯಲ್ಲಿ ರೂಢಿಸಿಕೊಳ್ಳಲು ಒತ್ತಾಯಪೂರ್ವಕವಾಗಿ ಹೇರುವುದನ್ನು ಸ್ಪಶ್ಟವಾಗಿ ಗುರುತಿಸಲು ಅವಕಾಶವಿದೆ. ಇದರ ಜೊತೆಯಲ್ಲಿ ಕಲಿಸುವವರ ಮತ್ತು ಕಲಿಕಾರ್ಥಿಗಳ ನಡುವಿನ ಅಧಿಕಾರ ಸಂಬಂಧಗಳೇ ಮುನ್ನೆಲೆ ಪಡೆಯುತ್ತವೆಯಾದ್ದರಿಂದ ಕಲಿಸುತ್ತಿರುವುದು ಏನು, ಕಲಿಯುತ್ತಿರುವುದು ಯಾಕೆ, ಕಲಿಸುತ್ತಿರುವುದು ಹೇಗೆ, ಎಂಬ ಪ್ರಶ್ನೆಗಳು ಹಿಂದೆ ಸರಿದು ಪಠ್ಯಕ್ರಮ ಮತ್ತು ಬೋಧನೆಯ ಚಟುವಟಿಕೆಗಳು ಅಸ್ಪಶ್ಟವಾಗಿಯೇ ಉಳಿಯುವಂತಾಗುತ್ತದೆ. ಇದು ಕಲಿಕೆಯ ಒಟ್ಟು ವ್ಯವಸ್ಥೆಯನ್ನು ಕನ್ನಡ ಸಮಾಜದ ಸಂದರ್ಭದೊಂದಿಗಿಟ್ಟು ಶೋಧಿಸಲು ಒತ್ತಾಯಿಸುವುದರಿಂದ ಪ್ರಸ್ತುತ ಅಧ್ಯಯನ ಮಹತ್ವವನ್ನು ಪಡೆದುಕೊಳ್ಳುತ್ತದೆ. ಆದ್ದರಿಂದಾಗಿ **ಕನ್ನಡ ಭಾಶಾ ಕಲಿಕೆಯ ಪದವಿ ಪಠ್ಯಗಳು ಮತ್ತು ಸಾಮಾಜಿಕ ಹೊಣೆಗಾರಿಕೆಯ ತೊಡಕುಗಳು** ಕುರಿತ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

ಈ ಮೇಲೆ ಪ್ರಸ್ತಾಪಿಸಿರುವ ವಿಚಾರಗಳ ಹಿನ್ನೆಲೆಯಲ್ಲಿ ಗಮನಿಸಿದಾಗ, ಉನ್ನತ ಶಿಕ್ಷಣದ ಸಂದರ್ಭದಲ್ಲಿ ಕನ್ನಡ ಭಾಶಾ ಕಲಿಕೆಯ ಪಠ್ಯಕ್ರಮಗಳು, ಪಠ್ಯಗಳು, ಪಠ್ಯಗಳ ರಚನೆಕಾರರು ಮತ್ತು ಪಠ್ಯ ರಚನಾ ಮಂಡಳಿಗಳು, ವಿಶ್ವವಿದ್ಯಾಲಯಗಳ ಜವಾಬ್ದಾರಿಗಳ ಕುರಿತಾಗಿ ಅಪಸ್ವರಗಳು ಆಪಾಧನೆಗಳಿರುವುದು ಸಹಜವೇ ಆಗಿದೆ. "ಪಠ್ಯಪುಸ್ತಕವನ್ನು ಬರೆಯುವುದಕ್ಕಿಂತಲೂ ಸುಲಭವಾದ ಕೆಲಸ ಬೇರೊಂದಿಲ್ಲ. ಯಾರು ಬೇಕಾದರೂ ಪಠ್ಯಪುಸ್ತಕವನ್ನು ಬರೆಯಬಹುದು. ಬರೆಯಿಸುವವರು ಏನು ಬರೆದುಕೊಟ್ಟರೂ ತೃಪ್ತರಾಗುತ್ತಾರೆ"'. ಎಂಬ ಮಾತುಗಳು ಕೇಳಿ ಬರುತ್ತಲೇ ಇರುತ್ತವೆ. ಇರುವ ಪಠ್ಯಗಳು ಒಂದು ಸಾಮಾಜಿಕ ಸನ್ನಿವೇಶವನ್ನು ಮರೆಮಾಚಿ **ಸ್ವಯಂತಂತ್ರವಾದಿ** ವೇಶವನ್ನು ತೊಟ್ಟು ಸಾಮಾಜಿಕವಾದ ಅಧಿಕಾರವನ್ನು ಕಾಪಾಡಿಕೊಳ್ಳುತ್ತವೆಯಾದ್ದರಿಂದ, ಪಠ್ಯ ಮತ್ತು ಸಾಮಾಜಿಕ ಸಂಬಂಧಗಳಲ್ಲಿ ಭಿನ್ನತೆ ಏರ್ಪಟ್ಟು ಪಾಠ ಅನಗತ್ಯವಾದ ಹೊರೆಯಾಗುತ್ತದೆ. ನೇಮಕಗೊಳ್ಳುವ ಪಠ್ಯಪುಸ್ತಕ

ಸಮಿತಿಯು ತಮ್ಮ, ತಮ್ಮವರ(ಜಾತಿ, ಕುಲ, ಪ್ರದೇಶ, ಲಿಂಗ ಮೊದಲಾಗಿ) ಬರಹಗಳನ್ನು ಸೇರಿಸುವುದು ಮತ್ತು ಸಮರ್ಥಿಸುವುದು ಸುಲಭವೂ ಆಗಿ ಪ್ರಜಾಸತ್ತಾತ್ಮಕ ಮೌಲ್ಯಗಳು ಮತ್ತಷ್ಟು ಹಿಂದೆ ಸರಿಯುತ್ತಲೇ ಇರುತ್ತವೆ. ಶಿಸ್ತಿನ ಅಗತ್ಯಕ್ಕಾಗಿ 'ಪಾಠ ಕ್ಲಿಷ್ಟವಾಗಿರಬೇಕು' ಎಂಬ ಸಲಹೆ, 'ಕಲಿಕೆಯ ವಿವಿಧ ಹಂತಗಳ ನಡುವೆ ಅನುಕ್ರಮವಾದ ಸಂಬಂಧವಿಲ್ಲ*' ಎಂಬ ಅಸಮುದಾನಗಳು ನಿರಂತರವಾಗಿ ಅಭಿವ್ಯಕ್ತಿಯನ್ನು ಪಡೆಯುತ್ತಿರುತ್ತವೆ. ಆದರೆ ಇದು ಎಚ್ಚರಿಕೆಯಂತೆ ಕಾಣುತ್ತಲೇ ಹೊಣೆಗಾರಿಕೆಯಿಂದ ಹಿಂದೆ ಸರಿದು ಸ್ಥಾಪಿತ ಮೌಲ್ಯಗಳನ್ನು ಬಲಪಡಿಸುವ ಮತ್ತೊಂದು ವಿಧಾನವೇ ಆಗುತ್ತದೆ. ಆದ್ದರಿಂದಲೆ ಔಪಚಾರಿಕ ಶಿಕ್ಷಣದ ಭಾಗವಾಗಿ ಬಳಸುವ ಇಂಥ ಪಠ್ಯಗಳ ಕುರಿತ ಮಾತುಗಳಲ್ಲಿ ವ್ಯಕ್ತವಾಗುವಂತೆ: ಪಠ್ಯಕ್ರಮವನ್ನು ನಿರ್ಧರಿಸುವ ನಮ್ಮ ಸಾಮಾಜಿಕ ವಾತಾವರಣ ಕಲುಶಿತಗೊಂಡಿರುವ ಬಗ್ಗೆ, ನಿಗದಿಯಾದ ಪಠ್ಯಕ್ರಮ ಸಾಮಾಜಿಕ ಸಂಬಂಧಗಳನ್ನು ನಿಭಾಯಿಸುವುದಿರುವ ಬಗ್ಗೆ, ತಾನು, ತನ್ನ ಜಾತಿ, ತನ್ನ ಕಡೆಯವರು ಎಂದು ವಕಾಲತ್ತು ವಹಿಸಿದ ಪಠ್ಯಗಳು ಚಾಲನೆಗೆ ಬಂದು ನೈತಿಕವಾದ ಸಾಮಾಜಿಕ ಹೊಣೆಗಾರಿಕೆ ಕನಿಷ್ಟವಾಗುತ್ತಿರುವ ಬಗ್ಗೆ ಪಠ್ಯಕ್ರಮದ ಕಾರ್ಯಕಾರಣ ಸಂಬಂಧಗಳನ್ನು ಪರಿಶೀಲಿಸಿಕೊಳ್ಳುತ್ತಲೆ ಕಾರಣಗಳನ್ನು ಹುಡುಕಿಕೊಳ್ಳಬೇಕಾಗುತ್ತದೆ.

**೧.೨ ನಿಜಕ್ಕೂ, ಕನ್ನಡ ಭಾಶೆಯ ಪಠ್ಯಕ್ರಮ ಹೇಗೆ?**

ಪಠ್ಯಕ್ರಮವನ್ನು ನಿರ್ಧರಿಸುವ ನಮ್ಮ ಸಾಮಾಜಿಕ ವಾತಾವರಣ ಕುರಿತ ಇತ್ತೀಚಿನ ಒಂದು ಅನುಭವ ಹೀಗಿದೆ; ಬೆಂಗಳೂರು ವಿಶ್ವವಿದ್ಯಾಲಯದ ಪದವಿ ವಿದ್ಯಾರ್ಥಿಗಳಿಗೆ ಭಾಶಾ ಪಠ್ಯಗಳನ್ನು ನಿಗದಿಪಡಿಸುವ ಸಂದರ್ಭವೊಂದರಲ್ಲಿ ಪ್ರತಿಯೊಂದು ಪದವಿ ಕೋರ್ಸಿಗೆ ಪ್ರತ್ಯೇಕವಾಗಿ ಇಬ್ಬಿಬ್ಬರು ಸದಸ್ಯರನ್ನೊಳಗೊಂಡ ಸಂಪಾದಕರ ತಂಡಗಳನ್ನು ನೇಮಿಸಲಾಗಿತ್ತು. ಅದರಲ್ಲಿ ಒಂದು ನಿರ್ದಿಷ್ಟ ತಂಡದ ಇಬ್ಬರು ಸದಸ್ಯರು ಒಂದೇ ಜಾತಿಯವರಾಗಿದ್ದರು. ಇದು ನಿರೀಕ್ಶಿತ ಅಥವಾ ಅನಿರೀಕ್ಶಿತ ಎಂಬ ಪ್ರಶ್ನೆಗಳು ಇಲ್ಲಿನ ಚರ್ಚೆಯ ಮುಖ್ಯ ವಿಶಯವಲ್ಲ. ಆದರೆ ಈ ಸಂಪಾದಕರು ಆಯ್ಕೆ ಮಾಡಿಕೊಂಡ ಪಠ್ಯಗಳು ಆ ಜಾತಿಯ ಪ್ರತಿನಿಧೀಕರಣವನ್ನೇ ಮುಖ್ಯ ಗುರಿಯಾಗಿಸಿಕೊಂಡಿದ್ದವು ಎಂಬುದು ಸೋಜಿಗ ಅಥವ ಅನಿರೀಕ್ಶಿತ ಎಂದು ತಿಳಿಯಲು ಬರುವುದಿಲ್ಲ. ಇದು ನಮ್ಮ ಸಾಮಾಜಿಕ ವಾತಾವರಣದ ಸೂಕ್ಶ್ಮಗಳನ್ನು ಅರಿತುಕೊಳ್ಳಲು ಒಂದು ಉದಾಹರಣೆಯಶ್ಟೆ. ಜಾತಿ, ವ್ಯಕ್ತಿ, ಧರ್ಮ, ವೃತ್ತಿ, ಗುಂಪು, ಅಧಿಕಾರ, ಎಂಬಿತ್ಯಾದಿಯಾಗಿ ಶಿಫಾರಸ್ಸುಗಳಿಂದ ನಡೆಯುವ ಇಂಥ ಚಟುವಟಿಕೆಗಳನ್ನು ಹೆಸರಿಸುವುದು ಪ್ರಜಾಪ್ರಭುತ್ವ ವ್ಯವಸ್ಥೆ ಒದಗಿಸುವ ವ್ಯಕ್ತಿಸ್ವಾತಂತ್ರ್ಯ ಮತ್ತು ವೈಚಾರಿಕತೆಯ ಅಣಕವೂ ಆಗಿಬಿಡುತ್ತದೆ. ವಿಶ್ವವಿದ್ಯಾಲಯಗಳ ಕನ್ನಡ ಭಾಶೆ ಮತ್ತು ಸಾಹಿತ್ಯದ

ಪಠ್ಯಗಳನ್ನು ಕೂಲಂಕುಶವಾಗಿ ಗಮನಿಸಿದಲ್ಲಿ ಈ ವಿದ್ಯಮಾನ ಮತ್ತಷ್ಟು ಮನವರಿಕೆಯಾಗುವಂತದ್ದಾಗಿದೆ. ಇದು ಒಂದು ಸಮಾಜದ ನಿಜವಾದ ಸಾಮಾಜಿಕ ಸ್ವರೂಪವನ್ನು ಮರೆಮಾಚಿ, ಒಂದು ನಿರ್ದಿಷ್ಟ ಜಾತಿ, ಸಮುದಾಯ ಅಥವ ಗುಂಪಿನ ಬದುಕಿನ ನಡಾವಳಿಗಳು ಮತ್ತು ಚಿಂತನೆಗಳನ್ನು ಮಾತ್ರವೇ ಇಡೀ ಸಮಾಜದ ಸ್ವರೂಪವೆಂದು ಬಿಂಬಿಸಲು ಪ್ರಯತ್ನಿಸುವ ಚಟುವಟಿಕೆಯಾಗಿಬಿಡುತ್ತದೆ. ಇಂಥ ಉಪಾಯಗಳು ಕನ್ನಡ ಪಠ್ಯಕ್ರಮದ ಸಂದರ್ಭದಲ್ಲಿ ನಿರತವಾಗಿವೆ.

ಉದ್ದೇಶಪೂರ್ವಕ ವಕಾಲತ್ತು ವಹಿಸಿದ ಪಠ್ಯಗಳ ಚಾಲನೆಯ ಪ್ರಶ್ನೆ; ಪಠ್ಯ ಪುಸ್ತಕ **ಇದು** ಎಂದು ನಿಗದಿ ಮಾಡುವಲ್ಲಿ ಅನೇಕ ಪ್ರಭಾವ, ಒತ್ತಡಗಳು ಕೆಲಸ ಮಾಡುತ್ತವೆ. ಕೆಲವೊಮ್ಮೆ ಲೇಖಕರೇ ಈ ಒತ್ತಡಗಳನ್ನು ತಂದರೆ, ಕೆಲವೊಮ್ಮೆ ನಿರ್ದಿಷ್ಟ ವ್ಯಕ್ತಿಯ ಕೃತಿಯನ್ನು ನಿಗದಿ ಮಾಡಬೇಕೆಂಬ ಪೂರ್ವಗ್ರಹೀತ ಹಠವು ಸಮಿತಿಯ ಸದಸ್ಯರಲ್ಲೇ ಇರುತ್ತದೆ'' ಎಂಬ ಅಭಿಪ್ರಾಯಗಳು ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಅನೇಕ ಹಿರಿಯ ಅಧ್ಯಾಪಕರು, ಪಠ್ಯಪುಸ್ತಕ ಸಮಿತಿಗಳಲ್ಲಿ ಕೆಲಸ ಮಾಡಿದವರಿಂದ ವ್ಯಕ್ತವಾಗಿವೆ. ಪಠ್ಯಪುಸ್ತಕ ನಿಗದಿ ಮಾಡುವುದರ ಹಿಂದೆ ವೈಯುಕ್ತಿಕವಾದ ಆರ್ಥಿಕ ವಿದ್ಯಮಾನಗಳೂ, ಜಾತಿ, ವೃತ್ತಿ, ಪ್ರದೇಶ, ಮೊದಲಾದ ಗುಂಪುಗಾರಿಕೆಗಳು ಕೆಲಸಮಾಡುತ್ತವೆ. ಅಲ್ಲದೆ ಈ ನಿಟ್ಟಿನಲ್ಲಿ ಪಠ್ಯಪುಸ್ತಕ ಮಂಡಳಿ, ಲೇಖಕ ಮತ್ತು ಪ್ರಕಾಶಕರ ನಡುವಿನ ಒಪ್ಪಂದಗಳು ಪ್ರಭಾವಿಯಾಗಿ ಕೆಲಸ ಮಾಡುತ್ತವೆ. ಹೀಗಾಗಿ ಒಂದು ಕೃತಿ ಅಥವಾ ಕೃತಿಯ ಭಾಗವನ್ನು ಕಲಿಕೆಯ ಪಠ್ಯವಾಗಿ ತೀರ್ಮಾನಿಸುವುದರ ಹಿಂದಿನ ಮಾನದಂಡವೇ ಅನೇಕ ಅನುಮಾನಗಳಿಗೆ ಕಾರಣವಾಗುತ್ತದೆ. ಕಾಪಿರೈಟ್. ರಾಯಲ್ಟಿ. ಕೀರ್ತಿ ಮೊದಲಾದ ಕಾರಣಗಳಿಂದಾಗಿ ಪಠ್ಯಪುಸ್ತಕ ಮಂಡಳಿಯನ್ನು ನೇಮಿಸುವವರಿಂದ ಆರಂಭವಾಗಿ ಪಠ್ಯ ನಿಗದಿ ಪಡಿಸುವವರವರೆಗೂ ಸ್ವಜಾತಿ, ಸ್ವಸಮುದಾಯದ ಭಾವನೆಗಳು, ಇದನ್ನು ಬೆಂಬಲಿಸುವ ಗುಂಪುಗಾರಿಕೆಗಳು ವಕಾಲತ್ತು ವಹಿಸುವುದು ವಿದ್ಯಾರ್ಥಿ ಸಮುದಾಯದ ಗಮನಕ್ಕೆ ಬರದೆ ಹೋಗುವ ಗುಪ್ತ ಸಂಗತಿಗಳಾಗುತ್ತವೆ. ನಿಜವಾದ ಅರ್ಥದಲ್ಲಿ ಇಂಥ ಸಾಮಾಜಿಕ ಚಟುವಟಿಕೆಗಳ ಕುರಿತು ಎಚ್ಚೆತ್ತುಕೊಳ್ಳುವಂತೆ ಮಾಡಬೇಕಾದ ಪಠ್ಯಗಳು ಮೂಲ ಉದ್ದೇಶದ ಅಡಿಪಾಯದಲ್ಲೆ ದಿಕ್ಕು ತಪ್ಪುವುದರಿಂದ ಕಲಿಕಾ ಸಮುದಾಯವನ್ನು ಪ್ರಜಾಪ್ರಭುತ್ವದ ಅಡಿಯಲ್ಲಿ, ಅತ್ಯಂತ ಉದಾರವಾಗಿ ಸೆಕ್ಯುಲರ್ ಆಲೋಚನೆಗಳನ್ನು ಬಳಸುತ್ತಲೇ ನಿರಂತರವಾಗಿ ವಂಚಿಸುತ್ತವೆ. ಇದರಿಂದಾಗಿ ಇಡೀ ಕಲಿಕಾ ಸಮುದಾಯದ ಮೇಲೆ ನಿರ್ದಿಷ್ಟ ಮಾದರಿಗಳು ಮಾತ್ರ ಶ್ರೇಷ್ಟವೆಂಬ ಒತ್ತಡವನ್ನು ಬಲವಂತವಾಗಿ ಹೇರಲಾಗಿದೆ.

ನಮ್ಮ ಸಮಾಜವು ಅನೇಕ ಜಾತಿ ಮತ್ತು ಕುಲ ಸಮುದಾಯಗಳ ಮೂಲ ಕಲ್ಪನೆಯ ಮೇಲೆ ನಿರ್ವಹಣೆಗೊಳ್ಳುವುದರಿಂದ, ಇಂಥ ನಡೆಯನ್ನು ಕಡೆಗಣಿಸುವುದು ಪ್ರಜಾಪ್ರಭುತ್ವೀಕರಣದ ಮುಖ್ಯ ವೇದಿಕೆಯಾದ ಶಿಕ್ಷಣದ ಮೂಲ ಉದ್ದೇಶವನ್ನು ನಿರಾಕರಿಸಿದಂತಾಗುತ್ತದೆ. ಆದ್ದರಿಂದಾಗಿ ಯಾವುದೇ ಒಂದು ಜಾತಿ ಅಥವಾ ಗುಂಪಿನ ಪ್ರಭಾವಗಳ ಮೂಲಕ ನಿರ್ಧಾರವಾಗುವ ಪಠ್ಯ ಇತರೆ ಸಮುದಾಯ ಅಥವಾ ಗುಂಪುಗಳ ಸಾಮಾಜಿಕ ನಡಾವಳಿಗಳ ಮೇಲಿನ ದಬ್ಬಾಳಿಕೆಯೇ ಆಗುವುದರಿಂದ ಇಡೀ ಸಮಾಜದ ಸ್ವರೂಪವನ್ನು ಗ್ರಹಿಸುವಲ್ಲಿ ಕಲಿಕಾರ್ಥಿಯನ್ನು ವಂಚಿಸುವುದೇ ಆಗುತ್ತದೆ. ಕನ್ನಡ ಭಾಶೆ ಮತ್ತು ಕನ್ನಡ ಸಾಹಿತ್ಯದ ಹೆಸರಿನಲ್ಲಿ ಹುಟ್ಟಿಸುವ ಇಂಥ ಅಪಕಲ್ಪನೆಗಳನ್ನು ಮಾನವತಾವಾದಿ ಅಥವಾ ಸೆಕ್ಯುಲರ್ ಎಂಬ ಹುಸಿ ಪರಿಕಲ್ಪನೆಗಳೆಡೆಯಲ್ಲಿ ಸಮರ್ಥಿಸುವ ಅಪಾಯವಂತೂ ಇದ್ದೇ ಇರುತ್ತದೆ.

ನಿಗದಿಯಾದ ಪಠ್ಯಕ್ರಮ ನಿರ್ವಚಿಸುವ ಸಾಮಾಜಿಕ ಸಂಬಂಧಗಳ ಪ್ರಶ್ನೆ; ಯಾವುದೇ ಒಂದು ಭಾಶೆಯು ಏಕರೂಪಿಯಾದುದಲ್ಲ. ಅದನ್ನು ಏಕೀಕೃತವೆಂದು ಭಾವಿಸಲು ಬರುವುದಿಲ್ಲ. ಜಾತಿ, ಸಮುದಾಯ, ಪ್ರದೇಶ, ಲಿಂಗ, ವಯಸ್ಸು, ಗುಂಪು, ಒಳಪಂಗಡಗಳು ಮೊದಲಾದ ಸಾಮಾಜಿಕ ನಡೆಗಳಿಗನುಗುಣವಾಗಿ ಭಾಶಾ ಬಳಕೆಯ ಸ್ವರೂಪವು ತಾನೆ ಭಿನ್ನತೆಗಳನ್ನು ಪ್ರದರ್ಶಿಸುತ್ತದೆ. ಇದು ಆಯಾ ಸಮುದಾಯ ಅಥವಾ ಗುಂಪುಗಳ ಬದುಕಿನ ಕ್ರಿಯಾವಂತಿಕೆಯ ನೆಲೆಯೂ ಆಗಿದೆ. ಅಂದರೆ ಒಂದು ನಿರ್ದಿಶ್ಟ ಸಾಮಾಜಿಕ ವಾತಾವರಣದಲ್ಲಿ ಅನೇಕ ಜೀವನ ಕ್ರಮಗಳು ಬಳಸುವ ಭಾಶೆ **ಒಂದೇ ಕನ್ನಡ** ಆಗಿರಲು ಸಾಧ್ಯವಿಲ್ಲ. ಅದು ಭಿನ್ನ ಕನ್ನಡಭಾಶಿಕ ಪರಿಸರಗಳನ್ನು ತನ್ನೊಳಗೆ ಇರಿಸಿಕೊಂಡಿರುತ್ತದೆ. ಜೀವನ ಕ್ರಮಗಳಲ್ಲಿರುವ ವ್ಯತ್ಯಾಸಗಳಿಂದಾಗಿ ಭಾಶಾ ಬಳಕೆಯ ನೆಲೆಗಳಲ್ಲಿ, ಪದ ಸಂಪತ್ತಿನಲ್ಲಿ ಈ ವ್ಯತ್ಯಾಸಗಳು ಸ್ಪಶ್ಟವಾಗಿ ಗೋಚರಿಸುವುದನ್ನು ಕಾಣಬಹುದಾಗಿದೆ. ಆದರೆ ಇದನ್ನು ಶೈಕ್ಶಣಿಕ ಪಠ್ಯಕ್ರಮದ ಮೂಲಕ ಜಾರಿಗೊಳ್ಳುವುದನ್ನು ತಡೆದು ಕನ್ನಡ ಸಮಾಜ ಎಂದರೆ **ಇದೇ** ಎಂದು ಏಕೀಕೃತಗೊಳಿಸುವುದರಿಂದ ಯಾವುದೇ ನಿರ್ದಿಶ್ಟ ಪಠ್ಯಗಳು ಪಠ್ಯಕ್ರಮದ ಭಾಗವಾಗುವುದು ಸುಲಭವೂ ಆಗುತ್ತದೆ. ಹೀಗಾಗಿ ಪಠ್ಯದಲ್ಲಿ ಇಟ್ಟದ್ದು ಮಾತ್ರ ಸ್ಟಾಂಡರ್ಡ್ ಎನಿಸಿಕೊಂಡು ಉಳಿದ ಭಾಶಿಕ ಪಠ್ಯಗಳು ಅವಗಣನೆಗೆ ಒಳಪಡುತ್ತವೆ. ಇಂಥ ನಿರ್ದಿಶ್ಟ ಭಾಶಿಕ ರಚನೆಗಳ ಮೂಲಕ ನಡೆಯುವ ಕಲಿಕೆಯು ಕಲಿಕಾರ್ಥಿಗಳ ಸಾಮಾಜಿಕ ಪರಿಸರವನ್ನು ದೂರ ತಳ್ಳುವಲ್ಲಿ ಯಶಸ್ವಿಯಾಗುತ್ತದೆ. ಪಠ್ಯಕ್ರಮದ ಮೂಲಕ ಕಲಿತದ್ದು ಮಾತ್ರ ಶ್ರೇಶ್ಟ ಎಂಬುದನ್ನು ಕಟ್ಟಿಕೊಡುವುದರಿಂದ ಆ ಭಾಶೆಯು ಸಂಕೇತಿಸದ ಸಮುದಾಯಗಳಿಂದ ಬಂದ

ಕಲಿಕಾರ್ಥಿಯು ಕೀಳರಿಮೆಗೆ ಒಳಗಾಗಿ ಅಂಚಿನಲ್ಲೆ ಉಳಿಯಬೇಕಾಗುತ್ತದೆ. ಇದನ್ನು ಈ ಅಧ್ಯಯನವು ಸಾಮಾಜಿಕ ಹೊಣೆಗಾರಿಕೆಯ ಪ್ರಮುಖ ವಿಶಯವಾಗಿ ಶೋಧಿಸುತ್ತದೆ.

ಯಾವುದೇ ಒಂದು ಸಮುದಾಯದ ಸಾಮಾಜಿಕ ಮತ್ತು ಸಾಂಸ್ಕೃತಿಕ ನಡೆಗಳನ್ನು ಆ ಸಮುದಾಯದ ಭಾಶೆ ಮಾತ್ರ ಸಮರ್ಥವಾಗಿ ವ್ಯಕ್ತಪಡಿಸಲು ಸಾಧ್ಯ. ಆದರೆ ಶಿಕ್ಶಣದ ಎಲ್ಲ ಹಂತಗಳಲ್ಲಿ ನಿಗದಿಯಾಗಿರುವ ಭಾಶಿಕ ವಿಶಯದ ಪಠ್ಯಕಮದ ಸ್ವರೂಪವು ಈ ಹೊಣೆಗಾರಿಕೆಯಿಂದ ದೂರವೇ ಇದೆ. ಅಕ್ಶರ ಮಾಧ್ಯಮದಲ್ಲಿ ಭಾಶೆಯನ್ನು ಕಲಿಯುವ ಚಟುವಟಿಕೆಯು ಭಾಶೆಯ ವ್ಯಾಕರಣಬದ್ದ ಸ್ವರೂಪವನ್ನು ತಿಳಿಯುವುದು ಎಂದಾಗಿರುವುದರಿಂದ ಪ್ರೌಡಶಾಲೆಯ ಹಂತದವರೆಗೆ ವ್ಯಾಕರಣ ನಿಯಮಗಳ ಕಲಿಕೆಯು ಮುನ್ನೆಲೆಗೆ ಬಂದು, ಭಾಶೆಯನ್ನು ಕಲಿಯುವುದೆಂದರೆ ಅದರ ನಿಯಮಗಳನ್ನು ಮಾತ್ರ ನೆನಪಿನ ಖಜಾನೆಗೆ ಸೇರಿಸುವುದು ಎಂಬ ಅರ್ಥವನ್ನು ಪಡೆದುಕೊಂಡಿದೆ. ಭಾಶಾ ಕಲಿಕೆಯ ಮತ್ತು ಗ್ರಹಿಕೆಯ ಇಂಥ ನೆಲೆಗಳನ್ನು ಬಹುಮಟ್ಟಿಗೆ ಪ್ರೌಡಶಾಲೆಯ ಹಂತದವರೆಗೆ ಮುಖ್ಯ ಮಾಡಿಕೊಂಡು ನಂತರದಲ್ಲಿನ ಕಲಿಕೆಯಲ್ಲಿ ಸಾಹಿತ್ಯಕ ಮಾದರಿಗಳು ಚಾಲನೆಗೊಳ್ಳುತ್ತವೆ. ಈ ಕಾರಣದಿಂದಾಗಿ ಪದವಿಪೂರ್ವದ ತರಗತಿಗಳ ಮತ್ತು ಪದವಿಯ ಭಾಶಿಕ ಪಠ್ಯಕ್ರಮಗಳ ಮೂಲಕ ಸಾಹಿತ್ಯದ ಯಾವುದೋ ಒಂದು ಕೃತಿಯನ್ನು ಅಥವಾ ಕೃತಿಯ ಆಯ್ದ ಭಾಗಗಳನ್ನು ಪರಿಚಯಿಸಿ ವಿಜೃಂಬಿಸುವುದೇ(ಬೋಧನೆ) ಭಾಶಾ ಕಲಿಕೆ ಎಂದಾಗಿಬಿಡುತ್ತದೆ. ಹೀಗಾಗಿ ಒಂದು ಹಂತದವರೆಗೆ ವ್ಯಾಕರಣ ನಿಯಮಗಳು, ಮತ್ತೊಂದು ಹಂತದಲ್ಲಿ ಸಾಹಿತ್ಯದ ಪರಿಚಯ (ಸಾರವನ್ನು ತಿಳಿಯುವುದು)ವನ್ನು ಭಾಶಾ ಕಲಿಕೆಯಲ್ಲಿ ಪಠ್ಯಕ್ರಮವಾಗಿ ಜಾರಿಗೊಳಿಸಿದಂತಾಗಿದೆ.

ಹೀಗೆ ಭಾಶೆಯ ಸಾಮಾಜಿಕ ಸಂಬಂಧಗಳನ್ನು ನಗಣ್ಯಗೊಳಿಸುವ ಕಲಿಕೆಯು ಕಲಿತ ಸಮುದಾಯವನ್ನು ಭಾಶೆಯ ವಿಚಾರದಲ್ಲಿಯೂ ಶ್ರೇಣೀಕೃತ ಮೌಲ್ಯಗಳನ್ನು ಪ್ರತಿಪಾದಿಸಲಶ್ಟೆ ಶಕ್ತರನ್ನಾಗಿಸುತ್ತದೆ. ಅಲ್ಲದೆ ಈ ಮಾದರಿಯು **ಶ್ರೇಶ್ಟ** ಮತ್ತು **ಕನಿಶ್ಟ** ಎಂಬ ವೈರುಧ್ಯಗಳನ್ನು ಕಟ್ಟಿಕೊಟ್ಟು ಮಡಿವಂತಿಕೆಯನ್ನು ಕಾಪಾಡಿಕೊಳ್ಳುತ್ತದೆ. ಹೀಗಾಗಿ ಕಲಿಕಾರ್ಥಿ ತನ್ನನ್ನು ಸಾಮಾಜಿಕ ಅವಕಾಶಗಳಲ್ಲಿ ನಿರ್ವಹಿಸಿಕೊಳ್ಳಲು ಬೆಕಾದ ಭಾಶಿಕ ಕೌಶಲಗಳಿಂದ ವಂಚಿತರಾಗುವಂತೆ ಆಗಿದೆ.

**೧.೩ ಕನ್ನಡ ಭಾಶಾ ಕಲಿಕೆಯ ಪಠ್ಯಗಳ ಸಾಮಾಜಿಕ ಹೊಣೆಗಾರಿಕೆ ಯಾವುದು?**

ಇದರಿಂದಾಗಿ ಇಲ್ಲಿ ವ್ಯಕ್ತವಾಗುವ ತಳಮೂಲ ಪ್ರಶ್ನೆಯೆಂದರೆ ಪಠ್ಯಕ್ರಮ ಎನ್ನುವುದು ಅದರ ನಿಜವಾದ ಅರ್ಥದಲ್ಲಿ ಮೊದಲಿಗೆ ಸಾಮಾಜಿಕ ಹೊಣೆಗಾರಿಕೆಯನ್ನು

ಪ್ರದರ್ಶಿಸುವುದಾಗಬೇಕು. ಸಾಮಾಜಿಕ ಹೊಣೆಗಾರಿಕೆಯೆನ್ನುವುದು ನಿರ್ದಿಷ್ಟ ಸಮಾಜದ ಒಟ್ಟಾರೆ ಸ್ವರೂಪದ ಗ್ರಹಿಕೆಗೆ ಅವಕಾಶಗಳನ್ನು ಒದಗಿಸಿಕೊಡುವುದು ಎಂದೇ ಇಲ್ಲಿ ಗ್ರಹಿಸಬೇಕಾಗುತ್ತದೆ. ಅಂದರೆ, ಶ್ರೇಣೀಕೃತವಾದ ಅಧಿಕಾರ ಸಂಬಂಧಗಳ ನಡುವೆ ಸಂವಾದ ಸಾಧ್ಯವಾಗುವಂತೆ ಕಲಿಯುವವರಲ್ಲಿ ಒಂದು ಸಾಮಾಜಿಕ ಅವಕಾಶ(ಡೆಮಾಕ್ರೆಟಿಕ್ ಸ್ಪೇಸ್)ವನ್ನು ಹುಟ್ಟುಹಾಕುವಂತದ್ದಾಗಬೇಕು. ಕಲಿಯುವಿಕೆಯ ಪ್ರಕ್ರಿಯೆಯು ಕ್ರಿಯಾತ್ಮಕ ಮತ್ತು ಗತ್ಯಾತ್ಮಕವಾಗುವುದು ಆಗ ಮಾತ್ರ ಸಾಧ್ಯವಾಗುತ್ತದೆ.

ಈ ಹಿನ್ನೆಲೆಯಲ್ಲಿ ಪದವಿ ಹಂತದ ಪಠ್ಯಕ್ರಮಗಳನ್ನು, ಪಠ್ಯಗಳು ಸೃಷ್ಟಿಸುವ ಕಲಿಕಾ ಕ್ರಮಗಳನ್ನು ತೀಕ್ಷ್ಣವಾದ ವಿಶ್ಲೇಶಣೆಗೆ ಒಳಪಡಿಸುವ ಅಗತ್ಯವನ್ನು ಇಲ್ಲಿ ಕೈಗೆತ್ತಿಕೊಳ್ಳಲಾಗಿದೆ. ಆ ಮೂಲಕ ಕನ್ನಡ ಸಮಾಜಗಳ ಮಾನವ ಚಟುವಟಿಕೆಗಳು ಮತ್ತು ಆಸಕ್ತಿಗಳಿಗೆ ಅನುಗುಣವಾಗಿ ಸಂಪರ್ಕ, ಸಂಬಂಧಗಳನ್ನು ಕಲ್ಪಿಸಬೇಕಾದ ಪಠ್ಯಕ್ರಮ ಮತ್ತು ಕಲಿಕೆಯ ಸಂದರ್ಭಗಳನ್ನು ಕ್ರಿಯಾತ್ಮಕವಾಗಿ ಕಂಡುಕೊಳ್ಳುವುದನ್ನು ಪ್ರಸ್ತುತ ಅಧ್ಯಯನವು ಮಹತ್ವದ ಉದ್ದೇಶವಾಗಿರಿಸಿಕೊಂಡಿದೆ.

**ಅಡಿ ಟಿಪ್ಪಣಿಗಳು**

---

೧. ಡಿಸೆಂಬರ್ ೧೯, ೨೦೦೯ ರ ದಿ ಟೈಮ್ಸ್ ಆಫ್ ಇಂಡಿಯಾ ಕನ್ನಡ ದಿನಪತ್ರಿಕೆಯ ಬೆಂಗಳೂರು ಎಡಿಶನ್‌ನಲ್ಲಿ ಲೇಖಕ ಚೇತನ್ ಭಗತ್

೨. ಇಲ್ಲಿಯವರೆಗೆ ಇದನ್ನು ಸ್ಥಳೀಯತೆಯ ಗುರುತುಗಳ ಮೂಲಕ ವಿರೋಧಿಸಲಾಗುತ್ತಿತ್ತು. ಆದರೆ ಇಂದು ಇಂಥ ವಿರೋಧಿ ಚಳುವಳಿಗಳು ಸಬಲಗೊಳ್ಳಲು ಸಾಧ್ಯವಿಲ್ಲವೆನ್ನುವುದನ್ನು ಅರಗಿಸಿಕೊಳ್ಳುವ ತಯಾರಿ ನಡೆಸುತ್ತಿರುವಂತೆ ಕಾಣುತ್ತಿದೆ.

೩. ಇದನ್ನು ಪ್ರಾಥಮಿಕ ಶಿಕ್ಷಣದಿಂದ ಉನ್ನತ ಶಿಕ್ಷಣದವರೆಗು 'ಸ್ಥಾಪಿತ ಅಧಿಕಾರ'ದ ದ್ವಂದ್ವಗಳನ್ನಿಟ್ಟುಕೊಂಡೇ ಕಲಿಸುವ ವ್ಯವಸ್ಥೆಯಾಗಿ ರೂಢಿಗೊಳಿಸಲಾಗಿದೆ.

೪. ಪಠ್ಯಪುಸ್ತಕ ಪ್ರಪಂಚ-ಬಿ.ಜಿ.ಎಲ್. ಸ್ವಾಮಿ; ೧೯೯೯. ಪ್ರಾಧ್ಯಾಪಕನ ಪೀಠದಲ್ಲಿ, ಕಾವ್ಯಾಲಯ ಮೈಸೂರು.

೫. ನಮ್ಮ ಪಠ್ಯಪುಸ್ತಕಗಳು ಹೇಗಿರಬೇಕು-ಆರ್ಕೆ ಮಣಿಪಾಲ್: ೨೦೦೦. ಶಿಕ್ಷಣ ಮತ್ತು ವೈಚಾರಿಕತೆ, ಸಂವಾದ ಪ್ರಕಾಶನ, ಮಣಿಪಾಲ.

೬. ಚಿ. ಶ್ರೀನಿವಾಸರಾಜು, ವೈಯುಕ್ತಿಕ ಚರ್ಚೆಯಲ್ಲಿ.

೭. ಸಿ.ಪಿ. ನಾಗರಾಜು, ಸಂದರ್ಶನದ ಸಂದರ್ಭದಲ್ಲಿ.

ಅಧ್ಯಾಯ ೨

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವಿಧಾನ

ಅಧ್ಯಯನದ ಸ್ವರೂಪ ಮತ್ತು ಉದ್ದೇಶ

ಅಧ್ಯಯನದ ವ್ಯಾಪ್ತಿ ಮತ್ತು ಮಿತಿ

ಅಧ್ಯಯನ ವಿಧಾನ

ಅಧ್ಯಯನ ಸಿದ್ಧಾಂತ ಮತ್ತು ಪರಿಕಲ್ಪನೆಯ ನೆಲೆಗಳು

ಅಧ್ಯಾಯ ೨

## ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವಿಧಾನ

ಇಂದು ಶಿಕ್ಷಣ ಪ್ರಣಾಳಿ, ಕಲಿಕೆಯ ವಿಧಾನ, ಬೋಧನಾ ವಿಧಾನ, ಅಧ್ಯಾಪನ ಸಮುದಾಯ ಮತ್ತು ಕಲಿಕಾರ್ಥಿಗಳ ಸಂಬಂಧ ಎಲ್ಲವನ್ನೂ ಲಘುವಾಗಿ ಹೊಣಗೇಡಿತನದಿಂದ ಕಾಣುವ ಪರಿಪಾಠವಾಗಿಬಿಟ್ಟಿದೆ. ಇದನ್ನು ಸಂಸ್ಕೃತಿ ಚಿಂತಕರಾದ ಡಾ. ಕೆ.ವಿ.ನಾರಾಯಣ ಅವರು 'ಶಿಕ್ಷಣ ವ್ಯವಸ್ಥೆಯ ರೋಗ ವಿಧಾನ, ಅಧ್ಯಯನದ ಕೊರತೆಗಳನ್ನು ಮುಚ್ಚಿಟ್ಟುಕೊಳ್ಳುವ ತಂತ್ರ' ಎಂದು ಗುರುತಿಸುತ್ತಾರೆ. ಕನ್ನಡ ಸಮಾಜವು ವರ್ತಮಾನದಲ್ಲಿ ತೀವ್ರವಾದ ಬದಲಾವಣೆ ಮತ್ತು ಬಿಕ್ಕಟ್ಟುಗಳನ್ನು ಎದುರಿಸುತ್ತಿರುವ ಸಂದರ್ಭದಲ್ಲಿ ಅಧ್ಯಾಪನ ವೃತ್ತಿಯು ಸಹ ಹೊಸ ಸಾಧ್ಯತೆಗಳಿಗೆ ವಿಸ್ತರಿಸಿಕೊಳ್ಳಲು ಪರಿಕರಗಳನ್ನು ಹುಡುಕಿಕೊಳ್ಳುವಲ್ಲಿ ಹಿಂದೆ ಸರಿಯುತ್ತಿರುವುದು ಸ್ಪಷ್ಟವಾಗಿ ಕಾಣುತ್ತದೆ. ಅದರಲ್ಲು, ಬಹಳ ಮುಖ್ಯವಾಗಿ ಭಾಷೆಯ ಬೋಧನೆ ಮತ್ತು ಸಾಹಿತ್ಯ ಬೋಧನೆಯ ಕೆಲಸವು ತನ್ನ ಪಾರಂಪರಿಕ ಪದ್ದತಿಯನ್ನು ಬಿಟ್ಟುಕೊಟ್ಟು ಹೊಸ ವಿದ್ಯಮಾನಗಳಲ್ಲಿ ತನ್ನನ್ನು ಕಂಡುಕೊಳ್ಳುವಲ್ಲಿ ಇಕ್ಕಟ್ಟನ್ನು ಎದುರಿಸುತ್ತಿದೆ. ಒಂದು ಕಡೆ, ಈಗಾಗಲೆ ಪ್ರವೃತ್ತವಾಗಿ ಬಂದಿರುವ ಬೋಧನೆಯ ಪರಿಕರಗಳು ಇದಕ್ಕೆ ಬಹಳಷ್ಟು ತಡೆಯನ್ನು ಒಡ್ಡುತ್ತಿದ್ದರೆ, ಮತ್ತೊಂದು ಕಡೆ, ಇಂಥ ಪರಿಕರಗಳ ಮೂಲಕವೇ ಪ್ರವೃತ್ತವಾಗಿ ಬಂದ ಕನ್ನಡ ಭಾಷೆ, ಕನ್ನಡ ಸಾಹಿತ್ಯ ಕುರಿತ ಪಾರಂಪರಿಕ ಜ್ಞಾನವನ್ನು ಬಿಟ್ಟುಕೊಟ್ಟರೆ ಮುಂದೇನು ಎಂಬ ಅಸಹಾಯಕತೆ ಕಾಡುತ್ತಿದೆ. ಅಲ್ಲದೆ ಈ ಮೂಲಕ ಬಂದಿರುವ ಅಧಿಕಾರವನ್ನು ಬಿಟ್ಟುಕೊಡುವುದರಿಂದ ಬದಲಾವಣೆಗಳಲ್ಲಿ ತಮ್ಮನ್ನು ಮರುಸ್ಥಾಪಿಸಿಕೊಳ್ಳುವ ಪ್ರಶ್ನೆಯನ್ನು ಎದುರಿಸಬೇಕಾದ ಆತಂಕದಲ್ಲಿ ಕನ್ನಡ ಅಧ್ಯಾಪನ ಸಮುದಾಯ ಇರುವಂತೆ ಕಾಣುತ್ತದೆ. ಇದರೊಂದಿಗೆ ಸ್ಥಾಪಿತ ಮೌಲ್ಯಗಳು ಪ್ರವೃತ್ತವಾಗಿರುವುದರಿಂದಾಗಿ ಭಾಶಿಕ ಶಿಕ್ಷಣದಲ್ಲಿ ದೊರೆಯುವ ಜ್ಞಾನವು ಕೇವಲ ನೆನಪನ್ನು ಮೂಲವಾಗಿಸಿಕೊಂಡ ಗ್ರಹಿಕೆಯ ಸಾಮರ್ಥ್ಯವನ್ನು ಮಾತ್ರ ಬೆಳೆಸಲು ಸೀಮಿತವಾಗುತ್ತದೆ ಮತ್ತು ಅಭಿವ್ಯಕ್ತಿಸುವ ಸಾಮರ್ಥ್ಯವು ಹಿಂದೆ ಸರಿಯುವಂತಾಗಿ ಕಲಿತವರು ಭಾಶಿಕವಾಗಿ ತಮ್ಮನ್ನು

ಒಡ್ಡಿಕೊಳ್ಳಲಾಗದೆ ಕೀಳರಿಮೆಯಲ್ಲೇ ಉಳಿಯುವಂತಾಗುತ್ತದೆ. ಪರೀಕ್ಷೆ, ಮೌಲ್ಯಮಾಪನ ಎನ್ನುವುದು ಅರ್ಥ ಕಳೆದುಕೊಂಡ, ಪ್ರತಿ ವರುಶ ಆಚರಿಸಬೇಕಾದ ಒಂದು ವಿಧಿ ಅಥವಾ ಆಚರಣೆಯಾಗಿ ಕಾಣುತ್ತದೆ. ಈ ಹಿನ್ನೆಲೆಯಲ್ಲಿ ಬೋಧನೆ ಮತ್ತು ಕಲಿಕೆಯ ಪಠ್ಯಕ್ರಮ, ಪಠ್ಯಗಳನ್ನು ಕುರಿತಾಗಿ ನಡೆಯುವ ಪ್ರಸ್ತುತ ಅಧ್ಯಯನದ ಸ್ವರೂಪವನ್ನು ಸದ್ಯದ ಅಧ್ಯಾಯದಲ್ಲಿ ಗುರುತಿಸಿಕೊಂಡು ವಿವರಿಸಿಕೊಳ್ಳಲಾಗಿದೆ. ಅದು ಹೀಗಿದೆ;

೧. ಅಧ್ಯಯನದ ಸ್ವರೂಪ ಮತ್ತು ಉದ್ದೇಶ.

೨. ಅಧ್ಯಯನದ ವ್ಯಾಪ್ತಿ ಮತ್ತು ಮಿತಿ.

೩. ಅಧ್ಯಯನ ವಿಧಾನ.

೪. ಅಧ್ಯಯನ ಸಿದ್ಧಾಂತ ಮತ್ತು ಪರಿಕಲ್ಪನೆಯ ನೆಲೆಗಳು

**೨.೧ ಅಧ್ಯಯನದ ಸ್ವರೂಪ ಮತ್ತು ಉದ್ದೇಶ:**

ಕನ್ನಡ ಭಾಶೆಯನ್ನು ಕಲಿಸುವ ಕರ್ನಾಟಕದ ಒಟ್ಟು ಸ್ವರೂಪದ ಪ್ರಸ್ತುತ ಶೈಕ್ಶಣಿಕ ಸಂದರ್ಭವನ್ನು ನಾಲ್ಕು ಹಂತಗಳಲ್ಲಿ ಗುರ್ತಿಸಲಾಗುತ್ತದೆ. ಅದೆಂದರೆ, ಪ್ರಾಥಮಿಕ ಶಾಲಾ ಶಿಕ್ಶಣ, ಪ್ರೌಢಶಾಲಾ ಶಿಕ್ಶಣ, ಪದವಿಪೂರ್ವ ಕಾಲೇಜು ಶಿಕ್ಶಣ, ಸ್ನಾತಕ ಪದವಿ ಶಿಕ್ಶಣ. ಮೊದಲೆರಡು ಹಂತಗಳಲ್ಲಿ ಕನ್ನಡ ಭಾಶೆಯ ಕಲಿಕೆಯು ಮುಖ್ಯವಾಗಿ ಕನ್ನಡ ಭಾಶೆಯ ರಚನಾತ್ಮಕ-ವ್ಯಾಕರಣಬದ್ಧ-ವಿನ್ಯಾಸಗಳನ್ನು ಕಲಿಕಾರ್ಥಿಗಳಿಗೆ ಪರಿಚಯಿಸುವುದು ಮತ್ತು ಕನ್ನಡ ಭಾಶೆಯನ್ನು ಓದಲು ಮತ್ತು ಬರೆಯಲು ಬೇಕಾದ ಕೌಶಲಗಳನ್ನು ಒದಗಿಸುವುದು ಎಂದು ಸಾಮಾನ್ಯವಾಗಿ ಗಿರುತಿಸಿಕೊಳ್ಳಲಾಗಿದೆ. ಮೂರನೆಯ ಹಂತದಲ್ಲಿ ಸ್ವಲ್ಪಮಟ್ಟಿಗೆ ಇದೇ ಸ್ವರೂಪವು ಮುಂದುವರಿಯುತ್ತದೆಯಾದರೂ ಬಹುಮಟ್ಟಿಗೆ **ಕನ್ನಡ ಸಾಹಿತ್ಯ**ವನ್ನು ಪರಿಚಯಿಸುವ ಕಡೆಗೆ ಪಠ್ಯಕ್ರಮವನ್ನು ಯೋಜಿಸಲಾಗಿದೆ. ನಾಲ್ಕನೆಯ ಹಂತವಾದ ಸ್ನಾತಕ ಪದವಿ-ಇನ್ನು ಮುಂದೆ ಇದನ್ನು ಪದವಿ ಎಂದಶ್ಟೆ ಕರೆಯಲಾಗುತ್ತದೆ-ಯಲ್ಲಿ ಕನ್ನಡ ಸಾಹಿತ್ಯವನ್ನು ಅದರ ಪರಂಪರೆ ಮತ್ತು ಚಾರಿತ್ರಿಕ ಪ್ರಜ್ನೆಯೊಂದಿಗೆ ಪ್ರಕಾರಾನುಸಾರವಾಗಿಯೂ ಪರಿಚಯಿಸುವ ಕಡೆಗೆ ಯೋಜಿಸಿರುವುದು ಮೇಲುನೋಟಕ್ಕೇ ಕಾಣುವ ಸಂಗತಿಯಾಗಿದೆ. ಪ್ರಾಚೀನ ಕನ್ನಡ ಭಾಶೆಯ ಸಾಹಿತ್ಯ ರೂಪಗಳಿಂದ ಆರಂಭಗೊಂಡು ಆಧುನಿಕ ಕನ್ನಡ ಭಾಶೆಯ ಸಾಹಿತ್ಯ ರೂಪಗಳನ್ನು ಕಲಿಕಾರ್ಥಿಗಳಿಗೆ ಉಣಬಡಿಸಬೇಕೆಂಬ ಪೂರ್ವ ನಿರ್ಧರಿತ ಮನೋಭಾವ ಬಹುಮಟ್ಟಿಗೆ ಇದರ ಹಿಂದೆ ಕಾರ್ಯಪ್ರವೃತ್ತವಾಗಿದೆ. ಇದರಿಂದಾಗಿ, ಕನ್ನಡ ಜಗತ್ತಿನ ಪ್ರತಿಯೊಂದು ಸಮುದಾಯವೂ ಜಾಗತಿಕ

ಮಾರುಕಟ್ಟೆಯ ಮಾನದಂಡಗಳಿಂದ ತಪ್ಪಿಸಿಕೊಳ್ಳಲಾಗದಿರುವ ಈ ಸಂದರ್ಭದಲ್ಲಿ ಕನ್ನಡ ಭಾಶೆಯ ಸ್ವರೂಪವನ್ನು ಶಿಕ್ಶಣದ ಪಠ್ಯ, ಬೋಧನೆ ಮತ್ತು ಕಲಿಕೆಯ ಚಟುವಟಿಕೆಗಳು ಯಾವ ಬಗೆಯಲ್ಲಿ ಇದನ್ನು ನಿಭಾಯಿಸಿಕೊಳ್ಳುತ್ತವೆ, ಈ ಕಾರಣವಾಗಿ ಇಲ್ಲಿಯವರೆಗಿನ ಪಠ್ಯಕ್ರಮ ಕಾಲಕಾಲಕ್ಕೆ ಸಾಮಾಜಿಕ ಸ್ವರೂಪದಲ್ಲಿ ಬದಲಾದ ಹೊಣೆಗಾರಿಕೆಯನ್ನು ಹೇಗೆ ನಿರ್ವಹಿಸಿಕೊಂಡಿದೆ ಎಂಬುದು ಪರಿಶೀಲನಾರ್ಹವಾಗಿದೆ. ಇದು ಎರಡು ನೆಲೆಗಳಲ್ಲಿ ಸವಾಲನ್ನು ಒಡ್ಡುತ್ತದೆ; ಇಂಗ್ಲಿಶ್ ಪ್ರಣೀತ ಆಧುನಿಕ ಶಿಕ್ಶಣದ ಭಾಗವಾಗಿ ಬೆಳೆದು ಬಂದಿರುವ ಕನ್ನಡ ಭಾಶೆಯ ತಿಳುವಳಿಕೆ ಎನ್ನುವುದರ ಹಿಂದಿನ ಮಾನದಂಡವನ್ನು ಕುರಿತದ್ದು ಒಂದು. ಅಂದರೆ, ಇದನ್ನು ಕೇವಲ ಇಂಗ್ಲಿಶ್ ಭಾಶೆಯ ಕೌಶಲ್ಯಕ್ಕೆ ಪೂರಕವಾಗಿ–ಇಂಗ್ಲಿಶ್ ಕಲಿಯಲು, ಅರ್ಥಮಾಡಿಕೊಳ್ಳಲು, ಪ್ರತಿಕ್ರಿಯಿಸಲು–ಒದಗಿಬರುವ ಅಥವಾ ಒದಗಿ ಬರಬೇಕಾದ ಅರ್ಥಾಂತರ ಸಾಧನ ಮಾತ್ರವೆಂದು ತಿಳಿಯಲಾಗಿದೆಯೆ? ಅಥವಾ ಕನ್ನಡ ನಾಡಲ್ಲಿ ಕನ್ನಡಿಗರಾಗಿ ಹುಟ್ಟಿದವರಿಗೆ ಕನ್ನಡ ಭಾಶೆಯ ಕುರಿತ ಅಭಿಮಾನವನ್ನು ಕಿಂಚಿತ್ತಾದರೂ ಉಳಿಸುವ ಕಾರಣವಾಗಿ ಕನ್ನಡ ಕಲಿಕೆಯೆನ್ನುವುದು ಶಿಕ್ಶಣಕ್ರಮದಲ್ಲಿ ಜಾರಿಯಲ್ಲಿದೆಯೆ, ಎನ್ನುವುದು. ಅಂದರೆ, ಕನ್ನಡ **ಐಡೆಂಟಿಟಿ**ಯ ಗುರುತಾಗಿ ಮಾತ್ರ ಕನ್ನಡ ಪಠ್ಯವನ್ನು ಅಭ್ಯಾಸ ಮಾಡಬೇಕಾಗಿದೆಯೆ, ಎಂಬುದು. ಎರಡು, ಕನ್ನಡ ಭಾಶೆಯ ಬಹುತ್ವದ ಸಂದರ್ಭದಲ್ಲಿ ಅಭ್ಯಾಸ ಮಾಡಬೇಕಾದ ಕನ್ನಡ ಯಾವುದು, ಯಾರದು, ಯಾಕೆ ಎನ್ನುವುದು.

ಕನ್ನಡ ಶಾಸ್ತ್ರೀಯ ಭಾಶೆಯಾಗಿ ಸಂಭ್ರಮಿಸುತ್ತಿರುವ ಸಂದರ್ಬದಲ್ಲೇ, ಕನ್ನಡದ ಮೂಲಕವೆ ಯಾಕೆ ಕಲಿಯಬೇಕು ಎಂಬ ಸವಾಲಿನಿಂದಾಗಿ ನ್ಯಾಯ ಬಯಸಿ ಕನ್ನಡ ಕೋರ್ಟ್‌ನ ಕಟಕಟೆಯಲ್ಲಿ ನಿಂತಿದೆ. ಹಾಗಿದ್ದರೆ, ಈ ಹೊಸ ಆಧುನಿಕ ಶಿಕ್ಶಣದ ಸನ್ನಿವೇಶವು ಇಂಗ್ಲಿಶನ್ನು ಎದುರಿಗೆ ನಿಲ್ಲಿಸಿ, ಕನ್ನಡ ಭಾಶೆಯ ಮೇಲೆ ಹೇರಿರುವ ಹೊಣೆಗಾರಿಕೆಯ ಮೌಲ್ಯಪ್ರಜ್ಞೆ ಯಾವ ಬಗೆಯದು?. ಕನ್ನಡ ಪಠ್ಯಕ್ರಮಗಳ ಮೂಲಕ ಚಾಲನೆಗೊಂಡ ಕನ್ನಡ ಸಾಹಿತ್ಯ ಪರಂಪರೆಯ ಪ್ರಜ್ಞೆ ಇದನ್ನು ಯಾವ ಬಗೆಯಲ್ಲಿ ಮುಖಾಮುಖಿಯಾಗುವ ಅವಕಾಶನ್ನು ಹುಟ್ಟುಹಾಕಿದೆ?. ಇಂಥ ಪ್ರಶ್ನೆಗಳ ಹಿನ್ನೆಲೆಯಲ್ಲಿ, ಇದರಿಂದಾಗಿಯೇ ಹುಟ್ಟಿಕೊಂಡಿರುವ ಶ್ರೇಶ್ಟ ಮತ್ತು ಕನಿಶ್ಟ ಎಂಬ ಪ್ರಜ್ಞೆಯ ಮೌಲ್ಯಗಳನ್ನು ಪ್ರಶ್ನಿಸಬೇಕಾಗಿದೆ. ಈ ಸಮಸ್ಯೆಗಳಿಗೆ ಉತ್ತರವನ್ನು ಕಂಡುಕೊಳ್ಳುವ ಮೊದಲು ಹಾಗೆ ಕಂಡುಕೊಳ್ಳಲು ಇರುವ–ಉದಾರವಾದಿ ಸೆಕ್ಯುಲರ್ ಆಲೋಚನೆಗಳಲ್ಲಿ ಪ್ರವೃತ್ತವಾಗಿರುವ–ತೊಡಕುಗಳನ್ನು ಹುಡುಕಿಕೊಳ್ಳಬೇಕಾಗುತ್ತದೆ. ಇವತ್ತಿನ ಉನ್ನತ ಶಿಕ್ಶಣದ ಪರಿಸರದಲ್ಲಿ ಸ್ಥಳಿಯ ಬದುಕಿಗೆ ಮುಖಾಮುಖಿಯಾಗಬೇಕಾದ ಹೊಣೆಗಾರಿಕೆಯನ್ನು ಜಾಗತಿಕ ಆರ್ಥಿಕತೆಯ ಭಾಗವಾಗಿ

ಕಲಿಯುತ್ತಿರುವ ಈ ಸಂದರ್ಭದಲ್ಲಿ ಕನ್ನಡದಿಂದ ನಿರ್ವಹಿಸಿಕೊಳಲಾಗುವ ಉಪಾಯಗಳನ್ನು ಕಂಡುಕೊಳ್ಳಬೇಕಾಗುತ್ತದೆ.

೧೯ನೇ ಶತಮಾನದಲ್ಲಿ ಆರಂಭವಾದ ವಸಾಹತುಶಾಹಿ ಆಧುನಿಕ ಶಿಕ್ಷಣ ಅಥವಾ ಔಪಚಾರಿಕ ಶಿಕ್ಷಣವನ್ನು ಪಠ್ಯಕೇಂದ್ರಿತವಾಗಿಯೇ ಸಂಕಥಿಸಲಾಗಿದೆ. ಹೀಗೆ ಸಂಕಥಿಸಿಕೊಂಡು ಇದನ್ನೇ ಅನುಸರಿಸುತ್ತಾ ಬಂದಿರುವ ನಿಯಮದಿಂದಾಗಿ ಮುದ್ರಿತ ಪಠ್ಯವಿಲ್ಲದ ಶಿಕ್ಷಣವನ್ನು ದೂರವೇ ಇಡಲಾಗಿದೆ. ಆದ್ದರಿಂದಾಗಿ ಮುದ್ರಿತ ಪಠ್ಯವೇ ಕಲಿಕಾರ್ಥಿಯ ಶಿಕ್ಷಣವನ್ನು ನಿರೂಪಿಸುವ ಮತ್ತು ನಿಯಂತ್ರಿಸುವ ಅಸ್ತ್ರವಾಗಿದೆ. ಇದರಿಂದಾಗಿ, ಬೋಧನೆ ಮತ್ತು ಕಲಿಕೆ ಎನ್ನುವುದನ್ನು 'ನಿಗದಿಯಾದ ಅವಧಿಯಲ್ಲಿ ನಿರ್ದಿಷ್ಟಪಡಿಸಿದ ಮುದ್ರಿತ ಪಠ್ಯವನ್ನು ಗ್ರಹಿಕೆಗೆ ಒಳಪಡಿಸುವ ಮತ್ತು ನೆನಪು ಆಗಿಸಿಕೊಳ್ಳುವ ಪ್ರಕ್ರಿಯಾತ್ಮಕ ಚಟುವಟಿಕೆ' ಎಂದು ನಂಬಲಾಗಿದೆ. ಈ ಪ್ರಕ್ರಿಯೆ ನಡೆಯಲೇಬೇಕೆಂಬ ಪ್ರಬಲವಾದ ಅಪೇಕ್ಷೆಯನ್ನು ಪ್ರಸ್ತುತ ಶಿಕ್ಷಣ ವ್ಯವಸ್ಥೆಯು ಪರೀಕ್ಷೆ ಮತ್ತು ಮೌಲ್ಯಮಾಪನ ವಿಧಿಗಳ ಮೂಲಕ ಜಾರಿಗೊಳಿಸಿದೆ. ಈ ಮೂಲಕ, ಕಲಿಕಾರ್ಥಿಯ, ನಿರ್ದಿಷ್ಟಪಡಿಸಿದ ಪಠ್ಯದ ಗ್ರಹಿಕೆ(ನೆನಪು)ಯನ್ನು ಅಳೆದು ಗುರ್ತಿಸುವ ಫಲಿತವು ಕಲಿಕಾರ್ಥಿಯ ಜ್ಞಾನದ ಸಾಮರ್ಥ್ಯವಾಗಿ ಬಿಂಬಿಸಲ್ಪಡುತ್ತದೆ. ಪಠ್ಯ, ಬೋಧನೆ ಮತ್ತು ಕಲಿಕೆಯ ಈ ಒಟ್ಟು ಪ್ರಕ್ರಿಯೆಯನ್ನೆ ಔಪಚಾರಿಕ ಶಿಕ್ಷಣ ಎಂದು ಕರೆಯಲಾಗಿದೆ. ಕರ್ನಾಟಕದ ಒಟ್ಟು ಶಿಕ್ಷಣ ವ್ಯವಸ್ಥೆಯಲ್ಲಿ ಕನ್ನಡ ಕಲಿಕೆಯನ್ನು ಕುರಿತ ಈ ಪ್ರಶ್ನೆಯು ವಿಸ್ತಾರವಾದ ಅಧ್ಯಯನವನ್ನು ಬಯಸುತ್ತದೆ. ಪ್ರಸ್ತುತ, ಪದವಿ ಹಂತದ ಕನ್ನಡ ಕಲಿಕೆಯನ್ನು ಮಾತ್ರ ಮುಖ್ಯಮಾಡಿಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಪದವಿ ತರಗತಿಗಳಲ್ಲಿ ಕನ್ನಡ ಭಾಶೆಯ ಕಲಿಕೆಯನ್ನು ನಿರ್ಧರಿಸುವ ಪಠ್ಯಕ್ರಮಗಳ ಸಾಮಾಜಿಕ ಪ್ರಸ್ತುತತೆ ಮತ್ತು ಪಠ್ಯ ನಿರ್ಧರಿಸುವ ಕಲಿಕೆಯ ಜ್ಞಾನದ ಪ್ರಸ್ತುತತೆ ಪ್ರಶ್ನೆಗೆ ಒಳಗಾಗುತ್ತವೆಯಾದ್ದರಿಂದ, ಇದನ್ನು ಪ್ರಸ್ತುತ ಸಾಮಾಜಿಕ ಹೊಣೆಗಾರಿಕೆಯ ಬಹುಮುಖಿ ನೆಲೆಗಳಲ್ಲಿ ವಿಶ್ಲೇಶಣೆಗೆ ತೆಗೆದುಕೊಳ್ಳಲಾಗಿದೆ.

ಪ್ರಸ್ತುತ ಭಾಶಾ ಕಲಿಕೆಯ ಯೋಜನೆಯು, ಪ್ರೌಢಶಾಲೆಯ ಹಂತದವರೆಗೆ ಮೂರು ಭಾಶೆ(ತ್ರಿಭಾಶಾ ಸೂತ್ರ)ಗಳ ಕಲಿಕೆಯ ನೆಲೆಯಲ್ಲಿಯೂ, ನಂತರದಲ್ಲಿ ಎರಡು ಭಾಶೆ(ದ್ವಿಭಾಶಾ ಸೂತ್ರ)ಗಳ ಕಲಿಕೆಯೆಂತಲೂ ಸಂಕಥಿಸಿಕೊಂಡಿರುವುದು ವಸಾಹತು ಪ್ರಜ್ನೆಯ ಪರಿಣಾಮವೇ ಆಗಿದೆ. ಈ ಕಾರಣದಿಂದ, ಹುಟ್ಟಿನಿಂದ ತಿಳಿಯುತ್ತಾ ಬರುವ ಭಾಶೆ(ತಾಯಿಭಾಶೆ)ಯನ್ನು ಮೊದಲ ಭಾಶೆಯಾಗಿ ಮತ್ತು ಔಪಚಾರಿಕ ಶಿಕ್ಷಣದ ಯಾವುದೋ ಒಂದು ಹಂತದಲ್ಲಿ ಕಲಿಯಲು ಆರಂಭಿಸುವ ಭಾಶೆ(ಅನ್ಯ ಭಾಶೆ)ಯನ್ನು ಎರಡನೆ ಭಾಶೆಯಾಗಿ ಕಲಿಯುವ ಕಲಿಕೆಯ

ಮಾನದಂಡಗಳು ಒಂದೇ ಎಂಬಂತೆಯೂ ನಂಬಿಸಿಕೊಂಡು ಬರಲಾಗಿದೆ. ಹೀಗೆ ಕಲಿಯುವ ಭಾಶೆಗಳ ಔಪಯೋಗಿಕ ಮತ್ತು ವ್ಯವಹಾರಿಕ ನೆಲೆಗಳ ವಿಸ್ತೃತತೆಯನ್ನು ಮುಖ್ಯವಾಗಿಸಿಕೊಂಡು ಇಡೀ ಭಾಶಾ ಕಲಿಕೆಯ ಸಂದರ್ಭವನ್ನು ಸ್ಪರ್ಧಾತ್ಮಕಗೊಳಿಸಲಾಗಿದೆ. ಜಾಗತಿಕ ವಿದ್ಯಮಾನಗಳಿಗೆ ಎದುರಾಗಬೇಕಾಗಿರುವ ಕಾರಣಗಳನ್ನು ಪ್ರಮುಖವಾಗಿಸಿಕೊಂಡು ನಮ್ಮ ಸಂದರ್ಭದಲ್ಲಿ ಕನ್ನಡ ಭಾಶೆಯ ಎದುರಿಗೆ ಇಂಗ್ಲಿಶನ್ನು ಇರಿಸಿ ಈ ಸ್ಪರ್ಧೆಯನ್ನು ಮತ್ತಶ್ಟು ಪರಿಣಾಮಕಾರಿಯಾಗಿ ಕಟ್ಟಲಾಗಿದೆ. ಇದರಿಂದಾಗಿ ಇಂಗ್ಲಿಶ್‌ನ ಅಗತ್ಯ ಪ್ರಶ್ನಾತೀತವಾಗಿ ಸಂಕಥನಗೊಂಡು ಕನ್ನಡದ ಅಗತ್ಯ ಎಶ್ಟು? ಯಾಕೆ? ಹೇಗೆ? ಎಂಬ ಪ್ರಶ್ನೆಗಳು ಕಳೆದ ಶತಮಾನದ ಕನ್ನಡ ಜಗತ್ತಿನ ಪ್ರಮುಖ ವಿದ್ಯಮಾನವಾದ ಕರ್ನಾಟಕ ಏಕೀಕರಣ ಕಾಲದಿಂದಲೂ ಒಂದು ದೊಡ್ಡರೀತಿಯ ವಾಗ್ವಾದವನ್ನೆ ಹುಟ್ಟುಹಾಕಿವೆ. ಆಡಳಿತ ಸಂಬಂಧಿಯಾಗಿ ಇದನ್ನು ಇನ್ನಶ್ಟು ಗೊಂದಲಗೊಳಿಸಿ ಈ ಸ್ಥಾಪಿತ ಸ್ಥಿತಿಯನ್ನು ಕಾಪಾಡಿಕೊಳ್ಳುವ ಹುನ್ನಾರುಗಳನ್ನು ನಿರಂತರವಾಗಿ ಬೆಂಬಲಿಸಲಾಗುತ್ತಿದೆ. ಇದನ್ನೂ ಸಹ ವಿಸ್ತೃತವಾಗಿ ಕನ್ನಡದ ಆತಂಕಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲು ಅವಕಾಶವಿದೆ. ಆದರೆ ಪ್ರಸ್ತುತ ಅಧ್ಯಯನದ ಉದ್ದೇಶಕ್ಕನುಗುಣವಾಗಿ ಹೊರಗಿರಿಸಲಾಗಿದೆ. ಈ ವಿದ್ಯಮಾನವನ್ನು ಮತ್ತೊಂದು ಬಗೆಯಲ್ಲಿ ವಸಾಹತು ಸಂದರ್ಭದಿಂದಲೂ ಭಾರತ ಸ್ವಾತಂತ್ರ್ಯ ಹೋರಾಟದ ಜೊತೆಜೊತೆಯಲ್ಲೆ ನಾಡು-ನುಡಿಯ ಪ್ರೇಮದ ಭಾವನಾತ್ಮಕ ನೆಲೆಯ ಪ್ರಚೋದಕ ಸಂಗತಿಗಳನ್ನೊಳಗೊಂಡ ಸಂಕಥನವಾಗಿಯೂ ರೂಪುಗೊಳಿಸಲಾಗಿದೆ. ಕನ್ನಡ ಕಲಿಕೆಯಲ್ಲಿ ಭಾವನಾತ್ಮಕ ಸಂಗತಿಗಳೂ ಕೂಡ ಹೇಗೆ ಕಲಿಕೆಯ ವಾಸ್ತವವನ್ನು ಮರೆಮಾಚುವಂತೆ ಪ್ರಭಾವಿಸುತ್ತವೆ ಎನ್ನುವುದೂ ಸಹ ಪ್ರತ್ಯೇಕ ಅಧ್ಯಯನದ ವಸ್ತುವಾಗಬಲ್ಲುದು. ಇದು ಕನ್ನಡ ಭಾಶಾ ಕಲಿಕೆಯ ವಿದ್ಯಮಾನಗಳನ್ನು ಮತ್ತೊಂದು ಬಗೆಯಲ್ಲಿ ಪ್ರಭಾವಿಸಿದೆ. ಆ ಮೂಲಕ ಕನ್ನಡ ಭಾಶಾ ತಿಳುವಳಿಕೆಯ ಪರಂಪರೆಯೆಂದರೆ ಕನ್ನಡ ಸಾಹಿತ್ಯ ಜ್ಞಾನದ ಪರಂಪರೆ ಮಾತ್ರ ಎಂಬ ತಿಳುವಳಿಕೆಯೊಂದಿಗೆ ತಳುಕು ಹಾಕಿಕೊಂಡು ನಾಳೆಯ ಪ್ರಜೆಗಳಾಗುವ ಕನ್ನಡ ಕಲಿಕಾ ಸಮುದಾಯಕ್ಕೆ ಕಟ್ಟಿಕೊಡುವ ಇರಾದೆಯನ್ನು ಜಾರಿಗೆ ತಂದಂತಾಗಿದೆ.

ಇಂಥ ಅಪಕಲ್ಪನೆಗಳು ಕನ್ನಡ ಭಾಶೆಯನ್ನು ಅರಿಯುವಲ್ಲಿ, ಆ ಮೂಲಕ ಕನ್ನಡ ಸಮಾಜವನ್ನು ಅರಿಯುವಲ್ಲಿ ತೊಡಕಿನದಾಗಿದೆ ಎಂದು ಪ್ರಸ್ತುತ ಅಧ್ಯಯನ ಭಾವಿಸುತ್ತದೆ. ಕನ್ನಡ ಭಾಶಿಕ ಪರಿಸರವನ್ನು, ಕನ್ನಡ ಸಮುದಾಯಗಳನ್ನು ಎದುರುಗೊಳ್ಳುವಲ್ಲಿ ಇದು ಅಸಮಾನ ಸವಾಲುಗಳನ್ನು ಒಡ್ಡುತ್ತದೆ. ಕನ್ನಡ ಬದುಕಿನ ಸಂದರ್ಭದ ನಿರ್ವಹಣೆಯನ್ನು ಇಕ್ಕಟ್ಟಿನಲ್ಲಿಡುತ್ತದೆ. ಆಧುನಿಕ ಬದುಕು ಒಡ್ಡುತ್ತಿರುವ ಸವಾಲುಗಳ ಎದುರು ಕನ್ನಡ

ಸಮುದಾಯವನ್ನು **ಕೀಳರಿಮೆ**ಯಲ್ಲಿಡುತ್ತದೆ ಎಂಬ ಅನುಮಾನಗಳನ್ನು ಮುನ್ನೆಲೆಗೆ ತರಲು ಪ್ರಯತ್ನಿಸುತ್ತದೆ. ಈ ಹಿನ್ನೆಲೆಯಲ್ಲಿ, ಬದಲಾಗುತ್ತಿರುವ ಸಾಮಾಜಿಕ ಸಂದರ್ಭಗಳನ್ನು ಕನ್ನಡ ಭಾಶಿಕವಾಗಿ ಎದುರುಗೊಳ್ಳುವುದು ಹೇಗೆ ಎಂಬ ಪ್ರಶ್ನೆಗಳನ್ನಿಟ್ಟುಕೊಳ್ಳದ ಕನ್ನಡ ಶಿಕ್ಶಣ ಚಿಂತನೆಯು ಸಂಪ್ರದಾಯ, ಚರಿತ್ರೆ ಮತ್ತು ಪರಂಪರೆಗಳ ಹಳಹಳಿಕೆಯಲ್ಲಿ ಹೊಸ ತಲೆಮಾರುಗಳನ್ನು ಕೊಳೆಹಾಕುತ್ತದೆ. ಆದ್ದರಿಂದಾಗಿ ಕಲಿಕೆಯ ಪಠ್ಯ ನಿರ್ಧಾರ ಎನ್ನುವುದು ಕಣ್ಣಿಗೆ ಕಾಣದ ಗುಪ್ತ ಚಟುವಟಿಕೆಯಾಗಿ ಚಾಲನೆಗೊಂಡು ಬೋಧನೆ ಎನ್ನುವುದು ಹಾಗೆ ನಿರ್ಧಾರವಾದ ಪಠ್ಯದ ಮಾಹಿತಿಗಳನ್ನು ಅಧಿಕಾರ ಸಂಬಂಧಗಳಲ್ಲಿ ರವಾನಿಸುವುದಾಗುತ್ತದೆ. ಕಲಿಕೆ ಎನ್ನುವುದು ಮಾಹಿತಿ ರೂಪದ **ಸಾರ**ವನ್ನು ಹೀರುವುದು ಎಂದಶ್ಟೆ ಆಗಿ ಸಾಮಾಜಿಕವಾಗಿ ಪ್ರವೃತ್ತವಾಗಿರುವ ಅಸಮಾನ ನೆಲೆಗಳ ಹೊರೆಯನ್ನು ಕಲಿಕಾರ್ಥಿಯು ಅಪರಾಧಿಯಂತೆ ಹೊರುವುದೇ ಆಗುತ್ತದೆ. ಈ ಸಾರವನ್ನು ಯಾರು, ಎಶ್ಟು ಹೀರಿದ್ದಾರೆ ಎಂಬುದನ್ನು ಪರೀಕ್ಶಿಸುವ ಮೂಲಕ ಚಾಲನೆಗೊಳ್ಳುವ ವ್ಯಕ್ತಿ(ಕಲಿಕಾರ್ಥಿ)ಯ ಸಾಮಾಜೀಕರಣ ಪ್ರಕ್ರಿಯೆಯು ಇದನ್ನು ಮತ್ತಶ್ಟು ಗಟ್ಟಿಗೊಳಿಸಿಕೊಳ್ಳುತ್ತದೆ. ನಂತರದ ನಾಳೆಗಳಲ್ಲಿ ಕಲಿಕೆಯನ್ನು ಪರಿಶೀಲಿಸಿಕೊಂಡು ಹಿಂದಿರುಗುವ ಪ್ರಸಂಗ ಒದಗುವುದಿಲ್ಲವಾದ್ದರಿಂದ ಕಲಿಯಬೇಕಾಗಿದ್ದುದು ಏನು ಎಂಬುದರ ಕುರಿತ ಹೊಣೆಗಾರಿಕೆಯಿಂದ ಶಿಕ್ಶಣ ವ್ಯವಸ್ಥೆಯು ದೂರವೆ ಉಳಿದುಬಿಡುತ್ತದೆ. ಶಿಕ್ಶಣ ವ್ಯವಸ್ಥೆ ಎನ್ನುವುದು ದ್ವೀಪವಾಗಿ ಕಾಣುತ್ತದೆ. ಈ ಹಿನ್ನೆಲೆಯಲ್ಲಿ ಶಿಕ್ಶಣದ ಭಾಗವಾಗಿ ಕಲಿತ ಕನ್ನಡ ಭಾಶೆ ಕುರಿತ ಪ್ರಶ್ನೆಗಳು ಸವಾಲಾಗಿ ನಿಲ್ಲುತ್ತವೆ.

ಈ ಹಿನ್ನೆಲೆಯಲ್ಲಿ, ಸದ್ಯದ ಅಧ್ಯಯನವು ಪದವಿ ಹಂತದ ಕನ್ನಡ ಭಾಶೆಯ ಪಠ್ಯಕ್ರಮಗಳ ಚಾರಿತ್ರಿಕ ಸ್ವರೂಪವನ್ನು ಗಮನಕ್ಕೆ ತೆಗೆದುಕೊಂಡು ಈ ಸಮಸ್ಯೆಯನ್ನು ಕೈಗೆತ್ತಿಕೊಳ್ಳುತ್ತದೆ. ಒಂದು **ಭಾಶಿಕ ಸಮುದಾಯ**ದ ಕಾಳಜಿ ಎನ್ನುವಾಗ, ಅನೇಕ ಕುಲ, ಜಾತಿ, ಲಿಂಗ, ಭೌಗೋಳಿಕ ಪರಿಸರ, ಜೀವನ ವಿಧಾನಗಳು ಇಂಥ ಕಾಳಜಿಯನ್ನು ನಿರಂತರವಾಗಿ ಮಿಡಿಯುತ್ತಿರುತ್ತವೆ ಎಂದು ತಿಳಿಯಬೇಕಾಗುತ್ತದೆ. ಹೀಗಾಗಿ, ಕನ್ನಡ ಭಾಶೆಯೆನ್ನುವುದು ಏಕೀಕೃತವಾದದ್ದಲ್ಲ. ಏಕ ಘನಾಕೃತಿಯಲ್ಲಿ ಪರಿಕಲ್ಪಿಸಲು ಬರುವುದಿಲ್ಲ. ಸಾಮಾಜಿಕ ಮತ್ತು ಭೌಗೋಳಿಕ ಸಂಗತಿಗಳಿಗನುಗುಣವಾಗಿ **ಕನ್ನಡಗಳು** ಕಾರ್ಯಪ್ರವೃತ್ತವಾಗಿದ್ದು ನಿರ್ದಿಶ್ಟವಾದ ಕಾಲ ಮತ್ತು ಅವಕಾಶಗಳಲ್ಲಿ ಏಕಘನಾಕೃತಿಯ ಕಲ್ಪನೆಗಳೊಂದಿಗೆ ಸದಾ ಸಂಘರ್ಶವನ್ನು ಏರ್ಪಡಿಸಿಕೊಂಡಿರುತ್ತವೆ. ಈ ಬಹುಕನ್ನಡಗಳು ಆಯಾ ಜೀವನ ವಿಧಾನಗಳಿಂದಲೇ ಹುಟ್ಟಿಬಂದಿರುತ್ತವೆಯಾದ್ದರಿಂದಾಗಿ, ಪದರಚನೆ, ವಾಕ್ಯರಚನೆ ಮತ್ತು ಉಚ್ಚಾರಣೆಯಲ್ಲಿ

ವ್ಯತ್ಯಯಗಳು ಉಂಟಾಗುತ್ತವೆಯಾದರೂ ಅವುಗಳ ವ್ಯಾಕರಣ ನಿಯಮಗಳು ಒಂದೇ ಆಗಿರುತ್ತವೆ. ಅಲ್ಲದೆ, ಈ ಬಹುಕನ್ನಡಗಳು ಪರಸ್ಪರ ಹೊಂದಾಣಿಕೆಯಲ್ಲಿದ್ದು, ಅರ್ಥ ಚಲಾವಣೆಯು ಸಹಜವಾಗಿಯೆ ನಡೆಯುತ್ತಿರುತ್ತದೆ ಮತ್ತು ಒಂದು ಪ್ರಭೇದ ಇನ್ನೊಂದನ್ನು ಬಳಕೆಯ ಪ್ರಕ್ರಿಯೆಯಲ್ಲಿ ತ್ಯಜಿಸುವುದಿಲ್ಲ. ಆದ್ದರಿಂದಾಗಿ ಭಾಶೆಯ ಕಲಿಕೆ ಮತ್ತು ಬಳಕೆಯ ಸಂಬಂಧಗಳು ಏರ್ಪಡಿಸಿಕೊಂಡಿರುವ ಸಂಘರ್ಶಗಳನ್ನು ಪಠ್ಯಕ್ರಮಗಳ ಸಂದರ್ಭದಲ್ಲಿಟ್ಟು ನೋಡುವುದು ಮುಖ್ಯವಾಗುತ್ತದೆ. ಯಾಕೆಂದರೆ ಬಳಕೆಯ ಭಾಶೆ ಮತ್ತು ಕಲಿಕೆಯ ಭಾಶೆಯ ನಡುವೆ ಸೃಶ್ಟಿಯಾಗುವ ಕನಿಶ್ಟ ಮತ್ತು ಶ್ರೇಶ್ಟತೆಯ ಕಲ್ಪನೆಗಳು ವ್ಯಕ್ತಿಯನ್ನು ಮೇಲು ಅಥವಾ ಕೀಳಾಗಿ ನಡೆಸಿಕೊಳ್ಳುವಲ್ಲಿ ಪ್ರವೃತ್ತವಾಗುತ್ತವೆ[5]. ಇದನ್ನು ನಮ್ಮ ಶಿಕ್ಶಣ ವ್ಯವಸ್ಥೆಯಲ್ಲಿನ ಸಂಘಟಿತ ಮೌಲ್ಯಗಳು ಹೇಗೆ ಆಗುಮಾಡಿವೆ ಎಂಬುದನ್ನು ಪರಿಶೀಲನೆಗೆ ಒಳಪಡಿಸುವುದರಿಂದ ಈ ಅಧ್ಯಯನವು ಮಹತ್ವವನ್ನು ಪಡೆದುಕೊಳ್ಳುತ್ತದೆ. ಆದ್ದರಿಂದಾಗಿ ದುಡಿಮೆಯ ಪರಂಪರೆಗಳನ್ನು ಹೊರಗಿಟ್ಟ ಕಲಿಕೆಯ ಪ್ರಕ್ರಿಯೆಯು ಪಾರಂಪರಿಕವಾದ ಬೌದ್ಧಿಕ ಯಜಮಾನಿಕೆಯ ಹೆಸರಲ್ಲಿ ಗುಲಾಮ ವ್ಯವಸ್ಥೆಯನ್ನಶ್ಟೆ ಸಾಕಲುತೊಡಗುತ್ತದೆ ಎಂಬುದನ್ನು ಪಠ್ಯಕ್ರಮಗಳ ಸಂದರ್ಭದ **ಸಾಮಾಜಿಕ ಪ್ರತಿನಿಧೀಕರಣ**ವನ್ನು ವಿಶ್ಲೇಶಿಸುವುದರ ಮೂಲಕ ಗ್ರಹಿಸಲಾಗುತ್ತದೆ.

ಆಧುನಿಕ ಅರ್ಥದಲ್ಲಿ ಶಿಕ್ಶಣ ಎನ್ನುವುದು ವ್ಯಕ್ತಿಯನ್ನು **ನಾಗರಿಕ**ಗೊಳಿಸುವ ಪ್ರಕ್ರಿಯೆಯ ಹೆದ್ದಾರಿಯೆಂದು ಭಾವಿಸುತ್ತಾ ಬರಲಾಗಿದೆ. ಹುಟ್ಟಿನಿಂದ ಅನಾಗರಿಕ ಸ್ಥಿತಿ ಪ್ರವೃತ್ತವಾಗಿರುತ್ತದೆ. ಅಂಥ ಅನಾಗರಿಕ ಸ್ಥಿತಿಯಿಂದ ವ್ಯಕ್ತಿಯನ್ನು ಬಿಡಿಸಿ ಆಧುನಿಕ ಬದುಕಿಗೆ ಅಣಿಗೊಳಿಸುವುದು, **ಶಿಶ್ಟ**ರನ್ನಾಗಿ ಮಾಡುವುದು, **ಮಾನವೀಯ**ರನ್ನಾಗಿ, **ಮಾನವಂತ**ರನ್ನಾಗಿ[6] ರೂಪಿಸುವುದು ಶಿಕ್ಶಣ ಎಂದು ಭಾವಿಸಲಾಗಿದೆ. ಬದಲಾವಣೆ ಅಥವಾ ಪರಿವರ್ತನೆ ಶಿಕ್ಶಣದ ಗುರಿ ಎಂಬುದು ಇದನ್ನು ರೂಪಿಸುವ ಆಳುವ ವ್ಯವಸ್ಥೆ(ಸ್ಟೇಟ್)ಯ ನಂಬಿಕೆಯಾಗಿದೆ. ಭಾರತದ ಸಂದರ್ಭದಲ್ಲಿ ಜಾತಿ, ಕುಲ, ಧರ್ಮ ಸಹಿತವಾದ ಸಾಮಾಜಿಕ ಪರಿಸರದಿಂದ ವ್ಯಕ್ತಿಯನ್ನು ಬಿಡಿಸಿ ಜಾತ್ಯಾತೀತ(ಸೆಕ್ಯುಲರ್) ನೆಲೆಯಲ್ಲಿ ಪ್ರತಿಶ್ಟಾಪನೆ ಮಾಡುವುದು ಎಂಬ **ಧಾರ್ಮಿಕ** ಮತ್ತು **ರಾಜಕೀಯ** ಅರ್ಥವನ್ನು ಶಿಕ್ಶಣ ಪಡೆದುಕೊಂಡಿದೆ. ಸದ್ಯದ ಅಧ್ಯಯನ ಸಂದರ್ಭದಲ್ಲಿ ಕನ್ನಡ ಭಾಶೆಯ ಪಠ್ಯಕ್ರಮವನ್ನು ಈ ಹಿನ್ನೆಲೆಯಲ್ಲೂ ಪರಿಶೀಲಿಸಲಾಗುತ್ತದೆ.

ಪದವಿ ಹಂತದ ಕನ್ನಡ ಪಠ್ಯಕ್ರಮಗಳ ಸಂದರ್ಭದಲ್ಲಿ ನಿರ್ದಿಶ್ಟ ಸಮುದಾಯಗಳು ಬಹುಮಟ್ಟಿಗೆ ಭಾಗಿಯಾಗಿರುವುದು ಮೇಲ್ನೋಟಕ್ಕೇ ಕಾಣುವ ಸಂಗತಿಯಾಗಿದೆ. ಇದರ ಹಿಂದಿರುವ ಸಾಮಾಜಿಕ ಮತ್ತು ಸಾಮುದಾಯಿಕ ಹೊಣೆಗಾರಿಕೆಯ ತೊಡಕು ಯಾವ ಬಗೆಯದು

ಎಂಬುದನ್ನು ವಿಶ್ಲೇಶಿಸಿಕೊಳ್ಳಬೇಕಾಗುತ್ತದೆ. ಒಂದು ನಿರ್ದಿಷ್ಟ ಸಮುದಾಯ ಪಾಲ್ಗೊಳ್ಳುವುದರ ಹಿಂದಿನ ಚಾರಿತ್ರಿಕ ವಿದ್ಯಮಾನಗಳನ್ನೂ ವಿವರಿಸಿಕೊಳ್ಳುವ ಅಗತ್ಯವಿದೆ. ಆ ಮೂಲಕ ಆಧುನಿಕ ಕನ್ನಡ ಬದುಕಿನ ಸಂದರ್ಭಲ್ಲಿ ಕನ್ನಡ ಭಾಶೆಯ ಜ್ಞಾನವನ್ನು ಪ್ರಭಾವಿಸಿರುವ ರಾಜಕಾರಣವೊಂದು ಅನಾವರಣಗೊಳ್ಳುತ್ತದೆ ಎಂದು ಈ ಅಧ್ಯಯನ ತಿಳಿದಿದೆ.

ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ, ಪದವಿ ಹಂತದ ಶಿಕ್ಶಣದ ಸಂದರ್ಭದಲ್ಲಿ ಕನ್ನಡ ಭಾಶೆಯ ಜ್ಞಾನವನ್ನು ಕುರಿತ ಪ್ರಶ್ನೆಯು ಕನ್ನಡ ಭಾಶೆಯ ಪಠ್ಯಕ್ರಮವನ್ನು ಆಧರಿಸಿ ನಡೆಯುತ್ತದೆ. ಈ ಹಂತದ ಶಿಕ್ಶಣದಲ್ಲಿ ಕನ್ನಡ ಭಾಶೆಯ ಬಗೆಗಿನ ಜ್ಞಾನದ ಸ್ವರೂಪವನ್ನು ಎಲ್ಲೂ ನಿರ್ವಚಿಸಿಕೊಂಡಿಲ್ಲವಾದ್ದರಿಂದ ಚಾರಿತ್ರಿಕವಾಗಿ ನಿರ್ಧರಿತವಾದ ಪಠ್ಯಕ್ರಮಗಳ ಮೂಲಕವೇ ಗ್ರಹಿಸಬೇಕಾಗುತ್ತದೆ. ೧೯ನೆ ಶತಮಾನದ ಕೊನೆಯಲ್ಲಿ ಕಾಲೇಜು ಸಾಹಿತ್ಯಶಿಕ್ಶಣದ ಭಾಗವಾಗಿ ಆರಂಭವಾದ ಪಠ್ಯಕ್ರಮ ನಂತರದ ನೂರೈವತ್ತಕ್ಕೂ ಹೆಚ್ಚು ವರ್ಶಗಳ ಕನ್ನಡ ಭಾಶೆಯ ತಿಳುವಳಿಕೆಯನ್ನು ಪ್ರಭಾವಿಸುತ್ತಾ ಬಂದಿರುವುದನ್ನು ಕಾಣಬಹುದಾಗಿದೆ. ಈ ಹಿನ್ನೆಲೆಯಲ್ಲಿ ಅಖಿಲ ಭಾರತ ಮಟ್ಟದ ಸಾಹಿತ್ಯ ಚರಿತ್ರೆ, ಸಾಹಿತ್ಯ ಪರಂಪರೆ, ಸಂಸ್ಕೃತಿ ಕುರಿತ ಅಪಕಲ್ಪನೆಗಳು ಕನ್ನಡ ಭಾಶಾ ಕಲಿಕೆಯ ಸ್ವರೂಪವನ್ನು ಪ್ರಬಲವಾಗಿ ನಿಯಂತ್ರಿಸಿವೆ ಎಂಬುದನ್ನು ಪಠ್ಯಕ್ರಮಗಳ ಹಿನ್ನೆಲೆಯಲ್ಲಿ ಪರಿಶೀಲಿಸುವ ಅಗತ್ಯವಿದೆ. ಇದರಿಂದಾಗಿ ಪದವಿ ಹಂತದಲ್ಲಿ ಕನ್ನಡ ಭಾಶೆಯ ಕಲಿಕೆಯ ತರಗತಿಗಳು ಸಾಹಿತ್ಯ ಪಠ್ಯಗಳನ್ನು ಆಧರಿಸಿಯೇ ನಡೆಯುವ ಯೋಜನೆಯೊಂದನ್ನು **ಅನಧಿಕೃತ ಆದರೆ ಕಡ್ಡಾಯ** ನಿಯಮವಾಗಿ ಜಾರಿಗೊಳಿಸಿಕೊಂಡಿರುವುದರಿಂದ ಈ ಪ್ರಶ್ನೆ ಸದ್ಯದ ಅಧ್ಯಯನ ಸಂದರ್ಭದಲ್ಲಿ ಬಹಳ ಮುಖ್ಯವಾದುದಾಗಿದೆ. ಯಾಕೆಂದರೆ ಕಳೆದ ನೂರಕ್ಕೂ ಹೆಚ್ಚು ವರ್ಶಗಳಲ್ಲಿ ಹೀಗೆ ಕನ್ನಡ ಸಾಹಿತ್ಯವನ್ನು ಅಭ್ಯಾಸ ಮಾಡುತ್ತಾ ಬಂದ ಕಲಿಕಾರ್ಥಿಗಳು ಕಲಿಯುವಂತೆ ಮಾಡಿದ್ದು **ಭಾರತೀಯ ಕಾವ್ಯ ಮೀಮಾಂಸೆ** ಎನ್ನುವ ವೈಧಿಕ ಮೀಮಾಂಸೆಯನ್ನು. ನಂಬಿಸಿದ್ದು **ಅದೇ** ಕನ್ನಡ ಸಾಹಿತ್ಯ ಮೀಮಾಂಸೆ ಎಂದು, ಅದನ್ನು ಚಾಲನೆಯಲ್ಲಿಡಲು ಜಾರಿಗೊಳಿಸಿದ ಏಕೀಕೃತವಾದ ಕನ್ನಡದ ಕಲಿಕೆಯೆ ಕನ್ನಡ ಭಾಶೆಯ ಜ್ಞಾನವೆಂದು. ಹೀಗೆ ಕಲಿತವರೇ ಮುಂದೆ ಕನ್ನಡ ಭಾಶಾ ಪಠ್ಯಗಳನ್ನು ಬೋಧಿಸುವ ಬೋಧಕರು ಎಂಬುದನ್ನು ಗಮನದಲ್ಲಿಟ್ಟುಕೊಂಡರೆ ಸಂಸ್ಕೃತ ಪರಂಪರೆಯ ಸಾಹಿತ್ಯ ಚರಿತ್ರೆ, ಸಾಹಿತ್ಯ ಪರಂಪರೆ, ಭಾರತೀಯ ಸಂಸ್ಕೃತಿ ಎಂಬ ಅಪಕಲ್ಪನೆಗಳು ಕನ್ನಡ ಭಾಶೆಯ ತರಗತಿಗಳನ್ನು ಹೇಗೆ ವ್ಯವಸ್ಥಿತವಾಗಿ ನಿಯಂತ್ರಿಸಿವೆ ಎಂಬುದನ್ನು ಪಠ್ಯಕ್ರಮಗಳ ಮೂಲಕವೇ ತಿಳಿಯುವ ಮತ್ತೊಂದು ಸಾಧ್ಯತೆಯನ್ನು ಈ ಅಧ್ಯಯನ ಒದಗಿಸುತ್ತದೆ.

ಆದ್ದರಿಂದಾಗಿ, ಕರ್ನಾಟಕದಲ್ಲಿರುವುದರಿಂದ ಕನ್ನಡ ಓದಬೇಕು. ಕನ್ನಡ ಪರಂಪರೆಯನ್ನು ತಿಳಿದುಕೊಳ್ಳಲು ಕನ್ನಡ ಓದಬೇಕು. ಕನ್ನಡಿಗರಾಗಿದ್ದು ಕನ್ನಡ ಪರಂಪರೆ, ಕನ್ನಡ ಸಾಹಿತ್ಯ ಚರಿತ್ರೆಯ ಬಗ್ಗೆ ತಿಳಿದುಕೊಳ್ಳದಿರುವುದು ಅವಮಾನ, ಪಂಪ ರನ್ನ ಕುಮಾರವ್ಯಾಸ ಕುವೆಂಪು ಬೇಂದ್ರೆ ತಿಳಿದಿಲ್ಲ ಎಂದರೆ ಕನ್ನಡಿಗರಾಗಿ ಏನು ಪ್ರಯೋಜನ?, ಹೀಗೆ ಭಾವನಾತ್ಮಕವಾಗಿ ಹತ್ತಿಕ್ಕುವ ಅಂಶಗಳು ಸಹ ಇಂಥ ವ್ಯವಸ್ಥಿತವಾದ ಪಾರಂಪರಿಕ ಬೋಧನೆ ಮತ್ತು ಕಲಿಕೆಯನ್ನು ಕೇಂದ್ರವಾಗಿಸಿಕೊಂಡು ಅದರ ಸುತ್ತಲೂ ಗಿರಕಿ ಹೊಡೆಯತೊಡಗುತ್ತವೆ. ಈ ಕಾರಣವಾಗಿಯೆ, ಕನ್ನಡ ಸಾಹಿತ್ಯ ಎನ್ನುವುದು ಇಡೀ ಕನ್ನಡ ಸಮಾಜವನ್ನು ಪ್ರತಿನಿಧಿಸುವ ವಕ್ತಾರಿಕೆಯಾಗಿ ಹೊಣೆ ಹೊತ್ತುಕೊಂಡಂತೆ ಕಾಣುತ್ತದೆ ಅಥವಾ ಹಾಗೆ ಬಿಂಬಿಸಲಾಗಿದೆ. ಈ ಹಿನ್ನೆಲೆಯಲ್ಲಿ, ಪಠ್ಯನಿರ್ಮಾಣ, ಪಠ್ಯನಿರ್ಧಾರದ ಹಿಂದೆ ಕೆಲಸ ಮಾಡುವ ಸಂಘಟಿತ ಮೌಲ್ಯಗಳು ಯಾವುದೆಂಬುದನ್ನು ಪರಿಶೀಲಿಸುವುದು ಮುಖ್ಯವಾಗುತ್ತದೆ. ಇದು ಸಾಮಾಜಿಕ ಹೊಣೆಗಾರಿಕೆಯನ್ನು ಕಂಡುಕೊಳ್ಳುವುದರ ಹಿಂದಿನ ಕಾಳಜಿಯೂ ಆಗಿದೆ. ಈ ಹಿನ್ನೆಲೆಯಲ್ಲಿ, ಮುಖ್ಯವಾಗಿ ಕಲಿಕೆಯ ಪ್ರಮುಖ ಪರಿಕರಗಳೆಂದು ರೂಪಿಸಿಕೊಂಡಿರುವ ಕನ್ನಡಭಾಷಾ ಪಠ್ಯಕ್ರಮ ಮತ್ತು ಇದಕ್ಕೆ ಸಂಬಂಧಿಸಿದ ವಿದ್ಯಮಾನಗಳಾದ ಪಠ್ಯ, ಬೋಧನೆ, ಕಲಿಕೆ, ಪರೀಕ್ಷೆ ಮತ್ತು ಮೌಲ್ಯಮಾಪನ ಸಂಗತಿಗಳನ್ನಿಟ್ಟುಕೊಂಡು **ಕನ್ನಡ ಭಾಷಾ ಕಲಿಕೆಯ ಪದವಿ ಪಠ್ಯಗಳು ಮತ್ತು ಸಾಮಾಜಿಕ ಹೊಣೆಗಾರಿಕೆಯ ತೊಡಕುಗಳು** ವಿಶಯ ಕುರಿತಾದ ಅಧ್ಯಯನವನ್ನು ನಡೆಸಲಾಗಿದೆ.

**೨.೨ ಅಧ್ಯಯನದ ವ್ಯಾಪ್ತಿ ಮತ್ತು ಮಿತಿ:**

ಕರ್ನಾಟಕದಲ್ಲಿ ಇತ್ತೀಚೆಗೆ ಆರಂಭಗೊಂಡವೂ ಸೇರಿದಂತೆ ಒಟ್ಟು ೧೧ ವಿಶ್ವವಿದ್ಯಾಲಯಗಳಿದ್ದು, ಅದರಲ್ಲಿ ೮ ವಿಶ್ವವಿದ್ಯಾಲಯಗಳು ಸ್ನಾತಕ ಪದವಿ ಕಾರ್ಯಕ್ರಮವನ್ನು ಯೋಜಿಸಿವೆ. ಇವೆಲ್ಲವನ್ನು ಒಳಗೊಂಡಂತೆ ಅಧ್ಯಯನವನ್ನು ಯೋಜಿಸುವುದು ಅತ್ಯಂತ ಹೆಚ್ಚು ಅವಧಿ, ಶ್ರಮವನ್ನು ಬಯಸುತ್ತದೆ. ಮೈಸೂರು ವಿಶ್ವವಿದ್ಯಾಲಯವು ೧೯೧೬ ರಲ್ಲೇ ಆರಂಭವಾದ ಕರ್ನಾಟಕದ ಮೊದಲ ವಿಶ್ವವಿದ್ಯಾಲಯವಾಗಿದ್ದು ಸರಿಸುಮಾರು ೧೦೦ ವರುಶಗಳ ಪಠ್ಯಗಳ ವಿದ್ಯಮಾನಗಳನ್ನು ಗಮನಿಸುವುದು ಸಹ ಪ್ರಸ್ತುತ ಅಧ್ಯಯನದ ಅವಧಿಯ ದೃಶ್ಟಿಯಿಂದ ಸುಲಭಸಾಧ್ಯವಲ್ಲ. ಹಾಗಾಗಿ ಅಧ್ಯಯನದ ಅವಧಿ ಮತ್ತು ಖಚಿತತೆಯ ದೃಶ್ಟಿಯಿಂದ ಬೆಂಗಳೂರು ವಿಶ್ವವಿದ್ಯಾಲಯದ ಪದವಿ ಹಂತದ ಕನ್ನಡ ಭಾಷಾ ಕಲಿಕೆಯ ಪಠ್ಯಕ್ರಮಗಳಿಗೆ ಸಂಬಂಧಿಸಿದಂತೆ ಈ ಮೇಲೆ ವಿವರಿಸಿಕೊಂಡಿರುವ ಸ್ವರೂಪ ಮತ್ತು ಉದ್ದೇಶಗಳ ಹಿನ್ನೆಲೆಯಲ್ಲಿ

ಈ ಸಂಶೋಧನಾ ಅಧ್ಯಯನವನ್ನು ನಿರ್ಬಂಧಿಸಿಕೊಳ್ಳಲಾಗಿದೆ. ಈ ಕಾರಣಕ್ಕಾಗಿ ಮುಖ್ಯ ಮಾಹಿತಿ ಸಂಪನ್ಮೂಲವಾಗಿ ಬೆಂಗಳೂರು ವಿಶ್ವವಿದ್ಯಾಲಯದ ಪದವಿ ತರಗತಿಗಳ ಕಲಿಕಾರ್ಥಿಗಳಿಗೆಂದು ನಿಯಮಿಸಲ್ಪಟ್ಟ ಭಾಷಾ ಕಲಿಕೆಯ ಪಠ್ಯಕ್ರಮಗಳನ್ನು, ಮತ್ತು ಪಠ್ಯಕ್ರಮ ಸಂಬಂಧಿ ಚಟುವಟಿಕೆಗಳಾದ ಪಠ್ಯ, ಬೋಧನೆ, ಕಲಿಕೆ, ಪರೀಕ್ಷೆ ಮತ್ತು ಮೌಲ್ಯಮಾಪನ ವಿದ್ಯಮಾನಗಳನ್ನು ಪ್ರಸ್ತುತ ಅಧ್ಯಯನ ಪರಿಗಣನೆಗೆ ತೆಗೆದುಕೊಳ್ಳುತ್ತದೆ. ಅಂದರೆ ಬೆಂಗಳೂರು ವಿಶ್ವವಿದ್ಯಾಲಯ ಆರಂಭವಾದ ೧೯೬೪-೬೫ರ ಶೈಕ್ಷಣಿಕ ವರುಶದಿಂದ ೨೦೦೬-೦೭ರ ಶೈಕ್ಷಣಿಕ ವರುಶದವರೆಗೆ ಕಾಲಮಿತಿಯನ್ನು ಹಾಕಿಕೊಂಡಿದ್ದು, ಸುಮಾರು ೪೩ ಶೈಕ್ಷಣಿಕ ವರುಶಗಳ ಕನ್ನಡಭಾಷಾ ಕಲಿಕೆಯ ಪಠ್ಯಕ್ರಮವನ್ನು ಪ್ರಮುಖವಾಗಿ ಈ ಅಧ್ಯಯನದಲ್ಲಿ ಬಳಸಲಾಗಿದೆ. ಆದರೆ, ಹೀಗಿರುವಾಗಲೂ ಅಧ್ಯಯನದ ತಾತ್ವಿಕ ದೃಷ್ಟಿಕೋನವನ್ನು ಪರಿಶೀಲಿಸಿಕೊಳ್ಳುವ ಮತ್ತು ಕನ್ನಡ ಭಾಷಾ ಕಲಿಕೆಯ ಕರ್ನಾಟಕದ ಒಟ್ಟು ಸ್ವರೂಪವನ್ನು ಗ್ರಹಿಸುವ ಕಾರಣದಿಂದ ಪ್ರಾಸಂಗಿಕವಾಗಿ ಇತರೆ ವಿಶ್ವವಿದ್ಯಾಲಯದ ಕನ್ನಡ ಭಾಷಾ ಕಲಿಕೆಯ ಪಠ್ಯಕ್ರಮ ಸಂಬಂಧಿ ವಿಚಾರಗಳನ್ನು ಚರ್ಚೆಗೆ ಪೂರಕವಾಗಿ ಒದಗಿಸಿಕೊಳ್ಳಲಾಗಿದೆ.

ಕನ್ನಡ ಭಾಶೆಯ ಕಲಿಕೆಯ ಈ ವಿದ್ಯಮಾನವು ಕನ್ನಡ ಸಾಹಿತ್ಯ ಪಠ್ಯಗಳ ಮೂಲಕವೇ ಪ್ರವೃತ್ತವಾಗಿರುವುದರಿಂದ ಕನ್ನಡ ಸಾಹಿತ್ಯ, ಸಾಹಿತ್ಯ ವಿಮರ್ಶೆಯ ಕುರಿತ ವಿಚಾರಗಳು ಪಠ್ಯನಿರ್ಧಾರ, ಬೋಧನೆ ಮತ್ತು ಕಲಿಕೆಯ ಸಂಬಂಧಗಳಲ್ಲಿ ಮತ್ತೆ ಮತ್ತೆ ತಲೆತೋರಿಸುವ ಅಂಶಗಳೇ ಆಗುತ್ತವೆ. ಆದರೆ ಪ್ರಸ್ತುತ ಅಧ್ಯಯನವು ಕನ್ನಡ ಭಾಶಾ ಕಲಿಕೆಯ ವಿದ್ಯಮಾನವನ್ನು ಈ ನಿಲುವಿನಿಂದ ಪ್ರವೇಶಿಸುವುದಿಲ್ಲವಾಗಿ ಉದ್ದೇಶಪೂರ್ವಕವಾಗಿಯೇ ಈ ಕುರಿತ ಚರ್ಚೆಯನ್ನು ಪಕ್ಕಕ್ಕೆ ಸರಿಸುತ್ತದೆ. ಜೊತೆಗೆ, ಭಾಶೆಯ ಕಲಿಕೆಯಲ್ಲಿ ಸಾಹಿತ್ಯವೇ ಪ್ರಮುಖವಾಗುವ ಇಂಥ ವಿದ್ಯಮಾನಗಳನ್ನು ಅನುಮಾನದಿಂದಲೇ ನೋಡುತ್ತದೆ. ಭಾಶೆಯ ಕಲಿಕೆ ಎನ್ನುವಾಗ ಅದನ್ನು ಭಾಶಾಶಾಸ್ತ್ರ, ಭಾಶಾವಿಜ್ಞಾನಗಳ ನೆಲೆಯಿಂದ ನೋಡಬೇಕೆನ್ನುವ ಒತ್ತಡವೂ ಸಹಜವಾಗಿಯೆ ಉಂಟಾಗುತ್ತದೆ. ಕನ್ನಡ ಭಾಶೆಯ ಕಲಿಕೆ ಮತ್ತು ಪಠ್ಯಗಳ ಸಂಬಂಧವನ್ನು ಕುರಿತ ಈ ಅಧ್ಯಯನವು ಮುಖ್ಯವಾಗಿ ಕಲಿಯುವುದು ಏನು, ಯಾಕೆ ಮತ್ತು ಹೇಗೆ ಎನ್ನುವುದನ್ನು ಇರಿಕೊಂಡಿದೆ ಮತ್ತು ಕಲಿತ ಕನ್ನಡ ಭಾಶೆಯ ಉಪಯೋಗವು ಬಳಕೆಯಲ್ಲಿ ಹೇಗೆ ಪ್ರವೃತ್ತಗೊಳ್ಳುತ್ತದೆ ಎಂಬ ಪ್ರಶ್ನೆಯನ್ನು ಮುಖ್ಯಮಾಡಿಕೊಂಡಿರುವುದರಿಂದಾಗಿ ಭಾಶೆಯ ಕಲಿಕೆಯನ್ನು ಭಾಶಾ ಶಾಸ್ತ್ರದ ಅಥವಾ ಭಾಶಾವಿಜ್ಞಾನದ ನೆಲೆಯಿಂದ ಗಮನಿಸುವುದನ್ನು ಪ್ರಮುಖವಾಗಿಸಿಕೊಂಡಿರುವುದಿಲ್ಲ. ಆದರೆ, ಭಾಶೆಯನ್ನು ಕುರಿತ ಚಿಂತನೆಗಳು, ಕಲಿಕೆ ಮತ್ತು

ಬಳಕೆಯ ಸಂಬಂಧವಾಗಿ ಗುರುತಿಸುವ ಗುಣಾತ್ಮಕ ಅಂಶಗಳನ್ನು ಬಳಸಿಕೊಂಡೇ ಕನ್ನಡ ಸಮಾಜ ಸಂದರ್ಭದ ಹೊಣೆಗಾರಿಕೆಯ ತೊಡಕುಗಳನ್ನು ಗುರುತಿಸಿಕೊಳ್ಳುವ ಮತ್ತು ಬಿಡಿಸಿಕೊಳ್ಳುವ ಬಗೆಯನ್ನು ಕಂಡುಕೊಳ್ಳಲಾಗುತ್ತದೆ.

**೨.೩ ಅಧ್ಯಯನ ವಿಧಾನ:**

ಪದವಿ ಹಂತದ ಕನ್ನಡಭಾಷಾ ಕಲಿಕೆಯ ಯೋಜನೆಯು ಅನೇಕ ಪ್ರಶ್ನೆಗಳನ್ನು ಹುಟ್ಟುಹಾಕುತ್ತದೆ. ಯಾಕೆಂದರೆ, ಪ್ರೌಢಶಾಲೆಯ ಹಂತದವರೆಗೆ ವ್ಯಾಕರಣಬದ್ಧ ಭಾಷೆಯ ಕಲಿಕೆ ಎಂಬುದನ್ನು ಪಠ್ಯಸಂಬಂಧಿ ಚಟುವಟಿಕೆಗಳ ಮೂಲಕ ಜಾರಿಗೊಳಿಸಿರುವ ಶೈಕ್ಷಣಿಕ ವ್ಯವಸ್ಥೆಯು, ಈ ಹಂತದವರೆಗಿನ ಭಾಷೆಯ ಬೋಧನೆ ಅಥವಾ ಕಲಿಸುವಿಕೆ ಹೇಗಿರಬೇಕೆಂಬುದನ್ನು ಡಿ.ಎಡ್ ಮತ್ತು ಬಿ.ಎಡ್ ತರಬೇತಿ ಕೋರ್ಸುಗಳ ಮೂಲಕ ಕಲ್ಪಿಸುತ್ತದೆ. ಪದವಿ ಹಂತದಲ್ಲಿ ಕನ್ನಡ ಭಾಷಾ ಕಲಿಕೆಯ ವಿದ್ಯಮಾನವೆಂದರೆ ಸಾಹಿತ್ಯದೊಳಗೆ ಕಲಾತ್ಮಕವಾಗಿ ದಾಖಲಿಸಿರುವ ವಿಚಾರಗಳ ಬೋಧನೆ ಮತ್ತು ಕಲಿಕೆ ಎಂದೇ ತಿಳಿಯಲಾಗಿದೆ. ನಿಯಮಿತವಾದ ಪಠ್ಯಗಳ ಮೂಲಕ ನಡೆಯುವ ಈ ಚಟುವಟಿಕೆಯಲ್ಲಿ ಪಠ್ಯವಿಶಯದ ಸಾರವನ್ನಷ್ಟೆ ಕಲಿಕಾರ್ಥಿಗಳ ಎದುರಲ್ಲಿ ಭಟ್ಟಿ ಇಳಿಸುವ ಪ್ರಯತ್ನ ಮಾಡಲಾಗುತ್ತದೆ. ಹೀಗೆ ಭಟ್ಟಿ ಇಳಿಸಿದ ಸಾರವನ್ನು ನೆನಪಿಟ್ಟುಕೊಳ್ಳುವ ಕಲಿಕಾರ್ಥಿಯ ನೆನಪಿನ(ಹಾರ್ಡ್ ಡಿಸ್ಕ್) ಸಾಮರ್ಥ್ಯ ಎಷ್ಟು ಎಂಬುದನ್ನು ಮೂರು ತಾಸುಗಳ ಬರವಣಿಗೆಯ ಮೂಲಕ-ಬರವಣಿಗೆಯ ಕೌಶಲಗಳ ಅಗತ್ಯವಿಲ್ಲದೆಯೂ-ಪರೀಕ್ಷಿಸಿ ಮೌಲ್ಯಮಾಪನಕ್ಕೆ ಒಳಪಡಿಸಲಾಗುತ್ತದೆ. ಇದರಿಂದಾಗಿ ಅಂತಿಮವಾಗಿ ಬೋಧಕರು ಉತ್ಪಾದಕ ಶಕ್ತಿಯಾಗಿಯು, ಕಲಿಕಾರ್ಥಿಗಳು ಬೋಧಕರು ಹೇಳಿದ್ದನ್ನು ಸರಿಯಾಗಿ ತಿಳಿಯಲಾಗದ (ಯಾಕೆಂದರೆ ಬೋಧಕರು ಹೇಳಿದ್ದೆಲ್ಲವೂ ನೆನಪಿನಲ್ಲಿ ಉಳಿಯದ್ದರಿಂದಾಗಿ) ಅಸಮರ್ಥ, ಅನುತ್ಪಾಧಕ **ವಸ್ತು**ವಾಗಿಯು ನಿರೂಪಿಸಲ್ಪಡುತ್ತಾರೆ. ಕಲಿಕಾರ್ಥಿಯ ಇದೇ ನೆನಪಿನ ಶಕ್ತಿ ಎನ್ನುವುದನ್ನು ಭವಿಶ್ಯದಲ್ಲಿ ಪ್ರಜೆಯಾಗಿ ತನ್ನನ್ನು ಕಂಡುಕೊಳ್ಳಲು ಬೇಕಾದ ಸಾಮರ್ಥ್ಯದ ಪ್ರತಿನಿಧೀಕರಣವೆಂದು ಕಟ್ಟಿಕೊಡಲಾಗುತ್ತದೆ. ಹೀಗಾಗಿ ಇಲ್ಲಿನ ಬಹಳ ಮುಖ್ಯವಾದ ಸಮಸ್ಯೆಯೆಂದರೆ ಯಾವಾಗಲು ಅಧಿಕಾರ ಸಂಬಂಧಗಳ ಮೂಲಕ ನಡೆಯುವ ಕಲಿಕಾ ಪ್ರಕ್ರಿಯೆಯಲ್ಲಿ, ಕಲಿಕಾರ್ಥಿಯೆಂಬ **ಖಾಲಿ ಸ್ಲೇಟ**ನ್ನು ತುಂಬುವ ಸಾರದ ಶಕ್ತಿಕೇಂದ್ರವಾಗಿರುವ ಪಠ್ಯಗಳು ಬೋಧನೆ ಮತ್ತು ಕಲಿಕೆಯ ಮಾದರಿ ಪಠ್ಯಗಳೆನಿಸಿಕೊಳ್ಳುತ್ತವೆ. ಆದ್ದರಿಂದಲೇ ರ್‍ಯಾಂಕ್, ಗ್ರೇಡ್‌ಗಳ ಮೂಲಕ ಆದರ್ಶ ಕಲಿಕಾರ್ಥಿಯನ್ನು ಎದುರಿಗಿಟ್ಟು ಸಾಮಾಜಿಕ ಬದುಕಿನ

ಅಧಿಕಾರ ಸಂಬಂಧಗಳನ್ನು ಕಾಪಾಡಿಕೊಳ್ಳಲಾಗುತ್ತದೆ. ಈ ಆದರ್ಶ ಕಲಿಕಾರ್ಥಿಯೆಂಬ ಹುಳಿಹಣ್ಣು ಎಲ್ಲರಿಗೂ ಕೈಗೆಟುಕುವಂತೆ ವ್ಯವಸ್ಥೆ ಶಿಕ್ಷಣವನ್ನು ಯೋಜಿಸಿಲ್ಲವಾದ್ದರಿಂದ ಅದಕ್ಕಾಗಿ ಹುಟ್ಟುಹಾಕಿರುವ ಪೈಪೋಟಿಯೂ ನಿರಂತರವಾಗಿ ಚಾಲನೆಯಲ್ಲಿರುವಂತೆ ಬುದ್ಧಿವಂತ ಅಥವ ಬುದ್ಧಿವಂತೆ, ದಡ್ಡ ಅಥವ ದಡ್ಡಿ ಎಂಬ ಹುಸಿ ಮತ್ತು ಅಸಮಾನ ನೆಲೆಗಳ ಮೂಲಕ ನಿರೂಪಿಸಿಕೊಳ್ಳಲಾಗುತ್ತಿರುತ್ತದೆ. ಹೀಗಾಗಿ ನೆನಪಿನಲ್ಲಿ ಮೇಲುಗೈ ಸಾಧಿಸಿದವರು ಆದರ್ಶ ಕಲಿಕಾರ್ಥಿಯ ಮಾದರಿಗಳಾಗಿಬಿಡುತ್ತಾರೆ ಮತ್ತು ಇವರು ತತ್ಕಾಲೀನವಾದ ಇಂಥ ಸಂಭ್ರಮಿತ ಗುರುತುಗಳಲ್ಲಿ ತಮ್ಮನ್ನು ಕಂಡುಕೊಂಡರೂ ಎದುರಾಗುವ ಸಾಮಾಜಿಕವಾದ ಅಸಮಾನ ಸನ್ನಿವೇಶಗಳ ಬಲಿಪಶುಗಳೇ ಆಗುತ್ತಾರೆ.

ಕನ್ನಡ ಭಾಷಾ ಕಲಿಕೆಯ ಚಟುವಟಿಕೆಗಳ ಸಂದರ್ಭದಲ್ಲಿ ಬಹುಮಟ್ಟಿಗೆ ಸಾಹಿತ್ಯ ಪಠ್ಯಗಳೆ ಭಾಷೆಯನ್ನು ಕಲಿಸುವ ವಕ್ತಾರಿಕೆಯ ಕಾರಣವಾಗಿ ನಿಯಮಿಸಲ್ಪಡುವುದರಿಂದ ಇದು ಮತ್ತಷ್ಟು ಅನುಮಾನವನ್ನು ಹುಟ್ಟಿಸುತ್ತದೆ. ಸಾಹಿತ್ಯದ ಮೂಲಕ ಕಲಿಕಾರ್ಥಿಯ ಭಾವಕೋಶಕ್ಕೆ ಪಠ್ಯದೊಳಗಿನ ಸಾರವನ್ನು ತುಂಬುವ ಪ್ರಯತ್ನದ ಮೂಲಕ (ಕನ್ನಡ ಭಾಷೆ/ಸಾಹಿತ್ಯದ ಬಗೆಗಿನ ಅಭಿಮಾನ[ii]) 'ನಮ್ಮ ಸಮಾಜ ಹೀಗಿದೆ, ಇದನ್ನು ಸರಿಪಡಿಸಲು ಮುಂದಿನ ಪ್ರಜೆಗಳಾದ ನೀವೆಲ್ಲ ಪ್ರಯತ್ನಿಸಬೇಕು' ಎಂದು ಪಠ್ಯದ ವಿಶಯವನ್ನು ಉದಾರ ಮಾನವತವಾದಿ ನೆಲೆಗಳಲ್ಲಿ ವಿವರಿಸಿ ಅಧಿಕಾರ ಸಂಬಂಧಗಳನ್ನು ಉಳಿಸಿಕೊಳ್ಳಲಾಗುತ್ತದೆ . ಈ ಹಿನ್ನೆಲೆಯಲ್ಲಿ ಒಟ್ಟು ಕನ್ನಡ ಕಲಿಕೆಯ ಸಂದರ್ಭವನ್ನು ಒಳಗೊಂಡಂತೆ ಅಧ್ಯಯನ ನಡೆಯಬೇಕಾದ ಅಗತ್ಯವಿದೆ. ಪ್ರಸ್ತುತ ಅಧ್ಯಯನವು ಇದನ್ನು ಪದವಿ ಕನ್ನಡ ಭಾಷೆಯ ಪಠ್ಯಗಳ ಸಂದರ್ಭದಲ್ಲಿ ಶೋಧಿಸಿಕೊಳ್ಳಲು ಪ್ರಯತ್ನಿಸುತ್ತದೆ.

ಈವರೆಗಿನ, ಪಠ್ಯಕ್ರಮ, ಪಠ್ಯಪುಸ್ತಕ, ಪಠ್ಯ, ಬೋಧನೆ, ಕಲಿಕೆ, ಪರೀಕ್ಷೆ ಮತ್ತು ಮೌಲ್ಯಮಾಪನ ಚಟುವಟಿಕೆಗಳ ಕುರಿತಾಗಿ ನಡೆದಿರುವ ವಿಚಾರ ಸಂಕಿರಣ, ಕಾರ್ಯಾಗಾರ ಮತ್ತು ಕಮ್ಮಟಗಳ ಚರ್ಚೆ ಮತ್ತು ಪ್ರತಿಕ್ರಿಯೆಗಳನ್ನು ಗಮನಿಸಿ, ಅಲ್ಲಿ ಗುರುತಿಸಿಕೊಂಡಿರುವ ಈ ಸಂಬಂಧವಾದ ತಾತ್ವಿಕ ಸಮಸ್ಯೆಗಳನ್ನು ಮುನ್ನೆಲೆಗೆ ತಂದು ಚರ್ಚಿಸಿ ಸಾಮಾಜಿಕ ಹೊಣೆಗಾರಿಕೆಯನ್ನು ಪರಿಕಲ್ಪಿಸಿಕೊಳ್ಳಲಾಗುತ್ತದೆ. ಇದಕ್ಕಾಗಿ ಕನ್ನಡಭಾಷಾ ಕಲಿಕೆಯ ಅಧಿಕೃತ ಪಠ್ಯಗಳ ಸ್ವರೂಪವನ್ನು ಪರಿಶೀಲನೆಗೆ ತೆಗೆದುಕೊಳ್ಳಲಾಗುತ್ತದೆ. ಈ ಮೂಲಕ ಪದವಿ ಹಂತದಲ್ಲಿನ ಭಾಷಾ ತಿಳುವಳಿಕೆಯನ್ನು ಭಾಷಾ ಬಳಕೆಯ ವರ್ತಮಾನದ ಸಾಮಾಜಿಕ ಅಪೇಕ್ಷೆಗಳೊಂದಿಗೆ ವಿಶ್ಲೇಶಣೆಯನ್ನು ನಡೆಸುವುದು, ಆ ಮೂಲಕ ಕನ್ನಡ ಭಾಷಾಜ್ಞಾನದ ತಿಳುವಳಿಕೆಯಲ್ಲಿ ಎದುರಾಗುವ ತೊಡಕುಗಳನ್ನು ಸ್ಪಶ್ಟಪಡಿಸಿಕೊಳ್ಳಲು ಪ್ರಯತ್ನಿಸಲಾಗುತ್ತದೆ.

ಇದನ್ನು **ಗುಣಾತ್ಮಕ**(ಐಡಿಯಲಾಜಿಕಲ್) ಮತ್ತು **ಅನುಭವಜನ್ಯ**(ಎಂಪಿರಿಕಲ್) ವಿಧಾನಗಳಲ್ಲಿ ಪ್ರಶ್ನೆಗಳನ್ನು ಸಿದ್ಧಪಡಿಸಿಕೊಂಡು ಕಲಿಕಾರ್ಥಿಗಳು, ಬೋಧಕರು ಮತ್ತು ಪಠ್ಯನಿರ್ಧಾರಕರಿಂದ ಪಡೆದ ಮಾಹಿತಿಯನ್ನು ಪಠ್ಯಕ್ರಮದೊಂದಿಗಿಟ್ಟು ಪರಿಶೀಲಿಸುತ್ತ ಪಠ್ಯ, ಬೋಧನೆ ಮತ್ತು ಕಲಿಕೆಯ ಸಂಬಂಧಗಳ ನಿರ್ದಿಶ್ಚತೆಯನ್ನು ಸ್ಪಶ್ಟಪಡಿಸಿಕೊಳ್ಳಲಾಗುತ್ತದೆ.

ಈ ಕಾರಣವಾಗಿ, ಕನ್ನಡ ಕಲಿಕೆಯಲ್ಲಿ ಪ್ರವೃತ್ತವಾಗಿರುವ ಪಾರಂಪರಿಕ ನೆಲೆಗಳನ್ನು ಚಾರಿತ್ರಿಕವಾಗಿ ಗಮನಿಸಿಕೊಳ್ಳುತ್ತಾ ಸಮೀಕ್ಶೆಯನ್ನು ನಡೆಸಲಾಗುತ್ತದೆ. ಮುಂದಿನ ಹಂತದಲ್ಲಿ ಈ ನೆಲೆಗಳನ್ನು ವಿಶ್ಲೇಶಣೆಗೆ ಒಳಪಡಿಸಲಾಗುತ್ತದೆ. ಆ ಮೂಲಕ ಪಠ್ಯ ಮತ್ತು ಕಲಿಕೆಯ ಸಂಬಂಧಗಳನ್ನು ಪರೀಕ್ಶೆ ಮತ್ತು ಮೌಲ್ಯಮಾಪನದೊಂದಿಗಿಟ್ಟು ಪರಿಶೀಲಿಸಿಕೊಳ್ಳಲಾಗುತ್ತದೆ. ಇದಕ್ಕಾಗಿ ಒಟ್ಟು ಅಧ್ಯಯನವನ್ನು ನಿರ್ವಹಿಸಿಕೊಳ್ಳಲು ಸಮೀಕ್ಶೆ, ವಿಶ್ಲೇಶಣೆ ಮತ್ತು ವಿಮರ್ಶೆಯ ಮಾರ್ಗಗಳನ್ನು ಹಿಡಿಯಲಾಗಿದೆ. ಇದರೊಂದಿಗೆ, ಕನ್ನಡ ಸಮಾಜ, ಸಂಸ್ಕೃತಿ, ಭಾಶೆ ಮತ್ತು ಶಿಕ್ಶಣ ಕುರಿತ ತಜ್ನ ಚಿಂತಕರಿಂದ ಪಡೆದ ಮಾಹಿತಿಯನ್ನು ಪಠ್ಯ ಮತ್ತು ಕಲಿಕೆಯ ಸಂಬಂಧಗಳಲ್ಲಿ ಅರ್ಥೈಸಿ ತೊಡಕುಗಳನ್ನು ಪರಿಹರಿಸಿಕೊಳ್ಳುವ ದಾರಿಗಳನ್ನು ಕಂಡುಕೊಂಡು, ಆ ಮೂಲಕ ಸಾಮಾಜಿಕ ಹೊಣೆಗಾರಿಕೆಯನ್ನು ನಿಭಾಯಿಸುವ ಬಗೆಯನ್ನು ಹುಡುಕಿಕೊಳ್ಳುವ ಪ್ರಯತ್ನ ಮಾಡಲಾಗುತ್ತದೆ. ಇದಕ್ಕಾಗಿ ರೂಪಿಸಿಕೊಂಡ ಪ್ರಮೇಯಗಳು ಹೀಗಿವೆ;

**ಒಂದು**: ಕನ್ನಡ ಭಾಶಾ ಕಲಿಕೆಯ ಪಠ್ಯಗಳ ಸಾಮಾಜಿಕ ಹೊಣೆಗಾರಿಕೆಯ ಹಿಂದೆ ಸ್ಪಶ್ಟವಾದ ಸೈಂದ್ಧಾಂತಿಕ ಗ್ರಹೀತಗಳಿವೆ. ಆದರೆ ಪಠ್ಯಗಳೊಳಗಿನ ಈ ಗ್ರಹೀತಗಳು ತನ್ನದೇ ಆದ ಹಿತಾಸಕ್ತಿಯಿಂದಾಗಿ **ಏಕರೂಪಿ**ಯಾದ ಸಾಮಾಜಿಕ ಹೊಣೆಗಾರಿಕೆಯನ್ನು ಮುಂದಿಡುತ್ತವೆ. ಇದರಿಂದ **ಬಹುಮುಖೀ** ಸಾಮಾಜಿಕ ನೆಲೆಗಳನ್ನು ನಿಭಾಯಿಸುವಲ್ಲಿ ಸೋಲುತ್ತವೆ. ಇದು ಹೌದೇ?

**ಎರಡು**: ಪಠ್ಯ ನಿರ್ಮಾಣ ಮತ್ತು ಪಠ್ಯ ಪೂರೈಕೆಯ ಹಿಂದಿರುವ, ಪಠ್ಯದ **ಸಾಮಾಜಿಕ ರಾಜಕಾರಣ** ಹಾಗೂ **ಆರ್ಥಿಕ ರಾಜಕಾರಣ** ಪರಸ್ಪರ ಪೂರಕ ಮತ್ತು ನಿಯಂತ್ರಕಶಕ್ತಿಗಳಾಗಿ ಕ್ರಿಯಾಶೀಲವಾಗಿಲ್ಲವೆ?

**ಮೂರು**: ಪಠ್ಯ ಮತ್ತು ಕಲಿಕೆಯ ಸಾಮರ್ಥ್ಯಗಳು ವ್ಯಕ್ತಗೊಳ್ಳಲು ಸಿದ್ಧಗೊಂಡ **ಏಕೀಕೃತ ಕನ್ನಡ ಭಾಷೆ**ಯನ್ನು ಅನುಸರಿಸಲ್ಪಟ್ಟು ವ್ಯವಸ್ಥೆಯ ಯಥಾಸ್ಥಿತಿಯೇ ಮುಂದುವರಿಯುತ್ತದಲ್ಲವೆ? ಹಾಗಾಗಿ ಶಿಕ್ಷಣದ ಮೂಲ ಉದ್ದೇಶವಾದ **ಸಾಮಾಜಿಕ ಬದಲಾವಣೆ** ಎಂದರೆ ಏನು?

**ನಾಲ್ಕು**: ಕನ್ನಡ ಭಾಷಾ ಕಲಿಕೆಯ ಸಂದರ್ಭದಲ್ಲಿ ಕನ್ನಡ ಭಾಷಾ ಬಳಕೆಯ **ಬಹುತ್ವ**ದ ನೆಲೆಗಳು ನಿರಾಕರಣೆಗೆ ಒಳಪಡುವುದರಿಂದ ಸಾಮಾಜಿಕ ರಚನೆಯಲ್ಲಿನ **ಅಧಿಕಾರ**ದ ವಿನ್ಯಾಸಗಳನ್ನು ಪೋಶಿಸಿದಂತಾಗಿ, ಪಠ್ಯ ಮತ್ತು ಕಲಿಕೆ ಎನ್ನೋದು ಅಧಿಕಾರ ಸಂಬಂಧಗಳೊಳಗೇ ಯಾವತ್ತೂ ನಡೆಯುತ್ತದೆಯಲ್ಲವೇ?. ಆದ್ದರಿಂದಾಗಿ,

**ಐದು**: ಸಾಮಾಜಿಕ **ಅಸಮಾನತೆ**ಯನ್ನು ಹೋಗಲಾಡಿಸುವ ಶಿಕ್ಷಣದ ಉದ್ದೇಶ ಅಂತಿಮವಾಗಿ **ಶ್ರೇಣೀಕೃತ** ಮೌಲ್ಯಗಳಲ್ಲೇ ಮತ್ತಷ್ಟು ಸ್ಥಿರವಾಗಿ ಬೇರೂರಲು ಸಹಕಾರಿಯಾಗಿದ್ದು ಕನ್ನಡ ಭಾಷಾ ಬಳಕೆಯನ್ನು ಕುರಿತ **ವರ್ತಮಾನ**ದ ಅಪೇಕ್ಷೆಯಿಂದ ಕನ್ನಡವನ್ನು ಕಲಿಸುವ/ಕಲಿಯುವ ಶೈಕ್ಷಣಿಕ ವಿದ್ಯಮಾನವು ದೂರವೇ ಉಳಿದಿದೆಯಲ್ಲವೇ?

ಈ ಗ್ರಹೀತಗಳ ಹಿನ್ನೆಲೆಯಲ್ಲಿ ಭಾಷಾ ಕಲಿಕೆಯ ಪಠ್ಯದ ನಿರ್ಮಾಣ, ನಿರ್ದಿಷ್ಟ ಪಠ್ಯದ ಮೂಲಕ ನಡೆಯುವ ಭಾಷೆಯ ಬೋಧನೆ ಮತ್ತು ಪಠ್ಯದ ಮೂಲಕ ಉತ್ಪನ್ನಗೊಳ್ಳುವ ಕನ್ನಡಭಾಶಿಕ ಜ್ಞಾನದ ಸಾಮಾಜಿಕ ಹೊಣೆಗಾರಿಕೆಯ ತೊಡಕುಗಳನ್ನು ಮತ್ತು ಅಂಥ ತೊಡಕುಗಳ ಹಿಂದಿನ ತಾತ್ವಿಕತೆಯನ್ನು ಅನಾವರಣ ಮಾಡಿಕೊಳ್ಳುವ ಪ್ರಯತ್ನ ಇದಾಗಿದೆ. ಇದಕ್ಕಾಗಿ, ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಮಾಹಿತಿಯನ್ನು ಸಂಗ್ರಹಿಸುವ ಪ್ರಕ್ರಿಯೆಯನ್ನು ಮುಖ್ಯವಾಗಿ ನಾಲ್ಕು ಹಂತಗಳಲ್ಲಿ ನಿಭಾಯಿಸಲಾಗಿದೆ.

೧. ಭಾಶಾ ಕಲಿಕೆಯ ಪ್ರಕ್ರಿಯೆಯಲ್ಲಿ ಅನುತ್ಪಾಧಕ ಅಥವ ಅಸಮರ್ಥ ವಸ್ತುವಾಗಿ ಬಿಂಬಿತವಾಗಿ ಅಂಚಿಗೆ ತಳ್ಳಲ್ಪಟ್ಟ ಕಲಿಕಾರ್ಥಿಗಳು/ವಿದ್ಯಾರ್ಥಿಗಳು.

೨. ಭಾಶಾ ಕಲಿಕೆಯ ಪ್ರಕ್ರಿಯೆಯಲ್ಲಿ ಉತ್ಪಾಧಕ ನೆಲೆಯಲ್ಲಿ ಬಿಂಬಿಸಲ್ಪಟ್ಟಿರುವ ಮತ್ತು ಸಾಮಾಜಿಕವಾಗಿ ಬಿಂಬಿತವಾದ ಅಧಿಕಾರ ಸಂಬಂಧಗಳನ್ನು ಪಠ್ಯ ಬೋಧನೆಯ ಮೂಲಕ ನಿರಂತರವಾಗಿ ಚಾಲನೆಯಲ್ಲಿಡುವ ಬೋಧಕರು.

೩. ಭಾಶೆಯ ಕಲಿಕೆ ಮತ್ತು ಕಲಿಸುವಿಕೆಗೆ ಬೇಕಾದ ಪರಿಕರಗಳನ್ನು ಸೃಶ್ಟಿಸುವ ಪ್ರಶ್ನಾತೀತ ಶಕ್ತಿಯಾದ (ಗರ್ಭ ಗುಡಿಯಲ್ಲಿರುವ) ಪಠ್ಯ ರೂಪಕರು ಮತ್ತು ನಿರ್ಧಾರಕರು.

೪. ಕನ್ನಡ ಭಾಶಿಕ ಸಮುದಾಯದ ಬದುಕಿನ ಮೂಲಕ ಭಾಶಾಶಿಕ್ಶಣದ ಹೊಣೆಗಾರಿಕೆಯನ್ನು ಆಲೋಚಿಸುವ ತಜ್ನರು.

ಈ ನಾಲ್ಕು ಮೂಲಗಳಿಂದ ಅಧ್ಯಯನಕ್ಕೆ ಪೂರಕವಾಗಿ ಮಾಹಿತಿಯನ್ನು ಪಡೆಯಲಾಗಿದೆ. ಇಂಥಲ್ಲಿ ಎದುರಾಗುವ ಬಹಳ ಮುಖ್ಯವಾದ ಪ್ರಶ್ನೆಯೆಂದರೆ ಮಾಹಿತಿಯು ವ್ಯಕ್ತವಾಗಿರುವ ಸಂದರ್ಭದಲ್ಲಿನ ವೈಯುಕ್ತಿಕ ಭಿನ್ನಾಭಿಪ್ರಾಯಗಳನ್ನು ಪರಿಹರಿಸಿಕೊಳ್ಳುವುದು ಹೇಗೆ ಎಂಬುದು. ಸಂಶೋಧನೆಯ ಗುರಿಯು ಕನ್ನಡ ಭಾಶೆಯ ತಿಳುವಳಿಕೆಯ ಕಲಿಕೆಯನ್ನು ಕುರಿತ ಸಾಮಾಜಿಕ ಹೊಣೆಗಾರಿಕೆಯ ನಿರ್ದಿಶ್ಟ ತಾತ್ವಿಕ ತಿಳುವಳಿಕೆಯನ್ನು ರೂಪಿಸಿಕೊಳ್ಳುವುದಾಗಿರುವುದರಿಂದ, ಇದಕ್ಕೆ ಅನುಸಾರವಾಗಿ ಮಾಹಿತಿ ಸಂಗ್ರಹದ ಸಂದರ್ಭದಲ್ಲಿ ವ್ಯಕ್ತವಾಗಿರುವ ವೈಯುಕ್ತಿಕ ಅಭಿಪ್ರಾಯಗಳನ್ನು ಕ್ರೋಡೀಕರಿಸಿಕೊಂಡು ವಿಶ್ಲೇಶಣೆಗೆ ಒಳಪಡಿಸಲಾಗಿದೆ. ಯಾಕೆಂದರೆ ಪ್ರತಿಯೊಂದು ವೈಯುಕ್ತಿಕವಾದ ಅಭಿಪ್ರಾಯವು ಸಹ ವಿಭಿನ್ನವಾದ ಅಭಿರುಚಿ, ಆಸಕ್ತಿ, ಬೌದ್ಧಿಕ ಶಕ್ತಿ ಮತ್ತು ಸಾಮಾಜಿಕ ಹಿನ್ನೆಲೆ ಮತ್ತು ಅವಕಾಶಗಳನ್ನು ಅವಲಂಬಿಸಿರುತ್ತದೆ. ಆದ್ದರಿಂದ, ಈ ಕ್ರಮಬದ್ಧವಾದ ಅಧ್ಯಯನ ಮೂಡಿಸುವ ಶೊಧನಾನುಭವದ ಮೂಲಕ ಪ್ರಸ್ತುತ ವಿಶಯದ ಬಗೆಗಿನ ಭಿನ್ನ ಗ್ರಹಿಕೆಗಳನ್ನು ನಿಭಾಯಿಸಿಕೊಳ್ಳಲಾಗಿದೆ. ಇದರಿಂದಾಗಿ ಕಲಿಕಾರ್ಥಿಗಳು, ಬೋಧಕರು, ಪಠ್ಯ ನಿರ್ಧಾರಕರು ಮತ್ತು ಭಾಶೆ/ಶಿಕ್ಶಣ ತಜ್ನರ ಅಭಿಪ್ರಾಯಗಳನ್ನು **ಕನ್ನಡ ಭಾಶೆಯ ತಿಳುವಳಿಕೆ ಕುರಿತ ಕಲಿಕೆ**ಯ ನಿರ್ದಿಶ್ಟ ಚೌಕಟ್ಟಿನೊಳಕ್ಕೆ ತಂದು ಚರ್ಚಿಸುವ ಸಾಧ್ಯತೆಯನ್ನು ಇಲ್ಲಿ ರೂಢಿಸಿಕೊಳ್ಳಲಾಗಿದೆ. ಆ ಮೂಲಕ ಕನ್ನಡ ಕಲಿಕೆಯ ಪಠ್ಯಗಳ ವಾಸ್ತವವನ್ನು, ಅವುಗಳ ಬಳಕೆಯ ವಾಸ್ತವವನ್ನು ಅನಾವರಣಗೊಳಿಸುತ್ತ ಕನ್ನಡ ಭಾಶೆಯ ಕಲಿಕೆಯ ಪ್ರಕ್ರಿಯೆಯಲ್ಲಿನ ಸಾಮಾಜಿಕ ಹೊಣೆಗಾರಿಕೆಯ ತೊಡಕುಗಳನ್ನು ವಿಶ್ಲೇಶಿಸಿಕೊಳ್ಳುವ ಮತ್ತು ಅದಕ್ಕೆ ಪರಿಹಾರ ದಾರಿಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

**ಪಶ್ನಾವಳಿ ಮತ್ತು ಇತರೆ ಪರಿಕರಗಳು**

ಸಂಶೋಧನಾ ವಿಶಯಕ್ಕೆ ಸಂಬಂಧಿಸಿದಂತೆ ಬೇಕಾದ ಮಾಹಿತಿಯನ್ನು ಅಧ್ಯಯನ ವಿಧಾನಕ್ಕೆ ಅನುಗುಣವಾಗಿ ಸಂಗ್ರಹಿಸುವುದು ಬಹಳ ಮುಖ್ಯವಾದುದಾಗಿರುತ್ತದೆ. ಅಧ್ಯಯನ ವಿಧಾನದ ತಾತ್ವಿಕತೆಯು ಪ್ರಶ್ನೆಗಳ ಸಿದ್ಧತೆಯನ್ನು ಪ್ರಭಾವಿಸುತ್ತಿರುತ್ತದೆ.

ಪದವಿ ಸಂದರ್ಭದ ಒಟ್ಟು ಭಾಶಾ ಕಲಿಕೆಯ ವಿದ್ಯಮಾನಗಳನ್ನು ಗ್ರಹಿಸಲು ಈ ಮೇಲೆ ವಿವರಿಸಿಕೊಂಡಿರುವ ಸೈದ್ಧಾಂತಿಕ ನಿಲುವುಗಳ ಹಿನ್ನೆಲೆಯಲ್ಲಿ ಮಾಹಿತಿ ಸಂಗ್ರಹವು

ಪರಿಣಾಮಕಾರಿಯಾಗಿರುವಂತೆ ಮಾಡಲು ಪ್ರಶ್ನೆಗಳನ್ನು ಮುಖ್ಯವಾಗಿ, ೧.ಕಲಿಕಾರ್ಥಿಗಳು/ವಿದ್ಯಾರ್ಥಿಗಳು ೨.ಕಲಿಸುವವರು/ಬೊಧಕರು ೩.ಪಠ್ಯ ನಿರ್ಮಾಪಕರು/ನಿರ್ಧಾರಕರು ೪.ಭಾಶೆ/ಶಿಕ್ಶಣ ತಜ್ನರು ಎಂದು ವಿಭಾಗಿಸಿಕೊಂಡು ಆಯಾ ನಿರ್ದಿಶ್ಟ ಗುಂಪುಗಳಿಂದ ಪಡೆಯಬೇಕಾದ ಮಾಹಿತಿ ಸಂಗ್ರಹಕ್ಕೆ ಅನುಕೂಲವಾಗುವಂತೆ ಪ್ರಶ್ನೆಗಳನ್ನು ಸಿದ್ಧಪಡಿಸಿಕೊಂಡು ಮಾಹಿತಿ ಮತ್ತು ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ.

ಇದಕ್ಕಾಗಿ ಲಿಂಗ, ಜಾತಿ, ವಯಸ್ಸು, ಪ್ರದೇಶ(ನಗರ/ಹಳ್ಳಿ ಮತ್ತು ಇತರೆ) ವಿಚಾರಗಳನ್ನು ಪರಿಗಣನೆಗೆ ತೆಗೆದುಕೊಳ್ಳಲಾಗಿದೆ.

ಮಾಹಿತಿದಾರರಿಗೆ ಸಹಜವಾಗಿ ಉತ್ತರ ನೀಡಲು ಸಾಧ್ಯವಾಗುವಂತೆ ಸಂಭವನೀಯ ಆಯ್ಕೆಯ ಉತ್ತರ ಸೂಚಕಗಳನ್ನು ಏರ್ಪಡಿಸಿಕೊಂಡು ಮಾಹಿತಿ ಪಡೆಯಲಾಗಿದೆ.

ಜೊತೆಗೆ, ತಜ್ನರ ಜೊತೆ ನಡೆಸಿದ ಚರ್ಚೆ, ಸಂದರ್ಶನಗಳ ಮೂಲಕ ಚಿಂತನಪೂರ್ಣ ಮಾಹಿತಿಯನ್ನು ಸಾಮಾಜಿಕ ಹೊಣೆಗಾರಿಕೆಯ ತೊಡಕುಗಳನ್ನು ಕಂಡುಕೊಳ್ಳುವ ಮತ್ತು ಅದಕ್ಕೆ ಪರಿಹಾರಗಳನ್ನು ಹುಡುಕಿಕೊಳ್ಳುವ ಚಿಂತನೆಯನ್ನು ಬೆಳೆಸಲು ಪೂರಕವಾಗಿ ಬಳಸಲಾಗಿದೆ.

ಈ ಕಾರಣಕ್ಕಾಗಿ ಬೆಂಗಳೂರು ವಿಶ್ವವಿದ್ಯಾಲಯ ವ್ಯಾಪ್ತಿಯ, ೧೦ ಕಾಲೇಜುಗಳ ೨೨೬ ಜನ ಕಲಿಕಾರ್ಥಿಗಳನ್ನು, ವಿವಿಧ ಕಾಲೇಜುಗಳ ೮೯ ಜನ ಬೋಧಕರನ್ನು, ಕರ್ನಾಟಕದ ಇತರೆ ವಿಶ್ವವಿದ್ಯಾಲಯದವರೂ ಸೇರಿದಂತೆ, ೨೨ ಜನ ಪಠ್ಯ ನಿರ್ಮಾಣ ಕಾರ್ಯದಲ್ಲಿ ತೊಡಗಿಸಿಕೊಂಡವರು ಮತ್ತು ಭಾಶೆ/ಶಿಕ್ಶಣ ತಜ್ನರನ್ನು ಸಂಪರ್ಕಿಸಿ ಈ ಕುರಿತ ಮಾಹಿತಿಯನ್ನು ಕ್ರಮಬದ್ಧವಾಗಿ ಸಂಗ್ರಹಿಸಿ ವಿಶ್ಲೇಶಣೆಗೆ ತೆಗೆದುಕೊಳ್ಳಲಾಗಿದೆ.

**೨.೪ ಅಧ್ಯಯನದ ಸಿದ್ಧಾಂತೀಕರಣ ಮತ್ತು ಪರಿಕಲ್ಪನಾ ನೆಲೆಗಳು**

ಸಾಮಾನ್ಯವಾಗಿ, ಸಾಮಾಜಿಕ ಹೊಣೆಗಾರಿಕೆ ಎನ್ನುವುದನ್ನು ಇಂಗ್ಲಿಶ್ ನ Social Responsibility ಪದಕ್ಕೆ ಪರ್ಯಾಯವಾಗಿ ಬಳಸಲಾಗುತ್ತದೆ. ಪ್ರಸ್ತುತ ಅಧ್ಯಯನದಲ್ಲಿ, ಇದನ್ನು ಕನ್ನಡ ಸಮಾಜ, ಕನ್ನಡ ಸಮುದಾಯಗಳ ಬದುಕು ಮತ್ತು ಕನ್ನಡ ಭಾಶಾ ಕಲಿಕೆಯ ಸಂಬಂಧಗಳಲ್ಲಿ ವಿವರಿಸಿಕೊಳ್ಳುವ ಕೆಲಸವನ್ನು ಮಾಡಲಾಗಿದೆ. ಕನ್ನಡ ಸಮಾಜ ಮತ್ತು ಕನ್ನಡ ಸಮುದಾಯಗಳ ಸಂಬಂಧಗಳಲ್ಲಿ ಕನ್ನಡ ಭಾಶೆಯ ಮೂಲಕ ನಿರ್ವಹಿಸಿಕೊಳ್ಳಬೇಕಾದ ಹೊಣೆಗಾರಿಕೆ ಎಂದೇ ಇದನ್ನು ತಿಳಿಯಲಾಗಿದೆ. ಈಗಾಗಲೆ ವಿವರಿಸಿಕೊಂಡಿರುವಂತೆ, ಇಲ್ಲಿವರೆಗೂ ಕಟ್ಟಿಕೊಳ್ಳಲಾಗಿರುವ ಕನ್ನಡ ಭಾಶೆಯು ಬದಲಾಗುತ್ತಿರುವ ಸಾಮಾಜಿಕ ಸಂದರ್ಭಗಳಲ್ಲಿ ಈ

ಹೊಣೆಯಿಂದ ದೂರವೇ ಉಳಿಯುವಂತಾಗಿದೆ. ಆದ್ದರಿಂದಾಗಿ ಮೊದಲಿಗೆ ತೊಡಕುಗಳನ್ನು ಗುರುತಿಸಿಕೊಳ್ಳುವುದು ಮುಖ್ಯವಾಗುತ್ತದೆ. ಇದರಿಂದಾಗಿ ಇದನ್ನು ಪರಿಹರಿಸಿಕೊಳ್ಳಬೇಕಾದ ದಾರಿಗಳು ಸ್ಪಷ್ಟವಾಗುತ್ತವೆ ಎಂದು ತಿಳಿಯಲಾಗಿದೆ. ಈ ಕಾರಣವಾಗಿ ಕನ್ನಡ ಭಾಶೆಯ ಕಲಿಕೆಯ ಪಠ್ಯಗಳನ್ನು ವಿಶ್ಲೇಶಣೆಗೆ ಒಳಪಡಿಸುತ್ತಿರುವ ಸದ್ಯದ ಸಂದರ್ಭದಲ್ಲಿ **ಸಾಮಾಜಿಕ ಹೊಣೆಗಾರಿಕೆಯ ತೊಡಕು**ಗಳನ್ನು ಗುರುತಿಸಿಕೊಳ್ಳುವ ಸೈದ್ಧಾಂತಿಕ ಗ್ರಹೀತದ ನೆಲೆಗಳೆಂದರೆ;

- ಪದವಿ ಹಂತದಲ್ಲಿ ಕನ್ನಡ ಭಾಶೆಯನ್ನು ಕಲಿಸಬೇಕು ಎಂದು ನಿರ್ಧರಿಸುವಾಗ ಕಲಿಸಬೇಕಾದ ಕನ್ನಡ ಭಾಶೆಯ **ಸಾಮಾಜಿಕತೆ** ಯಾವುದು,
- ಪದವಿಯ ಕನ್ನಡ ಭಾಶೆಯನ್ನು ಕಲಿಯುವ ಪರಿಕರಗಳಾದ ಕನ್ನಡ ಭಾಶಾ ಕಲಿಕೆಯ ಪಠ್ಯಗಳ **ಸಾಮಾಜಿಕ ಪ್ರತಿನಿಧೀಕರಣ** ಯಾವ ಬಗೆಯದು,
- ಕಲಿಯುವ ಕನ್ನಡ ಭಾಶಾ ತಿಳುವಳಿಕೆಯು **ವರ್ತಮಾನದ** ಅಪೇಕ್ಶೆಗಳನ್ನು ನಿಭಾಯಿಸಿಕೊಳ್ಳುವ ಹೊಣೆ ಹೇಗೆ,

ಈ ತಾತ್ವಿಕ ಗ್ರಹೀತಗಳ ಹಿನ್ನೆಲೆಯಲ್ಲಿ ಕನ್ನಡ ಪಠ್ಯಕ್ರಮ, ಪಠ್ಯಕ್ರಮ ಪ್ರೇರೇಪಿಸುವ ಮತ್ತು ಪ್ರಭಾವಿಸುವ ಬೊಧನೆ ಮತ್ತು ಕಲಿಕೆ, ಪಠ್ಯಕ್ರಮ ಮೂಲವಾದ ಕಲಿಕಾರ್ತಿಯ ಸಾಮರ್ಥ್ಯವನ್ನು ಅಳೆಯುವ ಪರೀಕ್ಶೆ ಮತ್ತು ಮೌಲ್ಯಮಾಪನ ವಿದ್ಯಮಾನಗಳ ಚರ್ಚೆಯನ್ನು ರೂಪಿಸಿಕೊಳ್ಳುವ ಮುಂದಿನ ಅಧ್ಯಾಯಗಳು ಹೀಗಿವೆ;

- **ಇದುವರೆಗಿನ ಅಧ್ಯಯನ, ಅನಿಸಿಕೆಗಳು: ಕಾಣುವ ತಾತ್ವಿಕ ಪ್ರಶ್ನೆಗಳು**
- **ಕನ್ನಡ ಪಠ್ಯಕ್ರಮದ ಬೆಳವಣಿಗೆ: ಆಧುನಿಕತೆಯ ವರಸೆಗಳು**
- **ಅಧ್ಯಯನದ ಸಿದ್ಧಾಂತೀಕರಣ: ಪರಂಪರೆ ಮತ್ತು ಯಜಮಾನಿಕೆಯನ್ನು ಸಂಘಟಿಸುವಿಕೆ**
- **ಪಠ್ಯಕ್ರಮಗಳ ವಿಶ್ಲೇಶಣೆ: ಯಜಮಾನ ಸಂಬಂಧಗಳ ಶೋಧನೆ**
- **ಪದವಿಯಲ್ಲಿ ಕನ್ನಡಭಾಶಿಕ ಶಿಕ್ಶಣ: ಹೊಣೆಗಾರಿಕೆಯ ತೊಡಕುಗಳು**
- **ತೊಡಕುಗಳನ್ನು ಬಿಡಿಸಿಕೊಳ್ಳುವ ಬಗೆ: ಕೊನೆಯ ಮಾತೇನಲ್ಲ**

## ಅಡಿ ಟಿಪ್ಪಣಿಗಳು

---

೧. ಔಪಚಾರಿಕ ಶಿಕ್ಷಣದಲ್ಲಿ ಓದುವುದು ಮತ್ತು ಬರೆಯುವುದು ಎಂಬ ಕೌಶಲಗಳು ಮೊದಲ ಪ್ರಾಶಸ್ತ್ಯ ಪಡೆಯುತ್ತವೆ. ಮಾತಾಡುವುದು ಮತ್ತು ಆಲಿಸುವುದು ಪ್ರಥಮ ಭಾಶೆಯ ಮಟ್ಟಿಗೆ ಈಗಾಗಲೆ ನೆಲೆಗೊಂಡ ಕೌಶಲಗಳಾಗಿರುತ್ತವೆ. ಈ ಹಂತದಲ್ಲಿ ಅವನ್ನು ಪರಿಶ್ಕರಿಸುವ ಜವಾಬ್ದಾರಿಯನ್ನು ವಹಿಸಿಕೊಳ್ಳಲಾಗುತ್ತದೆ. ಎರಡನೆಯ ಅಥವಾ ಮೂರನೆಯ ಭಾಶೆಯ ವಿಚಾರದಲ್ಲಿ ಈ ನಾಲ್ಕು ಕೌಶಲಗಳನ್ನು ಶಾಲೆಯಲ್ಲಿಯೇ ಕಲಿಯಬೇಕಾಗುತ್ತದೆ. ಇದು ಸಂಕೀರ್ಣವಾದ ಸನ್ನಿವೇಶ.( ಕೆ.ವಿ. ನಾರಾಯಣ:೨೦೦೭, ಪುಟ೫೭)

೨. ಇಂಥ ಅಸಮಾನತೆಗಳಿಂದ ಬಿಡುಗಡೆ ಪಡೆಯುವ ಕಾರಣವಾದ ತಳ ಸಮುದಾಯಗಳ ಇಂಗ್ಲಿಶ್ ಅಪೇಕ್ಶೆಯನ್ನು ಈ ಹಿನ್ನೆಲೆಯಲ್ಲಿ ಗಮನಕ್ಕೆ ತೆಗೆದುಕೊಳ್ಳಬಹುದಾಗಿದೆ.

೩. 'ಮಾನ' ಎಂದರೆ ಅಳತೆ, ಅಳೆಯುವುದು ಎಂಬ ಅರ್ಥವೂ ಇದೆ.

೪. ಆದರೆ ಇಲ್ಲಿಯೂ ಸಹ, 'ಆಲಿಸುವ, ಗ್ರಹಿಸುವ, ಓದುವ, ಮಾತು ಮತ್ತು ಬರವಣಿಗೆ ಅಭಿವ್ಯಕ್ತಿಯ ಸಾಮರ್ಥ್ಯಗಳು ಹಿಂದೆ ಸರಿದು, ವ್ಯಾಕರಣ ಮತ್ತು ಸಾಹಿತ್ಯಪ್ರಕಾರಗಳನ್ನು ಪರಿಚಯಿಸುವುದು, ನಾಡು-ನುಡಿ, ಸಾಹಿತ್ಯ-ಸಂಸ್ಕೃತಿಯ ಬಗೆಗೆ ಅಭಿಮಾನವನ್ನು ಬೆಳೆಸುವುದು, ಸಾಹಿತ್ಯಾಭಿರುಚಿ, ಸೌಂದರ್ಯಪ್ರಜ್ಞೆ, ಸ್ವಂತಿಕೆ ಮತ್ತು ಸೃಜನಾತ್ಮಕ ಶಕ್ತಿಯನ್ನು ಬೆಳೆಸುವುದು, ಸರ್ವಾಂಗೀಣ ವ್ಯಕ್ತಿತ್ವ ವಿಕಾಸಕ್ಕೆ ಬೇಕಾದ ಜೀವನ ಮೌಲ್ಯಗಳನ್ನು ಕಲಿಸುವುದು, ಸಮಾನತೆ, ರಾಶ್ಟ್ರೀಯ ಪ್ರಜ್ಞೆ, ಜಾತ್ಯಾತೀತತೆ, ಪರಿಸರ ಸಂರಕ್ಶಣೆ, ನೈಸರ್ಗಿಕ ಸಂಪನ್ಮೂಲಗಳ ರಕ್ಶಣೆ ಮತ್ತು ವೈಜ್ನಾನಿಕ ಮನೋಭಾವ ಬೆಳೆಸುವುದು, ಸಾಮಾಜಿಕ, ಆರ್ಥಿಕ, ನೈತಿಕ ಮತ್ತು ಸಾಂಸ್ಕೃತಿಕ ಮೌಲ್ಯಗಳನ್ನು ಪರಿಚಯಿಸುವುದು, ಸಾಮಾಜಿಕ ಸಮಸ್ಯೆಗಳ ಕುರಿತ ಚಿಂತನೆ ಮತ್ತು ಅದಕ್ಕೆ ಕಾರಣಗಳನ್ನು ಹುಡುಕುವ ಸಾಮರ್ಥ್ಯವನ್ನು ಬೆಳೆಸುವುದು' ಎಂದೇ ವಿವರಿಸಿಕೊಳ್ಳಲಾಗಿದೆ(ಡಾ ಎನ್. ಬಿ. ಕೊಂಗವಾಡ: ೨೦೦೫)

೫. ಇದೇ ಭಾಶಾಭಿಮಾನ, ದೇಶಾಭಿಮಾನ ಎಂಬ ಅರ್ಥದಲ್ಲಿ.

ಅಧ್ಯಾಯ ೩

# ಇದುವರೆಗಿನ ಅಧ್ಯಯನ, ಅನಿಸಿಕೆಗಳು: ಕಾಣುವ ತಾತ್ವಿಕ ಪ್ರಶ್ನೆಗಳು

## ಸಂಶೋಧನಾ ಅಧ್ಯಯನ

ವಿಚಾರಸಂಕಿರಣ ಮತ್ತು ಕಮ್ಮಟಗಳ ಚರ್ಚೆಯಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳು

ಜೀವನ ಮತ್ತು ಶಿಕ್ಷಣ ಸಂಬಂಧಿ ಕಾಳಜಿಗಳಲ್ಲಿ ವ್ಯಕ್ತವಾಗಿರುವ ಪ್ರತಿಕ್ರಿಯೆಗಳು

ಅಧ್ಯಾಯ ೩

## ಇದುವರೆಗಿನ ಅಧ್ಯಯನ, ಅನಿಸಿಕೆಗಳು: ಕಾಣುವ ತಾತ್ವಿಕ ಪ್ರಶ್ನೆಗಳು

ಕನ್ನಡ ಭಾಷೆಯ ಕಲಿಕೆ ಮತ್ತು ಕಲಿಕೆಯ ಪಠ್ಯಗಳ ಸಂಬಂಧವಾಗಿ ಖಚಿತವಾದ ಅಧ್ಯಯನಗಳು ಅಷ್ಟಾಗಿ ನಡೆದಿಲ್ಲ. ಪದವಿ ಪಠ್ಯಗಳ ಸಂದರ್ಭದಲ್ಲಿ ಇಂಥ ಪ್ರಶ್ನೆಯೊಂದನ್ನು ಎದುರುಗೊಂಡಿರುವುದು ಬಹುಮಟ್ಟಿಗೆ ಕಾಣುವುದೆ ಇಲ್ಲ. ಪ್ರಾಥಮಿಕ ಮತ್ತು ಪ್ರೌಢಶಾಲೆ ಹಂತದಲ್ಲಿನ ಕನ್ನಡಭಾಷಾ ಕಲಿಕೆಯ ಮಾದರಿಗಳು ಮತ್ತು ಪರಿಕರಗಳನ್ನಿಟ್ಟುಕೊಂಡು ನಡೆಸಿರುವ ಸಂಶೋಧನಾ ಸಂದರ್ಭಗಳಲ್ಲಿ ಸಹ ಕನ್ನಡ ಭಾಷೆಯ ಕಲಿಕೆಯ ಚರ್ಚೆಗಳು ಪ್ರಾಸಂಗಿಕವಾಗಿಯೆ ಇವೆ. ಈ ಕುರಿತು ಸಾಂಸ್ಥಿಕವಾಗಿ ನಡೆದಿರುವ ಚರ್ಚೆಗಳೂ ಕೂಡ ಸದ್ಯ ಜಾರಿ ಇರುವ ಮಾದರಿಯಲ್ಲಿ ಕೆಲವು ಪರಿಷ್ಕಾರಗಳನ್ನು ಸೂಚಿಸುತ್ತವೆಯೇ ಹೊರತು ಕನ್ನಡ ಭಾಶಿಕವಾಗಿ ಇಂದಿಗೆ ಸಜ್ಜುಗೊಳ್ಳಬೇಕಾದ ಹಿನ್ನೆಲೆಯಲ್ಲಿ ಯಾವ ಪ್ರಯತ್ನಗಳೂ ನಡೆದಿರುವಂತೆ ಕಾಣುವುದಿಲ್ಲ. ಇಂಥ ಪ್ರಯತ್ನಗಳು, ಅಂದರೆ, ಕನ್ನಡ ಭಾಶೆಯ ಕಲಿಕೆಯ ಸ್ವರೂಪ ಮತ್ತು ಇಂದಿನ ಬಳಕೆಯ ನೆಲೆಗಳ ಸಂಬಂಧವನ್ನು ಕುರಿತ ಮೂಲ ಸಮಸ್ಯೆಗಳನ್ನೆತ್ತಿಕೊಂಡ ಚಿಂತನೆಗಳು ಕೆಲವು ವೈಯುಕ್ತಿಕ ಅಧ್ಯಯನದ ಕಾಳಜಿಗಳ ಸಂದರ್ಭದಲ್ಲಿ ಮಾತ್ರವೇ ಕಂಡುಬರುತ್ತವೆ. ಈ ಚರ್ಚೆಗಳಲ್ಲಿ ನಿರ್ದಿಶ್ಟ ಪಠ್ಯಕ್ರಮಗಳ ಸಂದರ್ಭವನ್ನಿಟ್ಟುಕೊಂಡು ನೇರವಾಗಿ ಚರ್ಚೆಯನ್ನು ನಡೆಸದಿದ್ದರೂ ಒಟ್ಟು ಕನ್ನಡ ಸಮಾಜವನ್ನು ಗಮನಕ್ಕೆ ತೆಗೆದುಕೊಂಡು ಕನ್ನಡ ಭಾಶೆ, ಸಮಾಜ, ಬದುಕು ಮತ್ತು ಶಿಕ್ಶಣ ಸಂಬಂಧವಾಗಿ ಚರ್ಚೆ ನಡೆಸಲಾಗಿದೆ. ಇಂಥ ಚರ್ಚೆಗಳನ್ನು **ಕನ್ನಡ ಭಾಶೆಯ ಕಲಿಕೆಯ ಪಠ್ಯಗಳು ಮತ್ತು ಸಾಮಾಜಿಕ ಹೊಣೆಗಾರಿಕೆಯ ತೊಡಕುಗಳ** ಕುರಿತ ಈ ಅಧ್ಯಯನದ ವಿಸ್ತರಣೆಯ ಭಾಗವಾಗಿ ಬಳಸುವುದರಿಂದ ಈ ಅಧ್ಯಾಯದಲ್ಲಿ ಇಂಥ ಪರಿಕರಗಳನ್ನು ಉದ್ದೇಶಪೂರ್ವಕವಾಗಿಯೆ ಬಿಟ್ಟು ಕಲಿಕೆ, ಪಠ್ಯ, ಬೋಧನೆ, ಪರೀಕ್ಶೆ, ಮೌಲ್ಯಮಾಪನ ಕುರಿತ ನಿರ್ದಿಶ್ಟ ಚರ್ಚೆಗಳನ್ನು ಪರಿಶೀಲಿಸಿ ಈ ಸಂಬಂಧವಾದ ತಾತ್ವಿಕ ಸಮಸ್ಯೆಗಳನ್ನು ಗುರುತಿಸಿಕೊಳ್ಳುವ ಪ್ರಯತ್ನ ಮಾಡಲಾಗಿದೆ. ಅಂದರೆ, ಈ ಬಗೆಯ ಚರ್ಚೆಗಳಲ್ಲಿ

ವ್ಯಕ್ತವಾಗುವ ಕಲಿಕೆಯ ಸಮಸ್ಯೆಗಳನ್ನು ಕುರಿತ ತಾತ್ವಿಕ ಪ್ರಶ್ನೆಗಳನ್ನು ಸದ್ಯದ ಅಧ್ಯಯನಕ್ಕೆ ಪೂರಕವಾಗಿ ಪರಿಶೀಲಿಸಿ, ಕ್ರೋಢೀಕರಿಸಿ ಗುರುತಿಸಿಕೊಳ್ಳಲಾಗಿದೆ. ಈ ಕಾರಣವಾಗಿ, ಇದುವರೆಗಿನ ಚರ್ಚೆಗಳಲ್ಲಿ ಉತ್ಪನ್ನವಾದ ತಿಳುವಳಿಕೆಯನ್ನು ಮೂರು ಭಾಗಗಳಾಗಿ ಗುರ್ತಿಸಿಕೊಂಡು ಇಲ್ಲಿ ಸಮೀಕ್ಷಿಸಲಾಗಿದೆ.

೧. ಪದವಿ ಕನ್ನಡ ಭಾಷಾ ಕಲಿಕೆಯ ಪಠ್ಯಗಳ ಸ್ವರೂಪದ ಹಿನ್ನೆಲೆಯಲ್ಲಿ ಬೋಧನೆ ಮತ್ತು ಕಲಿಕೆಯ ವಿಧಾನ ಮತ್ತು ಪರಿಕರಗಳನ್ನು ಮುಖ್ಯಮಾಡಿಕೊಂಡು-ನಡೆಸಿರುವ ಸಂಶೋಧನಾ ಅಧ್ಯಯನ.

೨. ಪದವಿ ಕನ್ನಡ ಪಠ್ಯಕ್ರಮ, ಬೋಧನೆ ಮತ್ತು ಕಲಿಕಾ ಪ್ರಕ್ರಿಯೆಯ ಕುರಿತ ಸೆಮಿನಾರು ಮತ್ತು ಕಮ್ಮಟಗಳು.

೩. ಶಿಕ್ಷಣ ಕಾಳಜಿ ಕುರಿತ ಚರ್ಚೆಗಳಲ್ಲಿ ಪ್ರಸ್ತಾಪಿತವಾಗಿರುವ ಪಠ್ಯಕ್ರಮ, ಬೋಧನೆ ಮತ್ತು ಕಲಿಕೆ ಕುರಿತ ಪ್ರತಿಕ್ರಿಯೆಗಳು.

**೩.೧ ಸಂಶೋಧನಾ ಅಧ್ಯಯನ:**

ಮಂಗಳೂರು ವಿಶ್ವವಿದ್ಯಾಲಯ ವ್ಯಾಪ್ತಿಯಲ್ಲಿ ಪಿ.ಎಚ್‌ಡಿ ಪದವಿಗಾಗಿ, ಪದವಿ ಕನ್ನಡ ಭಾಶೆಯ ಪಠ್ಯಗಳ ಮಾದರಿಯನ್ನು ಮುಖ್ಯಮಾಡಿಕೊಂಡು ಹೊಸಕೆರೆ ಶಿವಸ್ವಾಮಿ ಯವರು ಮಂಗಳೂರು ವಿಶ್ವವಿದ್ಯಾಲಯ ವ್ಯಾಪ್ತಿಯಲ್ಲಿ 'ಪದವಿ ತರಗತಿಗಳಲ್ಲಿ ಕನ್ನಡ ಭಾಶಾಸಾಹಿತ್ಯ ಕಲಿಕೆ; ಒಂದು ವಿವೇಚನೆ' ಎಂಬ ವಿಶಯವನ್ನು ಕುರಿತು ಅಧ್ಯಯನ ನಡೆಸಿದ್ದಾರೆ.

ಅಧ್ಯಯನದ ಶೀರ್ಶಿಕೆಯೇ ಸೂಚಿಸುವಂತೆ, ಕನ್ನಡ **ಭಾಶಾಸಾಹಿತ್ಯ** ಕಲಿಕೆಯ ಕುರಿತ ಶಿಕ್ಷಣದಲ್ಲಿ ಕನ್ನಡದ ಸ್ಥಾನಮಾನ, ಪದವಿ ತರಗತಿಗಳಲ್ಲಿ ಕನ್ನಡ ಶಿಕ್ಷಣ, ಕಲಿಕೆಯ ಪ್ರಾಮುಖ್ಯತೆ ಮತ್ತು ಔಚಿತ್ಯಗಳನ್ನು ಈ ಅಧ್ಯಯನದಲ್ಲಿ ಮುಖ್ಯಮಾಡಿಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಕನ್ನಡ ಪಠ್ಯಕ್ರಮ-ಪಠ್ಯಪುಸ್ತಕ, ಬೋಧನಾ ವಿಧಾನದಲ್ಲಿನ ಸಮಸ್ಯೆಗಳು, ಪರೀಕ್ಷಾ ಪದ್ಧತಿ ಮತ್ತು ಮೌಲ್ಯಮಾಪನ ವ್ಯವಸ್ಥೆಯಲ್ಲಿನ ನ್ಯೂನತೆಗಳು ಮತ್ತು ಅವುಗಳಿಗೆ ಕಾರಣಗಳನ್ನು ಚರ್ಚಿಸುವ ಪ್ರಯತ್ನವನ್ನು ಈ ಸಂಶೋಧನಾ ಪ್ರಬಂಧದಲ್ಲಿ ಅಧ್ಯಯನ ವಿಚಾರವಾಗಿ ಗಮನಿಸಲಾಗಿದೆ.

ಶಿಕ್ಷಣದ ವಿವಿಧ ಹಂತಗಳ ನಡುವಿನ ಹೊಂದಾಣಿಕೆಯ ಸಮಸ್ಯೆ, ಎರಡು ಅಥವಾ ಮೂರು ಭಾಶೆಗಳ ಕಲಿಕೆಯ ಪದ್ಧತಿಯಲ್ಲಿಯ ತಾರತಮ್ಯಗಳು, ಕನ್ನಡ ಭಾಶಾಸಾಹಿತ್ಯದ ಕಲಿಕೆಯ ಅನಿವಾರ್ಯ, ಅಗತ್ಯಗಳ ಸ್ಪಶ್ಟತೆಯ ಬಗೆಗಿನ ಗೊಂದಲಗಳನ್ನು ಪ್ರಸ್ತಾಪಿಸುವ

ಸಂಶೋಧಕರು, ಸಾಹಿತ್ಯದಲ್ಲಿ ಆಸಕ್ತಿ ಉಂಟುಮಾಡುವಂತ ಸಾಹಿತ್ಯ ಕಲಿಕೆಯ ವ್ಯವಸ್ಥೆ ಇಲ್ಲ. ಇದರಿಂದಾಗಿ ಪದವಿ ಹಂತದಲ್ಲಿ ಭಾಶಾ ಕಲಿಕೆಯೆನ್ನುವುದು ಹೊರೆಯಾಗಿದೆ ಎಂದು ಗುರುತಿಸುತ್ತಾರೆ. ಇದನ್ನು 'ಅಲಕ್ಷ್ಯಕ್ಕೆ ಗುರಿಯಾದ ಹೊರೆ' ಎಂಬ ಪೂರ್ವ ಪ್ರಮೇಯವನ್ನಿಟ್ಟುಕೊಂಡು ಆರಂಭಿಸಿರುವ ಇಲ್ಲಿನ ಚರ್ಚೆಯಲ್ಲಿ ಕರ್ನಾಟಕದ ವಿವಿಧ ವಿಶ್ವವಿದ್ಯಾಲಯಗಳ ಒಂದು ವರ್ಶದ ಪಠ್ಯಕ್ರಮಗಳನ್ನು ಪರಿಶೀಲನೆಗೆ ತೆಗೆದುಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ, ಪದವಿ ತರಗತಿಗಳಲ್ಲಿ ಕಲಿಸುತ್ತಿರುವುದು ಭಾಶೆಯೇ ಅಥವಾ ಸಾಹಿತ್ಯವೆ? ಭಾಶಾ ಬೋಧನೆ ಮತ್ತು ಸಾಹಿತ್ಯದ ಬೊಧನೆಯ ನಡುವೆ ವ್ಯತ್ಯಾಸವಿದೆಯೆ?, ಐಚ್ಚಿಕವಾಗಿ ಸಾಹಿತ್ಯದ ವಿಶಯ ಮತ್ತು ಭಾಶೆಯ ಕಾರಣವಾಗಿ ಸಾಹಿತ್ಯದ ವಿಶಯವನ್ನು ಪರೀಕ್ಶಿಸುವಲ್ಲಿ ಗೊಂದಲವಿಲ್ಲವೆ? ಎಂಬ ಪ್ರಶ್ನೆಗಳನ್ನು ಮುನ್ನೆಲೆಗೆ ತರಲು ಪ್ರಯತ್ನಿಸುತ್ತಾರೆ. ಈ ಮೂಲಕ ಅಧ್ಯಯನದ ಅವಧಿಯೆ ಸಮನಾಗಿ ಪರಿಗಣಿತವಾಗಿಲ್ಲದ ಕಾರಣ ಭಾಶಾ ವಿಶಯ ಅಲಕ್ಷ್ಯಕ್ಕೆ ಒಳಗಾಗಿದೆ ಎಂದು ಗುರುತಿಸುತ್ತಾರೆ. ಈ ಹಿನ್ನೆಲೆಯಲ್ಲಿ ಅವರು ಗುರುತಿಸುವ ಕಲಿಕೆಯ ಸಮಸ್ಯೆಗಳೆಂದರೆ, ವಿದ್ಯಾರ್ಥಿಗಳಿಗೆ ಸಾಹಿತ್ಯ, ವಿಮರ್ಶೆ, ರಸಗ್ರಹಣಗಳಿಗೆ ಬೇಕಾದ ಪೂರ್ವ ಸಿದ್ಧತೆಯಿಲ್ಲದಿರುವುದು. ಬೋಧಕರಲ್ಲಿ, ಕಾವ್ಯ, ನಾಟಕ, ವಿಮರ್ಶೆ, ಕಾದಂಬರಿ, ಸಣ್ಣಕತೆ, ಪ್ರವಾಸ ಕಥನ ಮೊದಲಾದ ವಿಭಿನ್ನ ಸಾಹಿತ್ಯಪ್ರಕಾರಗಳನ್ನು ಹೇಗೆ ಬೋಧಿಸಬೇಕೆಂಬ ವಿಶಯದಲ್ಲಿನ ಏಕಾಭಿಪ್ರಾಯದ ಕೊರತೆಯಿದೆ ಎನ್ನುವುದನ್ನು. ಇದಕ್ಕೆ ಭಾಶಾಸಾಹಿತ್ಯದ ಬೋಧನೆಯ ಸಂದರ್ಭದಲ್ಲಿ ಸಾಹಿತ್ಯ ಮತ್ತು ಬದುಕಿಗೆ ಸಂಬಂಧ ಕಲ್ಪಿಸುವಲ್ಲಿ ಅಧ್ಯಾಪಕರು ವಿಫಲವಾಗುತ್ತಿರುವುದು ಕಾರಣ ಎನ್ನುತ್ತಾರೆ. ಇದರಿಂದಾಗಿ ಭಾಶಾಸಾಹಿತ್ಯವು ಪರೀಕ್ಶೆಗೆ ಅನಗತ್ಯ, ತಪ್ಪಾಗಿ ಬರೆದರೂ ಪಾಸಾಗಬಹುದೆಂಬ ದೃಡ ನಂಬಿಕೆ ವಿದ್ಯಾರ್ಥಿಗಳಲ್ಲಿದೆ ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ತರಗತಿಯ ಪಾಠ ಎನ್ನುವುದು 'ರನ್ನಿಂಗ್ ಕಾಮೆಂಟರಿ', ಅಧ್ಯಾಪಕರ ಪರಿಶ್ರಮ 'ಕಂಠಶೋಶಣೆ' ಎಂಬ ಪ್ರತಿಕ್ರಿಯೆಗಳನ್ನು ಕೊಡುತ್ತಾರೆ. ಅಲ್ಲದೆ, ಸಾಹಿತ್ಯದಲ್ಲಿ ಆಸಕ್ತಿ ಕೆರಳಿಸದ ಪಠ್ಯಪುಸ್ತಕಗಳಿರುವುದು ಮತ್ತು ಅವಿಸ್ತರ–ಸವಿಸ್ತರಗಳ ಗೊಂದಲಗಳು ಕನ್ನಡ ಭಾಶಾಸಾಹಿತ್ಯದ ಕಲಿಕೆಯನ್ನು ಹಿಂದೆ ಸರಿಯುವಂತೆ ಮಾಡಿದೆ ಎಂಬ ತೀರ್ಮಾನಗಳನ್ನು ಪ್ರಕಟಿಸುತ್ತಾರೆ. ಈ ಹಿನ್ನೆಲೆಯಲ್ಲಿ, ತರಗತಿಗಳಲ್ಲಿ ಭಾಶಾ ಕಲಿಕೆ ಅನಿವಾರ್ಯ ಎಂಬ ಸ್ಥಿತಿ ನಿರ್ಮಾಣವಾಗಬೇಕು. ಪದವಿಯ ಮೂರೂ ವರ್ಶಗಳು ಭಾಶಾ ಕಲಿಕೆಯನ್ನು ಕಡ್ಡಾಯಗೊಳಿಸಿ ಇತರೆ ಐಚ್ಚಿಕ ವಿಶಯಗಳಂತೆ ಪರಿಗಣಿಸಬೇಕು. ಆ ಮೂಲಕ ಭಾಶೆಯ ಪಠ್ಯಗಳನ್ನು ಯಾಕೆ ಓದಬೇಕು ಎಂಬ ಮನೋಭಾವವನ್ನು ವಿದ್ಯಾರ್ಥಿಗಳ ಮನಸ್ಸಿನಿಂದ

ಹೋಗಲಾಡಿಸಬೇಕು. ಈ ಕಾರಣವಾಗಿ ಸಮಕಾಲೀನತೆಗೆ ಪ್ರಸ್ತುತವಾಗದ ಪಠ್ಯಗಳನ್ನು ಪರಿಷ್ಕರಿಸಬೇಕು ಎಂಬ ಸಲಹೆಗಳನ್ನು ವ್ಯಕ್ತಪಡಿಸುತ್ತಾರೆ. ಈ ಹಿನ್ನೆಲೆಯಲ್ಲಿ ಪಠ್ಯಪುಸ್ತಕಗಳಾಗಿದ್ದ ಕೃತಿಗಳನ್ನು ಪರಿಶೀಲನೆಗೆ ತೆಗೆದುಕೊಂಡಿದ್ದಾರೆ.

ಬೋಧನಾ ಚಟುವಟಿಕೆಯನ್ನು ಕುರಿತು, 'ಏಕಮುಖಿಯಾಗಿದೆ', ಇದು 'ರನ್ನಿಂಗ್ ಕಾಮೆಂಟರಿ'ಯಂತಿರುತ್ತದೆ ಎನ್ನುವ ಸಂಶೋಧಕರು ಇದು, ವಿದ್ಯಾರ್ಥಿಗಳೊಂದಿಗೆ ಪರಸ್ಪರ ಸಂವಾದಕ್ಕೆ ಅವಕಾಶವನ್ನು ಕಲ್ಪಿಸುವಂತಿರಬೇಕು. ಶುದ್ಧವಾದ ಬರವಣಿಗೆ, ಅಭಿವ್ಯಕ್ತಿಯ ಕ್ರಮ, ಅನುಭವವನ್ನು ವಿಸ್ತರಿಸಲು, ವ್ಯಕ್ತಿತ್ವವನ್ನು ಹಿಗ್ಗಿಸಲು ಅವಕಾಶ ಒದಗಿಸಬೇಕು ಎಂದು ಆಶಿಸುತ್ತಾರೆ. ಇದಕ್ಕಾಗಿ ವಿವಿಧ ಸಾಹಿತ್ಯ ಪ್ರಕಾರಗಳ ಬೋಧನೆಯ ವೈವಿಧ್ಯತೆಯನ್ನು ಸ್ವಂತ ಬೋಧನಾನುಭವದ ಉದಾಹರಣೆಯೊಂದಿಗೆ ಚರ್ಚಿಸುತ್ತಾರೆ.

ಪರೀಕ್ಷಾ ಪದ್ಧತಿ ಮತ್ತು ಪ್ರಶ್ನೆ ಪತ್ರಿಕೆಗಳಲ್ಲಿನ ನ್ಯೂನತೆಗಳ ಕುರಿತಾಗಿ, ಕಥಾಮೂಲವಾದ ಉತ್ತರಗಳನ್ನು ಬರೆಯುವ ಪ್ರಶ್ನೆಗಳೇ ಹೆಚ್ಚಾಗಿದ್ದು, ವಿದ್ಯಾರ್ಥಿಗಳು ವಿಮರ್ಶಾತ್ಮಕವಾಗಿ ಬರೆಯಬಹುದಾದ ರೀತಿಯಲ್ಲಿ ಪ್ರಶ್ನೆಗಳು ರೂಪುಗೊಳ್ಳಬೇಕು ಎನ್ನುತ್ತಾರೆ. ಮೌಲ್ಯಮಾಪಕರು ಔದಾರ್ಯದಿಂದ ಅಂಕ ಕೊಡುತ್ತಾರೆ ಎಂದು ಆರೋಪಿಸುವ ಸಂಶೋಧಕರು, ಇದು ತಪ್ಪಿ, ಓದಿ ಪಾಸಾಗಲು ಅವಕಾಶವು ಹೆಚ್ಚುವಂತೆ ಹಲವಾರು ವರುಶಗಳಿಂದ ಬದಲಾಗದ ಪ್ರಶ್ನೆ ಪತ್ರಿಕೆಯ ಸ್ವರೂಪವನ್ನು ಬದಲಿಸಬೇಕು. ಭಾಶಾಭ್ಯಾಸದ ಸಾರ್ಥಕತೆಗೆ ವ್ಯಾಕರಣಾಂಶಗಳನ್ನೊಳಗೊಂಡ ಪ್ರಶ್ನೆಗಳಿರಬೇಕು ಮತ್ತು ಹಿಂದಿ, ಸಂಸ್ಕೃತಿ ಭಾಶೆಗಳ ಕಲಿಕೆಯ ಆಯ್ಕೆಯ ನಡುವೆ ಕನ್ನಡ ಬಯಸುವವರ ಸಂಖ್ಯೆ ಕಡಿಮೆಯಾಗದಂತೆ ನೋಡಿಕೊಳ್ಳಬೇಕು ಎಂಬ ಅಭಿಪ್ರಾಯಕ್ಕೆ ಬರುತ್ತಾರೆ.

ಮೌಲ್ಯಮಾಪನ ವ್ಯವಸ್ಥೆಯನ್ನು ಕುರಿತು, ಈ ವಿಚಾರವಾಗಿ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳಿಂದಲೂ ಆಕ್ಷೇಪಣೆಗಳಿವೆ ಎನ್ನುವ ಸಂಶೋಧಕರು ಅನುಭವಿ ಅಧ್ಯಾಪಕರು ರೂಪಿಸುವ ಮಾದರಿ ಉತ್ತರ ಪತ್ರಿಕೆಯು(Sche me of valuation) ವಿದ್ಯಾರ್ಥಿಗಳಿಗೆ ದೊರೆಯುವಂತಾಗಬೇಕು. ಅಲ್ಲದೆ, ಅತಿ ಹೆಚ್ಚು ಅಂಕಗಳನ್ನು ಪಡೆದ ವಿದ್ಯಾರ್ಥಿಗಳ ಮೂರ್‍ನಾಲ್ಕು ಉತ್ತರ ಪತ್ರಿಕೆಗಳು ಇತರೆ ವಿದ್ಯಾರ್ಥಿಗಳಿಗೆ ದೊರೆಯುವಂತೆ ಪ್ರಕಟಿಸಬೇಕು ಎನ್ನುವ ಬೇಡಿಕೆಯನ್ನು ಆಗ್ರಹಪೂರ್ವಕವಾಗಿ ಪ್ರಸ್ತಾಪಿಸುತ್ತಾರೆ.

ಒಟ್ಟು ಈ ಸಂಪ್ರಬಂಧದಲ್ಲಿ ಪಠ್ಯಕ್ರಮ, ಬೋಧನೆ, ಕಲಿಕೆ, ಪರೀಕ್ಷೆ, ಮೌಲ್ಯಮಾಪನ ಚಟುವಟಿಕೆಗಳ ಚರ್ಚೆಯನ್ನು ಪ್ರಸ್ತುತ ಜಾರಿಯಲ್ಲಿರುವ ಸಾಹಿತ್ಯಮೂಲವಾದ ಭಾಶೆಯ ಕಲಿಕಾ ವ್ಯವಸ್ಥೆಯ ವಿದ್ಯಮಾನಗಳ ಚೌಕಟ್ಟಿನಲ್ಲಿಯೆ ನಡೆಸಲಾಗಿದೆ. ಇದರಿಂದಾಗಿ ಅದಕ್ಕೆ ಬೇಕಾದ

ನೈತಿಕ ಜವಾಬ್ದಾರಿಗಳನ್ನು ಸ್ಪಷ್ಟಪಡಿಸಿಕೊಳ್ಳಲು ಮಾತ್ರ ಈ ಅಧ್ಯಯನ ಚಿಂತಿಸುತ್ತದೆ. ಈ ಮೂಲಕ ಕನ್ನಡ ಭಾಷಾ ಕಲಿಕೆಯೆನ್ನುವುದು ಕನ್ನಡ ಸಾಹಿತ್ಯದ ಕಲಿಕೆ ಎಂಬ ಪಾರಂಪರಿಕ ಗ್ರಹಿಕೆಯನ್ನು ಈ ಅಧ್ಯಯನವು ಮುಖ್ಯ ದಾರಿಯಾಗಿಸಿಕೊಂಡಿದೆ. ಇದೇ ಕಾಳಜಿಯಿಂದ ಚಾಲ್ತಿಯಲ್ಲಿರುವ ಕನ್ನಡ ಸಾಹಿತ್ಯ ಪರಂಪರೆಯ ಪರಿಚಯವೇ ಮಾನದಂಡವಾಗಿರುವ ಸಾಂಪ್ರದಾಯಿಕ ಪಠ್ಯಕ್ರಮವನ್ನು, ಬೋಧನಾ ವಿಧಾನವನ್ನು ಮತ್ತು ಪರೀಕ್ಷೆ ಮತ್ತು ಮೌಲ್ಯಮಾಪನ ಪದ್ಧತಿಗಳನ್ನು ಸುಧಾರಿಸಲು ಹಲವಾರು ಸಲಹೆಗಳನ್ನು ಪ್ರಾಸಂಗಿಕವಾಗಿ ಮುಂದಿಡುತ್ತದೆ. ಸಾಹಿತ್ಯ ಪಠ್ಯಗಳಿಗೆ ಮತ್ತಷ್ಟು ಮುಖಾಮುಖಿಯಾಗುವಂತೆ ಒತ್ತಾಯಿಸುತ್ತದೆ. ಇದರ ನೇತ್ಯಾತ್ಮಕ ನೆಲೆಯನ್ನು ವಿದ್ಯಾರ್ಥಿ ಸಮುದಾಯದ ನಿರಾಸಕ್ತಿ, ಅಧ್ಯಾಪಕ ಸಮುದಾಯದ ಸೋಗಲಾಡಿತನ, ಪಠ್ಯ ಯೋಜನೆಗಳಲ್ಲಿನ ಸಮಸ್ಯೆಗಳಲ್ಲಿ ಗುರುತಿಸಲು ಪ್ರಯತ್ನಿಸುತ್ತದೆ. ಆದರೆ ಕನ್ನಡ ಭಾಷೆಯ ಬಗೆಗಿನ ತಿಳುವಳಿಕೆ ಪದವಿ ಹಂತದಲ್ಲಿ ಯಾಕೆ, ಹೇಗೆ ಮತ್ತು ಏನು ಎಂಬುದರ ಕುರಿತಂತೆ ನಿರ್ದಿಷ್ಟ ಸೈದ್ಧಾಂತಿಕ ಪ್ರಶ್ನೆಗಳನ್ನು ಎತ್ತಿಕೊಳ್ಳುವುದಿಲ್ಲ. ಚಾರಿತ್ರಿಕವಾಗಿ ಅದನ್ನು ಗ್ರಹಿಸಬೇಕಾದ ಪ್ರಶ್ನೆಯನ್ನು ಮರೆಯಲ್ಲಿಡುತ್ತಲೇ, ಪಾರಂಪರಿಕ ಪಠ್ಯಕ್ರಮಗಳ ಸಮರ್ಪಕವಾದ ಅನುಸಂಧಾನಕ್ಕೆ ಒತ್ತಯಿಸುತ್ತದೆ. ಇದರಿಂದಾಗಿ, ಪದವಿ ಹಂತದಲ್ಲಿ ಭಾಷೆಯ ಕಲಿಕೆಯೆಂದರೆ ಕನ್ನಡಸಾಹಿತ್ಯದ ಕಲಿಕೆಯೇ ಎಂಬ ಪಾರಂಪರಿಕ ಗ್ರಹಿಕೆಯನ್ನು ಇಲ್ಲಿ ಪುನರ್‌ಮಂಡಿಸಿದಂತಾಗಿದೆ. ಇದಕ್ಕೆ ಸಂಬಂಧಿಸಿದ ನೈತಿಕ ಹೊಣೆಗಾರಿಕೆಯ ಶೋಧವನ್ನು ಈ ಸಂಶೋಧನೆಯು ಗುರಿಯಾಗಿಸಿಕೊಂಡಿದೆ.

**೩.೨ ವಿಚಾರಸಂಕಿರಣ ಮತ್ತು ಕಮ್ಮಟಗಳ ಚರ್ಚೆಯಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳು:**

ಪದವಿ ಹಂತದ ಕನ್ನಡಭಾಷಾ ಪಠ್ಯಕ್ರಮ, ಬೋಧನೆ ಮತ್ತು ಕಲಿಕೆಯ ಸಮಸ್ಯೆಗಳ ಕುರಿತಾಗಿ ಕರ್ನಾಟಕದ ವಿವಿಧ ವಿಶ್ವವಿದ್ಯಾಲಯಗಳ ವ್ಯಾಪ್ತಿ ಮತ್ತು ಇನ್ನಿತರೆ ಕಡೆಗಳಲ್ಲಿ ವಿಚಾರಸಂಕಿರಣ ಮತ್ತು ಕಮ್ಮಟಗಳ ರೂಪದ ಚರ್ಚೆಗಳು ನಡೆದಿವೆ. ಕೆಲವೊಮ್ಮೆ ಇವು ಪುಸ್ತಕ ರೂಪದಲ್ಲಿ ಪ್ರಕಟವಾಗಿದ್ದರೆ, ಮತ್ತೆ ಕೆಲವೊಮ್ಮೆ ಎಲ್ಲೂ ಪ್ರಕಟಗೊಂಡಿರುವುದಿಲ್ಲ. ಸದ್ಯದ ಅಧ್ಯಯನ ಸಂದರ್ಭಕ್ಕೆ ಅನುಕೂಲವಾಗುವಂತೆ ಪ್ರಕಟಿತ ದಾಖಲೆಗಳ ಜೊತೆಗೆ, ಅಂಥ ಅಪ್ರಕಟಿತ ಟಿಪ್ಪಣಿ ರೂಪದ ದಾಖಲೆಗಳನ್ನೂ ಸಂಗ್ರಹಿಸಿ ಇಲ್ಲಿ ಪರಿಶೀಲಿಸಲಾಗಿದೆ.

**ಎ) ಮೈಸೂರು ವಿಶ್ವವಿದ್ಯಾಲಯ ವ್ಯಾಪ್ತಿಯಲ್ಲಿ;**

ಜನವರಿ ೧೯೭೫ರಲ್ಲಿ ಮೈಸೂರಿನ ಜೆಎಸ್‌ಎಸ್ ಕಾಲೇಜಿನಲ್ಲಿ ಎರಡು ದಿನಗಳ ಕಾಲ **ಕನ್ನಡ ಅಧ್ಯಾಪಕರ ಸಮ್ಮೇಳನ**ವನ್ನು ನಡೆಸಲಾಗಿದೆ[೩]. ಅಸಮಂಜಸ ಪಠ್ಯಗಳು ಮತ್ತು ಅಂಥ ಪಠ್ಯಗಳ ಕುರಿತಾಗಿ ಅಧ್ಯಾಪನ ಸಮುದಾಯದಲ್ಲಿನ ಅಸಮದಾನಗಳು, ಪಠ್ಯಗಳು, ಬೋಧನೆ ಮತ್ತು ಕಲಿಕೆಯಲ್ಲಿ ಒಡ್ಡುತ್ತಿದ್ದ ನೈತಿಕ ಸಮಸ್ಯೆಗಳು ಮೊದಲಾದ ಅಂಶಗಳನ್ನು ಮುಖ್ಯಮಾಡಿಕೊಂಡು ಈ ಸಮ್ಮೇಳನ ನಡೆದಿದೆ. ಮೈಸೂರು ವಿಶ್ವವಿದ್ಯಾಲಯ ಮಟ್ಟದ ಈ ಸಮ್ಮೇಳನದಲ್ಲಿ, ಜಾರಿಯಲ್ಲಿರುವ ಕನ್ನಡ ಪಠ್ಯಕ್ರಮ, ಪಠ್ಯನಿರ್ಮಾಣ, ಬೋಧನೆ, ಕಲಿಕೆ, ಪರೀಕ್ಷೆ, ಪ್ರಶ್ನೆ ಪತ್ರಿಕೆ ಮತ್ತು ಮೌಲ್ಯಮಾಪನ ವಿಚಾರಗಳ ಕುರಿತು ತೀವ್ರವಾದ ಚರ್ಚೆ ನಡೆದಿದೆ. ಅಧ್ಯಾಪಕರ ಪರಸ್ಪರ ಸಹಜವಾದ ಬೇಟಿಗಳಲ್ಲಿ, ಕೇಂದ್ರೀಯ ಮೌಲ್ಯಮಾಪನ ಸಂದರ್ಭದ ಮುಖಾಮುಖಿಯಲ್ಲಿ, ತಾವು ಪಾಠ ಮಾಡಿದ ಪಠ್ಯ ಪುಸ್ತಕಗಳ ಬಗ್ಗೆ, ಪಠ್ಯಕ್ರಮಗಳ ಬಗ್ಗೆ 'ಆ ಪುಸ್ತಕ ಹಾಗಿದೆ, ಈ ಪುಸ್ತಕ ಹೀಗಿದೆ, ಇವುಗಳಿಗಿಂತ ಒಳ್ಳೆಯ ಪುಸ್ತಕಗಳು ಕನ್ನಡದಲ್ಲಿಲ್ಲವೇ? ಈ ತರಗತಿಗಿಟ್ಟಿರುವ ಕವನಗಳು ಹೆಚ್ಚಾದವು, ಆ ತರಗತಿಗಿಟ್ಟಿರುವ ಕಥಾಸಂಕಲನ ಡಿಸೆಂಬರ್‌ಗೇ ಮುಗಿಯುತ್ತದೆ, ಸಾಹಿತ್ಯ ಚರಿತ್ರೆಯೊಂದನ್ನೇ ವರ್ಷವಿಡೀ ಬೋಧಿಸಿದರೆ ಬೋರ್ ಆಗುವುದಿಲ್ಲವೇ?' ಇತ್ಯಾದಿ ಒಳದನಿಯಲ್ಲಿ ಗೊಣಗಾಡುವ ಒಂದು ಸಂಪ್ರದಾಯ ನಿರ್ಮಾಣವಾಗಿತ್ತು. 'ಕನ್ನಡ ಪಠ್ಯಪುಸ್ತಕಗಳು ಕನ್ನಡ ಅಧ್ಯಾಪಕರ ಘನತೆಯನ್ನು ಹೆಚ್ಚಿಸದಿದ್ದರೂ ಚಿಂತೆಯಿಲ್ಲ; ಇಳಿಸಬಾರದೆಂಬ ಆಕಾಂಕ್ಷೆ ಸಾಮಾನ್ಯವಾಗಿ ಎಲ್ಲ ಕನ್ನಡ ಅಧ್ಯಾಪಕರ ಮನಸ್ಸಿನಲ್ಲಿ ಸುಪ್ತವಾಗಿತ್ತು'. ಇದರಿಂದಾಗಿ ಪಠ್ಯಕ್ರಮ, ಪಠ್ಯಪುಸ್ತಕ ಮುಂತಾದ ಕ್ಷೇತ್ರಗಳಲ್ಲಿ 'ಹೆಪ್ಪುಗಟ್ಟಿಕೊಂಡಿರುವ ಅಧಿಕಾರವನ್ನು ವಿಕೇಂದ್ರೀಕರಣ'ಗೊಳಿಸುವುದು, ಆ ಮೂಲಕ ವಿಶ್ವವಿದ್ಯಾಲಯದ ಶೈಕ್ಷಣಿಕ ಆಗುಹೋಗುಗಳಲ್ಲಿ 'ಅಧ್ಯಾಪಕರು ಸಕ್ರಿಯವಾಗುವಂತೆ ಅವಕಾಶ ಕಲ್ಪಿಸುವುದು, ಭಾವನಾ ಪ್ರಪಂಚದಿಂದ ಕನ್ನಡವನ್ನು ಬಿಡಿಸಿ, ವಿಶ್ವವಿದ್ಯಾಲಯಗಳಲ್ಲಿ ಕನ್ನಡ ಅಧ್ಯಯನವು ಹೆಚ್ಚು ಹೆಚ್ಚಾಗಿ ವೈಚಾರಿಕವೂ, ಅರ್ಥಪೂರ್ಣವೂ ಆಗುವಂತೆ' ಮಾಡಲು ಎಂದು ಈ ಸಮ್ಮೇಳನದ ಯೋಜನೆಯ ಕುರಿತು ವಿವರಿಸಿಕೊಳ್ಳಲಾಗಿದೆ.

ಪಠ್ಯಕ್ರಮವಾಗಿ ಕನ್ನಡ ಸಾಹಿತ್ಯವನ್ನು ಪ್ರಮುಖವಾಗಿಸಿಕೊಂಡ ಸ್ವತಂತ್ರ ಕೃತಿಗಳು, ಸಂಕಲನ ಗ್ರಂಥಗಳು, ಸವಿಸ್ತರ-ಅವಿಸ್ತರ ಪಠ್ಯಗಳು, ಕನ್ನಡ ಐಚ್ಛಿಕ ಪಠ್ಯಕ್ರಮ, ವ್ಯಾವಹಾರಿಕ ಕನ್ನಡ ಪಠ್ಯಕ್ರಮ, ವೈಚಾರಿಕ ಪಠ್ಯಗಳು ಮೊದಲಾಗಿ ಪಠ್ಯಸಂಬಂಧಿ ವಿಚಾರಗಳ ಕುರಿತಾದ

ಸವಿಸ್ತಾರವಾದ ಚರ್ಚೆಯನ್ನು ಈ ಸಂದರ್ಭದಲ್ಲಿ ಮಾಡಲಾಗಿದೆ. ಈ ಹಿನ್ನೆಲೆಯಲ್ಲಿ, ಪಠ್ಯ ಸಮಿತಿಗಳ ಕಾರ್ಯವೈಶಿಷ್ಟ್ಯಗಳು, ಅವುಗಳ ಮಿತಿ ಮತ್ತು ಅವು ಬದಲಾಗಬೇಕಾದ ಅನಿವಾರ್ಯತೆಯ ಪ್ರಶ್ನೆಗಳನ್ನು ಚರ್ಚೆಗೆ ತೆಗೆದುಕೊಂಡು ಅದಕ್ಕೆ ಸಂಬಂಧಿಸಿದ ನೈತಿಕ ಹೊಣೆಗಾರಿಕೆಯನ್ನು ರೂಪಿಸಲು ಪ್ರಯತ್ನಿಸಲಾಗಿದೆ. ಇಂದಿನ ಸಂವೇದನೆ, ಇಂದಿನ ಸಾಮಾಜಿಕ ಪರಿಸ್ಥಿತಿಗಳನ್ನು ಅರಿವುಮಾಡಿಕೊಡಬಲ್ಲ, ವಿದ್ಯಾರ್ಥಿಗಳ ಮಟ್ಟಕ್ಕೆ ಹೊಂದಿಕೆಯಾಗುವಂತ, ವಿದ್ಯಾರ್ಥಿಗಳನ್ನು ಆಕರ್ಷಿಸುವಂತ **ಪ್ರಾತಿನಿಧಿಕ ಸಾಹಿತ್ಯ** ಕೃತಿಗಳನ್ನು ಪಠ್ಯಗಳಾಗಿಸಬೇಕು ಎನ್ನುವ ಅಭಿಪ್ರಾಯ ಇಲ್ಲಿ ವ್ಯಕ್ತವಾಗಿದೆ. ಈ ಮೂಲಕ ಶಿಕ್ಷಣದಲ್ಲಿ ಪ್ರಾಥಮಿಕ, ಮಾಧ್ಯಮಿಕ, ಪ್ರೌಢ, ಪಿ.ಯು.ಸಿ. ಪದವಿ, ಸ್ನಾತಕೋತ್ತರ–ಇದು ಒಂದು ಕಟ್ಟಡ, ಒಂದು ದಾರಿ, ಒಂದು ಏಣಿಯಾಗಿ ಕಂಡುಕೊಳ್ಳಬೇಕಾದ ಅಭಿಪ್ರಾಯಗಳು ಕನ್ನಡ ಅಧ್ಯಾಪಕರಲ್ಲಿ ವ್ಯಕ್ತವಾಗಿದ್ದು ಇವು ಪ್ರತ್ಯೇಕತೆಯನ್ನು ನಿರ್ಮಿಸುವ ಅಡ್ಡಗೋಡೆಗಳಾಗಬಾರದು ಎಂದು ಈ ಸಂದರ್ಭದಲ್ಲಿ ಆಶಿಸಲಾಗಿದೆ.

ಈ ಸಂದರ್ಭದ ಬಹಳ ಮುಖ್ಯ ಚರ್ಚೆಯೆಂದರೆ, ಪಠ್ಯಪುಸ್ತಕಗಳ ಆಯ್ಕೆಯ ಮಾನದಂಡ, ಪಠ್ಯಕ್ರಮಗಳ ಗುಣಮಟ್ಟ ಮತ್ತು ಪ್ರಮಾಣವನ್ನು ಕುರಿತದ್ದಾಗಿದೆ. ವಿದ್ಯಾರ್ಥಿಗಳಿಂದ ನಿರೀಕ್ಷಿಸುವ ಭಾಶಿಕ ಸಾಮರ್ಥ್ಯ, ವಿಮರ್ಶನಾಶಕ್ತಿ, ಜ್ಞಾನದ ಮಟ್ಟ ಮತ್ತು ಪ್ರಭಾವಗಳ ಹಿನ್ನೆಲೆಯಲ್ಲಿ ಪಠ್ಯಪುಸ್ತಕ ಆಯ್ಕೆ ಸಮಿತಿಯ ನೈತಿಕ ಜವಾಬ್ದಾರಿಯ ಪ್ರಶ್ನೆಗಳನ್ನು ಮುನ್ನೆಲೆಗೆ ತರಲಾಗಿದೆ. ಇಲ್ಲಿ ಭಾಗವಹಿಸಿದ ಅಧ್ಯಾಪಕ ಸಮುದಾಯದಿಂದ, ಕನ್ನಡ ಸಾಹಿತಿಗಳು ಮತ್ತು ವಿಮರ್ಶಕರಿಂದ ಪಠ್ಯಪುಸ್ತಕಗಳ ಕುರಿತಂತೆ ತೀಕ್ಷ್ಣವಾದ ಅಭಿಪ್ರಾಯಗಳು ವ್ಯಕ್ತವಾಗಿವೆ. 'ಕನ್ನಡದ ಬಗ್ಗೆ ಬಹಳಶ್ಟು ಮಾತಾಡುವ ಪಠ್ಯಪುಸ್ತಕ ಸಮಿತಿ ಕನ್ನಡಕ್ಕೆ ಮಾಡುತ್ತಿರುವ ದ್ರೋಹವಶ್ಟೆ ಅಲ್ಲ ಇದು ಆ ವಿದ್ಯಾರ್ಥಿಗಳಿಗೂ ಆಗುವ ಅನ್ಯಾಯ! ಇಲ್ಲಿ ನಡೆಯುತ್ತಿರುವ ಅನ್ಯಾಯ ಎಂಥದು? ಕನ್ನಡದಲ್ಲಿ ಒಳ್ಳೆಯ ಸ್ವತಂತ್ರ ಕೃತಿಗಳಿಗೆ ಬರ ಬಂದಿದೆಯೆ? ನಾನು ಹೇಳುತ್ತೇನೆ ಇಲ್ಲಿ ಭ್ರಶ್ಟಾಚಾರ ನಡೆಯುತ್ತಿದೆ'(ರಾಮದಾಸ್), 'ಪಠ್ಯಪುಸ್ತಕವೆಂದರೆ ಹಣ, ಹಣ ಎಂದರೆ ಭ್ರಶ್ಟಾಚಾರ'(ಜಿ.ಎಸ್.ಶಿವರುದ್ರಪ್ಪ), 'ಮಗಳ ಮದುವೆಗೂ ಪಠ್ಯಪುಸ್ತಕಕ್ಕೂ ನಂಟೆಂಥದು'(ಗೋಪಾಲಕೃಶ್ಣ ಅಡಿಗ), 'ಬಾಲ ಬುಡುಕರ ಪುಸ್ತಕಗಳು ಮಾತ್ರ ಪಠ್ಯಪುಸ್ತಕಗಳು ಆಗುವುದು ನಿಲ್ಲಬೇಕು'(ಅಧ್ಯಾಪಕರೊಬ್ಬರು), 'ಪಠ್ಯಪುಸ್ತಕ ಸಮಿತಿಗಳಲ್ಲಿ ಇರುವವರ ವೈಯುಕ್ತಿಕ ಇಶ್ಟಾನಿಶ್ಟ, ಬೇಕುಬೇಡಗಳ ಮಟ್ಟದಲ್ಲಿಯೇ ಪಠ್ಯಪುಸ್ತಕಗಳ ತೀರ್ಮಾನವಾಗುವಂತ ಅವೈಜ್ಞಾನಿಕ ಮತ್ತು ಅತಾತ್ವಿಕ ಪದ್ದತಿ ಇದ್ದಂತಾಗಿದೆ. ಪಠ್ಯಕ್ರಮವನ್ನು ಆಧುನಿಕವಾದ ಶಿಕ್ಷಣತತ್ವದ ಆಧಾರದ ಮೇಲೆ ಸುವ್ಯವಸ್ಥಿತವಾಗಿ ರೂಪಿಸುವಂತ ರಾಜ್ಯಮಟ್ಟದ ಪ್ರತ್ಯೇಕ

ಸಂಸ್ಥೆಯನ್ನು ಸರಕಾರ ಸ್ಥಾಪಿಸಬೇಕು' (ಜಿ.ಎಚ್.ನಾಯಕ್) ಎಂಬ ಪ್ರತಿಕ್ರಿಯೆ, ಅಭಿಪ್ರಾಯ, ಆಗ್ರಹಗಳು ತೀವ್ರವಾಗಿ ವ್ಯಕ್ತವಾಗಿರುವುದು ಕಾಣುತ್ತದೆ.

ಕನ್ನಡ ಬೋಧನೆ ಮತ್ತು ಕಲಿಕಾರ್ಥಿಯ ಸಂಬಂಧಗಳ ಕುರಿತಾಗಿ; ತರಗತಿ 'ಹರಿಕಥಾ ಶಿವಕಥಾ ಕಾಲಕ್ಷೇಪದಂತಾಗಿದೆ' ಎಂತಲೂ, 'ವಿದ್ಯಾರ್ಥಿಗಳು ಅಟೆಂಡೆನ್ಸ್‌ನ ಮೋಕ್ಷಪ್ರಾಪ್ತಿಗಾಗಿ ಬಂದ ನಿವೃತ್ತರು, ವಿತಂತುಗಳು' ಎಂದೂ, ಮಾರ್ಕೆಟ್ ಗೈಡ್ ಮತ್ತು ನೋಟ್ಸ್‌ಗಳ ಸಹಾಯದಿಂದ ಪರೀಕ್ಷೆಯಲ್ಲಿ 'ಯಾವ ಬಗೆಯ ಪ್ರಶ್ನೆಗಳನ್ನು ಕೇಳಿದರೂ ಸುಲಭವಾಗಿ ಅಂದಾಜಿನ ಮೇಲೆ ಕಥೆ ಬರೆದು ಪಾಸೂ ಮಾಡುತ್ತಾರೆ'(ಮ.ಗಂ.ರೇಣುಕಾಪ್ರಸನ್ನ)ಎಂದು ಪ್ರತಿಕ್ರಿಯೆಗಳು ವ್ಯಕ್ತವಾಗಿವೆ. ಈ ಹಿನ್ನೆಲೆಯಲ್ಲಿ ಪರೀಕ್ಷೆಯನ್ನು 'ಕುರುಡು ಕಂಠಪಾಠವನ್ನು ಆಧರಿಸಿದ ಕುರುಡು ಪದ್ಧತಿ'(ಎಲ್.ತಿಪ್ಪೆಸ್ವಾಮಿ), ಪ್ರಶ್ನೆಪತ್ರಿಕೆಯನ್ನು 'ಲಾಟರಿಗಳನ್ನನುಸರಿಸಿದ ಶ್ರದ್ಧೆ' ಎಂದೂ ಜರಿಯಲಾಗಿದೆ. ಕಾಗುಣಿತದ ತಪ್ಪುಗಳಿಗೆ ಯತೋಚಿತವಾಗಿ ಅಂಕಗಳನ್ನು ಕಳೆಯುವುದರಿಂದ ಫೇಲಾಗುವವರಲ್ಲಿ ನೂರಕ್ಕೆ ಐವತ್ತು ಅರವತ್ತು ಪಾಲಿನಷ್ಟು ವಿದ್ಯಾರ್ಥಿಗಳು ಇದರಿಂದಾಗಿಯೇ ಹಿಂದುಳಿಯುತ್ತಾರೆ. ಇದು ಸರಿಯಲ್ಲ(ಕೆ.ಶಿವರಾಮ ಐತಾಳ) ಎಂಬ ಅಭಿಪ್ರಾಯಗಳು ಕಾಣುತ್ತವೆ.

ಪಠ್ಯಪುಸ್ತಕ ನಿರ್ಧಾರ, ಬೋಧನೆ, ಪರೀಕ್ಷೆ, ಮೌಲ್ಯಮಾಪನದ ಮೂಲಕ ನಡೆಯುವ ಕಲಿಕೆಯನ್ನು 'ಅಂದಾದುಂದಿಯ ಕಣ್ಣು ಕಟ್ಟು ವ್ಯಾಪಾರ' ಎನ್ನಲಾಗಿದೆ. 'ವಿದ್ಯಾರ್ಥಿಯ ನಿಜವಾದ ಯೋಗ್ಯತೆ ಮತ್ತು ಬೆಳವಣಿಗೆಯ ನಿರ್ಧಾರ ಕಲಿಕಾರ್ಥಿಯನ್ನು ಗಮನಿಸುವ ಅಧ್ಯಾಪಕನಿಗೆ ಇರಬೇಕು'. ಇದಕ್ಕಾಗಿ 'ಆಂತರಿಕ ಮೌಲ್ಯಮಾಪನ' ನಡೆಸುವುದು, ವರ್ಷಕ್ಕೊಮ್ಮೆ ಪರೀಕ್ಷಿಸದೆ 'ಕ್ಲುಪ್ತ ಅವಧಿ'ಗಳಲ್ಲಿ ವರ್ಷದಲ್ಲಿ ಹಲವುಭಾರಿ ಅಧ್ಯಾಪಕರು ಪರೀಕ್ಷೆಯನ್ನು ನಡೆಸುತ್ತಾ ಹೋಗಬೇಕು ಮತ್ತು ವರ್ಷದ ಅಂತ್ಯದಲ್ಲಿ ಮೌಖಿಕ ಪರೀಕ್ಷೆಗಳನ್ನು ನಡೆಸಬೇಕು ಎಂಬ ಅಭಿಪ್ರಾಯ ಕಾಣುತ್ತದೆ. ಒಂದು ಭಾಶೆಯ ಅಸ್ತಿತ್ವ ಮತ್ತು ಬೆಳವಣಿಗೆಗೆ ಅದರ ಸಾಮಾಜಿಕ ಪ್ರಯೋಜನ ಮುಖ್ಯ. ಕನ್ನಡ ಭಾಶೆಯು 'ಸಾಹಿತ್ಯಾಭಿವ್ಯಕ್ತಿಯ ಸಾಧನಕ್ಕಿಂತ ಹೆಚ್ಚಾಗಿ ಕರ್ನಾಟಕದ ಜನತೆಯ ಸ್ವಾತಂತ್ರ್ಯಾಭಿಕ್ತಿ' ಎಂದು ಈ ಸಂದರ್ಭದಲ್ಲಿ ವಿವರಿಸಿಕೊಳ್ಳಲಾಗಿದ್ದು, ಇದರಿಂದಾಗಿ ಕನ್ನಡದ ಪಠ್ಯ ಪುಸ್ತಕಗಳು ಶಿಕ್ಷಣದ ಇತರೆ ಪಠ್ಯಗಳಿಗಿಂತ ಹೆಚ್ಚು ಮಹತ್ವವುಳ್ಳವು ಎಂದು ಭಾವಿಸಲಾಗಿದೆ. ಆದರೆ ಇದನ್ನು ಕರ್ನಾಟಕದ ಪ್ರತಿಯೊಬ್ಬ ವಿದ್ಯಾರ್ಥಿಯು ಪಠ್ಯಗಳ ಮೂಲಕ,

ಭಾಶೆ-ಸಾಹಿತ್ಯಾಭ್ಯಾಸದ ಜೊತೆಯಲ್ಲಿ ಸಂಸ್ಕೃತಿ, ಮಾನವ ಸ್ವಭಾವ, ಜೀವನಕ್ಕೆ ಸಂಬಂಧಿಸಿದ ಮೌಲ್ಯಗಳನ್ನು ಪಡೆಯುವುದಾಗಬೇಕು ಎನ್ನಲಾಗುದೆ. ಹೀಗೆನ್ನುವಲ್ಲಿ ಭಾಶಿಕ ಕಲಿಕೆಯ ಪ್ರಸ್ತುತೆಯು ಹಿಂದೆ ಸರಿದು ಇಲ್ಲಿನ ಒಟ್ಟು ಚರ್ಚೆಯು **ಸಾಹಿತ್ಯಪಠ್ಯ**ಗಳು ಭಾಶೆಯ ಕಲಿಕೆಯಲ್ಲಿ ಪ್ರವೃತ್ತಗೊಳ್ಳುವುದನ್ನು ಮುನ್ನೆಲೆಗೆ ತಂದಿರಿಸಿಕೊಂಡಂತಾಗಿದೆ.

**ಬಿ) ಬೆಂಗಳೂರು ವಿಶ್ವವಿದ್ಯಾಲಯ ವ್ಯಾಪ್ತಿಯಲ್ಲಿ;**

೧) ಜಿ.ಎಸ್.ಎಸ್. ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿದ್ದ ಅವಧಿಯಲ್ಲಿ ೧೯೮೫ರ ಸೆಪ್ಟಂಬರ್‌ನಲ್ಲಿ **ಕಾಲೇಜಿನಲ್ಲಿ ಕನ್ನಡ ಬೋಧನೆ** ಎಂಬ ವಿಶಯವಾಗಿ ಮೂರು ದಿನಗಳ ಕಾಲ ಬೆಂಗಳೂರಿನಲ್ಲಿ ಕಮ್ಮಟ ನಡೆದಿದೆ. ಈ ವಿಚಾರವಾಗಿ ಒಟ್ಟು ಒಂಬತ್ತು ಗೋಶ್ಠಿಗಳು ನಡೆದಿದ್ದು, ವಿವಿಧ ಕಾಲೇಜುಗಳ ಕನ್ನಡದ ಅನುಭವಿ ಅಧ್ಯಾಪಕರು, ಜಾರಿಯಲ್ಲಿರುವ ಪಠ್ಯಕ್ರಮದ ಹಿನ್ನೆಲೆಯಲ್ಲಿ ಮಂಡಿಸಿದ ಟಿಪ್ಪಣಿಗಳ ರೂಪದ ಅಪ್ರಕಟಿತ ದಾಖಲೆಗಳನ್ನು ಇಲ್ಲಿ ಪರಿಶೀಲನೆಗೆ ತೆಗೆದುಕೊಳ್ಳಲಾಗಿದೆ.

ಪದವಿ ತರಗತಿಗಳಲ್ಲಿ **ಕನ್ನಡ ಭಾಶೆಯ ಬೋಧನೆಯ ಉದ್ದೇಶ ಮತ್ತು ವ್ಯಾಪ್ತಿ**ಯನ್ನು ವಿವರಿಸುತ್ತ ಡಾ. ಕೆ.ಎಲ್. ಗೋಪಾಲಕೃಶ್ಣಯ್ಯ; ಮಾನವಿಕ ಶಾಸ್ತ್ರಗಳು, ವಿಜ್ಞಾನ ಮೊದಲಾದವನ್ನು ಓದುವ ವಿದ್ಯಾರ್ಥಿಗಳಲ್ಲಿ ಸಾಹಿತ್ಯದ ಆಸಕ್ತಿ, ಅಭಿರುಚಿಗಳ ಮಟ್ಟವನ್ನು ಗಮನಿಸಿ ಕನ್ನಡ ಬೋದನೆಯ ಆಯಾಮಗಳನ್ನು ರೂಪಿಸಿಕೊಳ್ಳಬೇಕು. ಹಳಗನ್ನಡ, ನಡುಗನ್ನಡ ಸಾಹಿತ್ಯದ 'ರಸವತ್ತಾದ ಭಾಗ'ಗಳನ್ನು ಪರಿಚಯಿಸಬೇಕು. ಇದಕ್ಕಾಗಿ, 'ಶ್ರೇಶ್ಟ ಕವಿಗಳ ಕೃತಿ ಭಾಗ'ಗಳನ್ನು ಆಯ್ಕೆಮಾಡುವುದರ ಮೂಲಕ ವಿದ್ಯಾರ್ಥಿಗಳಲ್ಲಿ ಸಾಹಿತ್ಯದ ಆಸಕ್ತಿ-ಕಾವ್ಯಾಸಕ್ತಿ-ಮತ್ತು 'ಬೋಧಿಸುವವರಿಗೆ ಸಂತೋಶ'ದ ಕೆಲಸವಾಗಿಸಬೇಕು. ಆಧುನಿಕ ಕಾವ್ಯಕ್ಕೆ ಸಂಬಂಧಿಸಿದಂತೆ 'ಕಾವ್ಯ ಪಂಥ'ಗಳ ದೃಶ್ಟಿ, ಧೋರಣೆಯ ಸಂಬಂಧಗಳನ್ನು ತಿಳಿಯುವ ಹಾಗೆ ಕವಿತೆಗಳನ್ನು ಆಯ್ಕೆ ಮಾಡಬೇಕು. ಸೃಜನಶೀಲ ಪ್ರಕಾರ(ಕಾದಂಬರಿ, ಕಥೆ, ನಾಟಕ)ಗಳನ್ನು ಓದುವ ಆಸಕ್ತಿ ಮೂಡಿಸುವಂತಿರಬೇಕು ಎಂದು ಅಭಿಪ್ರಾಯ ಪಡುತ್ತಾರೆ.

**ಕನ್ನಡ ಪಠ್ಯಕ್ರಮ ಮತ್ತು ಪಠ್ಯಪುಸ್ತಕ**ಗಳ ಕುರಿತ ವಿಚಾರಗಳ ಮಂಡನೆಯಲ್ಲಿ ಎಚ್.ಎಸ್. ರಾಘವೇಂದ್ರ ರಾವ್; ಸಾಹಿತ್ಯವು, ಶಿಕ್ಶಣದ ಯಶಸ್ಸಿನ ಮಾನದಂಡವಾಗಿ, ಮಾತು ಮತ್ತು ಬರವಣಿಗೆಗಳಲ್ಲಿ ಕನ್ನಡ ಭಾಶೆಯ ಸಮರ್ಥವಾದ ಬಳಕೆ ಮತ್ತು 'ಸಾಹಿತ್ಯದ ರಸಗ್ರಹಣ' ಮುಖ್ಯವಾಗುವಂತೆ ಪಠ್ಯಕ್ರಮ, ಬೋಧನಾ ವಿಧಾನ, ಪರೀಕ್ಶೆ ಪದ್ಧತಿಗಳು ಪರಸ್ಪರ

ಪೂರಕವಾಗಿರಬೇಕು ಎನ್ನುತ್ತಾರೆ. ಪ್ರಾಚೀನ ಪಠ್ಯಗಳ ಪ್ರಾಧಾನ್ಯತೆ ಕಡಿಮೆ ಆಗಬೇಕು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರೂ, ಸಾಹಿತ್ಯ ಪ್ರಕಾರದ ವಿಶಿಷ್ಟ ಲಕ್ಷಣಗಳು ಮತ್ತು ಅವನ್ನು ಅರ್ಥ ಮಾಡಿಕೊಳ್ಳುವ(Understanding Literature) ವಿಧಾನಗಳಿರಬೇಕು. ವಿದ್ಯಾರ್ಥಿ ಸಕ್ರಿಯವಾಗುವಂತೆ, ಅಧ್ಯಾಪಕರು ಪಾಠ ಮಾಡಲು ಒಂದು ಭಾಗ, ವಿದ್ಯಾರ್ಥಿಗಳ ಸ್ವಂತ ಅಭ್ಯಾಸಕ್ಕೆಂದು ಒಂದು ಭಾಗವಿದ್ದು, ಇದಕ್ಕೆ ಅನುಗುಣವಾಗಿ ಪಠ್ಯಕ್ರಮ, ಬೋಧನೆ ಮತ್ತು ಪರೀಕ್ಷೆಗಳನ್ನು ರೂಪಿಸುವ 'ಹಕ್ಕು' ಅಧ್ಯಾಪಕರಿಗೆ ದೊರೆಯಬೇಕು. ವಿಜ್ಞಾನದ ಪ್ರಯೋಗ ತರಗತಿಗಳಿರುವಂತೆ, 'ಪ್ರಾಯೋಗಿಕ ವಿಮರ್ಶೆ'ಯ ತರಗತಿಯೊಂದಿರಬೇಕು ಎನ್ನುವ ಇವರು, ಪಠ್ಯಪುಸ್ತಕವೆಂದು ಆಯ್ಕೆಯಾಗುವ ಕೃತಿಗಳು 'ಸಾಹಿತ್ಯ ವಿಮರ್ಶೆಯ ಕ್ಷೇತ್ರ'ದಲ್ಲಿ ಮನ್ನಣೆ ಪಡೆದಿರಬೇಕು. ಅಪ್ರಸಿದ್ಧ ಲೇಖಕರು ಅನುವಾದಗಳ ಮೂಲಕ ಪಠ್ಯಕ್ರಮಗಳೊಳಗೆ ನುಸುಳುವಂತಿರಬಾರದು. ಹಾಗೂ ಜೀವನ ಚರಿತ್ರೆ, ಆತ್ಮ ಚರಿತ್ರೆ, ಪ್ರವಾಸ ಕಥನದಂತಹ ಬರಹಗಳು ಸಾಹಿತ್ಯ ಕೃತಿಯ ವಿಶಿಷ್ಟ ಅನುಭವನ್ನು ಕೊಡುವುದಿಲ್ಲ ಮತ್ತು ಭಾಶಾ ಸಾಮರ್ಥ್ಯವನ್ನು ಬೆಳೆಸುವುದಿಲ್ಲವಾದ್ದರಿಂದ ಪಠ್ಯವಾಗದಿದ್ದರೆ ಒಳ್ಳೆಯದು ಎಂದು ಅಭಿಪ್ರಾಯ ಪಡುತ್ತಾರೆ. ಬಹಳ ಮುಖ್ಯವಾಗಿ ಇದರಿಂದಾಗಿ ಸೃಷ್ಟಿಯಾಗಿರುವ ಖಾಸಗಿ ಪ್ರಕಾಶಕರ ಪ್ರವೇಶ ಮತ್ತು ವಿದ್ಯಾರ್ಥಿಗಳು ಅಗ್ಗದ ಗೈಡುಗಳ ಮೊರೆಹೋಗುವುದನ್ನು ತಪ್ಪಿಸಬೇಕು ಎಂಬ ಅಭಿಪ್ರಾಯಗಳನ್ನು ಇಲ್ಲಿ ವ್ಯಕ್ತಪಡಿಸುತ್ತಾರೆ.



**ಹಳಗನ್ನಡ ಬೋಧನೆಯ ಸಮಸ್ಯೆಗಳನ್ನು** ಕುರಿತು ಮಾತನಾಡುತ್ತ ಎಂ.ವಿ. ಸತ್ಯನಾರಾಯಣ; ಕನ್ನಡ ಅಭ್ಯಾಸದ ಗುರಿ, ಸಾಹಿತ್ಯ ಕೃತಿಗಳ ಬಗ್ಗೆ ಆಸಕ್ತಿ, ವೈಚಾರಿಕ ಮನೋಧರ್ಮ, ತಪ್ಪಿಲ್ಲದಂತೆ ನಿತ್ಯ ವ್ಯವಹಾರದಲ್ಲಿ ಭಾಶೆಯನ್ನು ಬಳಸಲು ಅವಕಾಶ, 'ಪುರಾಣ ಪೂರ್ವಕಥೆಗಳ ಜ್ಞಾನ'ಎನ್ನುತ್ತಾರೆ. ಕವಿ ಹೃದಯವನ್ನು ಬಿಚ್ಚಿ ತೋರಿಸಲು, ಕಾವ್ಯೋತ್ಸಾಹವನ್ನು ಹುಟ್ಟಿಸಲು 'ಸಂಸ್ಕೃತ ಭಾಶೆಯ ಜ್ಞಾನ'ದ ಬಗ್ಗೆ ಕನ್ನಡ ಅಧ್ಯಾಪಕರಿಗೆ ವಿಶೇಶ ತರಬೇತಿ ನೀಡಬೇಕು. ಈ ಮೂಲಕ ನಮ್ಮ ಜೀವನ ಸಂಸ್ಕೃತಿಯ ಭಾಗವಾಗಿ 'ಪರಂಪರೆಯಿಂದ ಬಂದಿರುವ ಕೃತಿ'ಗಳನ್ನು ಅರ್ಥ-ರಸ-ಧ್ವನಿ-ಛಂದಸ್ಸು-ಅಲಂಕಾರಾದಿ ವಿಶಯಗಳ ಮೂಲಕ ವಿದ್ಯಾರ್ಥಿಗಳಿಗೆ ಪರಿಚಯಿಸುವಂತೆ ಮಾಡಬೇಕು. ಬೋಧನೆಯು 'ವ್ಯಾಕರಣಶಾಸ್ತ್ರಕ್ಕೆ ಪೂರಕ'ವಾಗಿರಬೇಕು ಮತ್ತು ಸಾಮಾನ್ಯ ಭಾಶಾ ಕಲಿಕೆಯಲ್ಲೂ ಐಚ್ಛಿಕವಾಗಿ ಕನ್ನಡ ಸಾಹಿತ್ಯ ಕಲಿಯುವಲ್ಲಿ ಇರುವಷ್ಟೆ ಮಹತ್ವವಿರಬೇಕು ಎನ್ನುತ್ತಾರೆ.

**ಆಧುನಿಕ ಕಾವ್ಯಬೋಧನೆಯ ಸಮಸ್ಯೆ**ಗಳನ್ನು ಕುರಿತ ವಿಚಾರದಲ್ಲಿ ಬಿ.ಎಸ್.ರಾಮಪ್ರಸಾದ್; ಇತರೆ ತರಗತಿಗಳು ಕಲಿಸುವ 'ವ್ಯವಹಾರಿಕ ಜಗತ್ತಿನಾಚೆ'ಗೆ ಇರುವ ಬದುಕಿನ ಕಡೆಗೆ ಸೆಳೆದು ಜೀವನ ಮೌಲ್ಯಗಳನ್ನು ತಿಳಿಸುವುದಾಗಬೇಕು. 'ಕವಿಯ ವೈಯುಕ್ತಿ'ಕ ಅನುಭವ, ನವಿರಾದ ಸೂಕ್ಷ್ಮ ಭಾವನೆಗಳು, ಶೈಲಿ, ತಂತ್ರಗಳ ಕಡೆಗೆ ಗಮನ ಸೆಳೆಯಬೇಕು ಎಂದು ಅಭಿಪ್ರಾಯಿಸಿದ್ದಾರೆ.

**ಸೃಜನೇತರ ಗದ್ಯ** ಕುರಿತಂತೆ ಕ.ನಂ. ನಾಗರಾಜು; 'ನಿರೂಪಣೆಯ ಏಕತಾನತೆ'ಯಿಂದಾಗಿ ವಿದ್ಯಾರ್ಥಿಗಳ ಆಸಕ್ತಿಯನ್ನು ಹಿಡಿದಿಡುವುದರಲ್ಲಿ ಬೋಧನೆಯು ಸಫಲವಾಗುವುದಿಲ್ಲ. ಇವನ್ನು 'ಮನಮುಟ್ಟುವಂತೆ' ಬೋಧಿಸುವುದು ಅಸಾಧ್ಯ. ಆದ್ದರಿಂದಾಗಿ ಭಾಶೆಯ ಹುಟ್ಟು, ಬೆಳವಣಿಗೆ, ಸ್ವರೂಪವನ್ನು ತಿಳಿಸುವ ಲೇಖನಗಳನ್ನು ಇರಿಸಬೇಕು. ಕಲೆ, ಸಂಸ್ಕೃತಿ, ಪರಂಪರೆಯನ್ನು ತಿಳಿಸಿಕೊಡುವ ಲೇಖನಗಳಿರಬೇಕು ಎಂದು ಪ್ರತಿಕ್ರಿಯಿಸುತ್ತಾರೆ. ತರಗತಿಗೆ ಹಾಜರಾತಿ ಕಡಿಮೆ, ಆದ್ದರಿಂದಾಗಿ ಈ ತರಗತಿಗಳಲ್ಲಿ ವಿದ್ಯಾರ್ಥಿಗಳನ್ನು ಆಕರ್ಶಿಸುವುದು ಹೇಗೆ, ತರಗತಿಗಳ ಹೊರಗಿದ್ದುಕೊಂಡು ವಿದ್ಯಾರ್ಥಿಗಳು 'ಪಾಸಾಗುವುದನ್ನು ತಡೆಯುವುದು' ಹೇಗೆ, ಪಠ್ಯಪುಸ್ತಕ ಮತ್ತು ಬೋಧನೆಯನ್ನು 'ಆಶ್ರಯಿಸುವಂತೆ' ಮಾಡುವುದು ಹೇಗೆ ಎಂಬ ಪ್ರಶ್ನೆಗಳನ್ನು ಮುಂದಿಡುತ್ತಾರೆ. **ಶ್ರೀನಿವಾಸ ಶರ್ಮ**ರು ಸಹ, ಕಲಿಕಾರ್ಥಿಗಳು ಇಡೀ 'ಸಾಹಿತ್ಯ ಪರಂಪರೆ ಮತ್ತು ಭಾಶೆಯ ಪರಂಪರೆ'ಯನ್ನು ಅರ್ಥಮಾಡಿಕೊಳ್ಳಲು ಅನುವಾಗುವಂತೆ ಪಠ್ಯಕ್ರಮವಿರಬೇಕು ಮತ್ತು ಭಾರತೀಯ ಕಾವ್ಯ ಮೀಮಾಂಸೆಯ ಹಿನ್ನೆಲೆಯಲ್ಲಿ ಅದನ್ನು ಬೋಧಿಸಬೇಕು. ಭಾಶೆಯ ದೃಶ್ಟಿಯಿಂದ ಶಬ್ಧಮಣಿದರ್ಪಣ ಪ್ರಧಾನವಾದ ವಿಶಯವಾಗಬೇಕು ಎನ್ನುತ್ತಾರೆ.

**ಪ್ರಶ್ನೆಪತ್ರಿಕೆ ಮತ್ತು ಮೌಲ್ಯಮಾಪನ** ಕುರಿತು ಮಾತನಾಡುತ್ತ ಅ.ರಾ. ಮಿತ್ರ; ಪ್ರಶ್ನೆಗಳು ಸಾರಾಂಶದ ಕಡೆಗೆ ಮುಖಮಾಡಿವೆ. ಸ್ವತಂತ್ರ ಸ್ಪಂದನೆಗೆ ಅವಕಾಶವಾಗಬೇಕು. ಇಂಥ ಪ್ರಶ್ನೆಗೆ ಇಂತಿಶ್ಟು ಸಾಲುಗಳ ಉತ್ತರ ಇರಬೇಕೆಂಬ ತಿಳುವಳಿಕೆ ಇದೆ. ಇದರಿಂದ 'ಹೆಚ್ಚು ಬರೆದರೆ ಹೆಚ್ಚು ಅಂಕ' ಎಂಬ ತಿಳುವಳಿಕೆ ವಿದ್ಯಾರ್ಥಿಗಳಲ್ಲಿದೆ. ಮೌಲ್ಯಮಾಪನ ಮೂಡಿಸಿರುವ ಇಂಥ ಭ್ರಮಾತ್ಮಕ ಧೋರಣೆಯನ್ನು ತೊಡೆಯಬೇಕು. ನಿರ್ಧಿಶ್ಟ ಪ್ರಮಾಣಗಳನ್ನು ಅನುಸರಿಸದ 'ವ್ಯಕ್ತಿಗತ ಮೌಲ್ಯಮಾಪನ'ವನ್ನು ಬದಲಾಯಿಸಬೇಕು. ಉತ್ತರಪತ್ರಿಕೆಗಳನ್ನು ವಿದ್ಯಾರ್ಥಿಗಳಿಗೆ ಹಿಂತಿರುಗಿಸುವ ಪದ್ದತಿಯನ್ನು ಕಡ್ಡಾಯಗೊಳಿಸಿ ಜಾರಿಮಾಡಬೇಕು. ಆಯಾಯ ಪಠ್ಯಗಳನ್ನು ಓದಿ

ಬೋಧಿಸದವರೂ ಮೌಲ್ಯಮಾಪನ ಮಾಡುವಂತಾಗಿದೆ ಎಂದು ತಮ್ಮ ಅಭಿಪ್ರಾಯಗಳನ್ನು ಮಂಡಿಸುತ್ತಾರೆ.

ಪಠ್ಯಕ್ರಮ, ಬೋಧನೆ, ಪ್ರಶ್ನೆಪತ್ರಿಕೆ, ಪರೀಕ್ಷೆ ಮತ್ತು ಮೌಲ್ಯಮಾಪನ ಕುರಿತ ವಿಚಾರಗಳು ಈ ವಿಚಾರ ಸಂಕಿರಣದಲ್ಲಿ ಸಹ ಸಾಹಿತ್ಯಪಠ್ಯಗಳನ್ನು ಮುಖ್ಯಮಾಡಿಕೊಂಡೇ ವ್ಯಕ್ತವಾಗಿರುವುದನ್ನು ಗಮನಿಸಬಹುದಾಗಿದೆ. ಈ ಕಾರಣವಾಗಿ, ಮುಖ್ಯವಾಗಿ ಇಲ್ಲಿ ಪ್ರಸ್ತಾಪಿತವಾಗಿರುವ ಬಹುಪಾಲು ವಿಶಯಗಳು ವಿದ್ಯಾರ್ಥಿಯನ್ನು ಅಂಚಿನಲ್ಲಿರಿಸಿ ಸಾಹಿತ್ಯವನ್ನು ಓದಿಕೊಂಡ ಬೋಧಕರ ದೃಶ್ಟಿಯಿಂದ ಪ್ರಸ್ತಾಪಿಸಿರುವುದು ಗಮನಿಸಬೇಕಾದ ಅಂಶವಾಗಿದೆ. ಇದಕ್ಕಾಗಿ ಕಲಿಕೆಯ ಮಾನದಂಡಗಳಿಗಿಂತ ಸಾಹಿತ್ಯ ವಿಮರ್ಶೆಯ ಮಾನದಂಡಗಳನ್ನೆ ಬಳಸಲಾಗಿದ್ದು ಅಂಥ ಮಾತುಗಳಲ್ಲಿ ನಿರೂಪಿಸಲ್ಪಟ್ಟಿರುವಂತೆ ಕನ್ನಡ ಭಾಶೆಯ ಕಲಿಕೆಯೆಂದರೆ ಕನ್ನಡ ಸಾಹಿತ್ಯದ ಬಗೆಗಿನ ತಿಳುವಳಿಕೆಯೇ ಎಂಬುದು ಇಲ್ಲಿ ಸ್ಪಶ್ಟವಾಗಿ ಕಾಣುತ್ತದೆ. ಕನ್ನಡ ಭಾಶಿಕ ಕಲಿಕೆಯೆಂದರೆ **ಸಾಹಿತ್ಯದ ಮೂಲಕ ಮಾತ್ರ ಪಡೆದುಕೊಳ್ಳುವ ಸಾಮರ್ಥ್ಯ** ಅಥವ ಇವೆರಡೂ **ಒಂದೆ**, ಅಥವಾ ಪದವಿ ಹಂತದಲ್ಲಿ ಭಾಶಿಕ ತಿಳುವಳಿಕೆಯನ್ನು ಸಾಹಿತ್ಯ ಅಲ್ಲದ ಕೌಶಲ್ಯದ ನೆಲೆಗಳಲ್ಲಿ ಗ್ರಹಿಸುವ ಅಗತ್ಯವಿಲ್ಲ ಎಂಬ ಅಭಿಪ್ರಾಯ ಅನಧಿಕೃತವಾಗಿ ಚಾಲನೆಯಲ್ಲಿದೆ ಎಂಬಂತೆಯೂ ಇದನ್ನು ಗ್ರಹಿಸಬಹುದಾಗಿದೆ.

೨) ಬಸವರಾಜ ಕಲ್ಗುಡಿಯವರು ನಿರ್ದೇಶಕರಾಗಿದ್ದ ಸಂದರ್ಭದಲ್ಲಿ ಕನ್ನಡ ಪಠ್ಯಕ್ರಮ ಬದಲಾವಣೆಯ ಕಾರಣವಾಗಿ ೨೦೦೭ ರ ಮೇ ತಿಂಗಳಿನಲ್ಲಿ ಒಂದು ದಿನದ ಕಾರ್ಯಾಗಾರ ನಡೆಸಿ **ಹೊಸ** ಪಠ್ಯಕ್ರಮದ ಅಗತ್ಯಗಳನ್ನು ಬದಲಾಗುತ್ತಿರುವ ಸಾಮಾಜಿಕ ವಿದ್ಯಮಾನಗಳ ಹಿನ್ನೆಲೆಯಲ್ಲಿ ನಿರೂಪಿಸಿಕೊಳ್ಳಲಾಗಿದೆ. ಬಸವರಾಜ ಕಲ್ಗುಡಿ"ಯವರು ಪ್ರಧಾನ ಸಂಪಾದಕರಾದ ಈ ಯೋಜನೆಗೆ ಕನ್ನಡಪರ ಚಿಂತಕರು, ಅನುಭವಿ ಕನ್ನಡ ಅಧ್ಯಾಪಕರ ಸಮಿತಿಯೊಂದು ಸಲಹೆಗಾರರಾಗಿ ಕೆಲಸ ಮಾಡಿದೆ. ಯು.ಆರ್.ಅನಂತಮೂರ್ತಿ, ಕೆ.ವಿ.ನಾರಾಯಣ, ಕೀ.ರಂ.ನಾಗರಾಜು. ಎಚ್.ಎಸ್.ರಾಘವೇಂದ್ರರಾವ್, ಓ.ಎಲ್. ನಾಗಭೂಶಣಸ್ವಾಮಿ. ರಹಮತ್ ತರೀಕೆರೆ ಸಲಹಾ ಸಮಿತಿಯಾಗಿದ್ದ ಈ ಯೋಜನೆಯಲ್ಲಿ ಬೆಂಗಳೂರು ವಿಶ್ವವಿದ್ಯಾಲಯ ವ್ಯಾಪ್ತಿಯ ವಿವಿಧ ಕಾಲೇಜುಗಳ ಅಧ್ಯಾಪಕರು ನೇರವಾಗಿ ಪಠ್ಯಸಂಪಾದನೆ ಮತ್ತು ಪಠ್ಯಯೋಜನೆಯ ಹೊಣೆ ಹೊತ್ತು ಕಾರ್ಯನಿರ್ವಹಿಸುವಂತೆ ಇದನ್ನು ರೂಪಿಸಲಾಗಿದೆ. ಈ ಯೋಜನೆಯ ಥಿಂಕ್‌ಟ್ಯಾಂಕಾಗಿ ಕನ್ನಡ ಭಾಶೆ ಮತ್ತು ಸಂಸ್ಕೃತಿ ತಜ್ಞ ಡಾ. ಕೆ.ವಿ. ನಾರಾಯಣ ಅವರು ಪಠ್ಯಕ್ರಮ ರೂಪಕರೊಂದಿಗೆ ನಿರಂತರವಾದ ಸಂಪರ್ಕ ಮತ್ತು ಶ್ರಮದಿಂದ ರೂಪಿಸಲಾದ ಪಠ್ಯಕ್ರಮ

ಇದಾಗಿದೆ. ಈ ಹೊಸ ಪಠ್ಯಕ್ರಮದ ಹಿಂದಿನ ಉದ್ದೇಶಗಳನ್ನು; ತೀವ್ರಗತಿಯಲ್ಲಿ ಬದಲಾಗುತ್ತಿರುವ ನಮ್ಮ ಬದುಕುಗಳು, ವಿದ್ಯಾರ್ಥಿಗಳ ಅಪೇಕ್ಷೆ, ನಿರೀಕ್ಷೆಗಳು, ವಿದ್ಯುನ್ಮಾನ ಯುಗದ ಹೊಸ ಹೊಸ ತಂತ್ರಜ್ಞಾನಗಳ ಮೂಲಕ ಸಿಗುತ್ತಿರುವ ಮಾಹಿತಿ, ಮನರಂಜನೆ ಮೌಲ್ಯಗಳು, ಬೋಧಕ ಪಾತ್ರವು ಸುಗಮಕಾರ (ಫೆಸಿಲಿಟೇಟರ್)ನ ನೆಲೆಗೆ ಬದಲಾಗುತ್ತಿರುವ ವಿದ್ಯಮಾನ, ದಮನಿತ ಸಮುದಾಯಗಳ ಏರುತ್ತಿರುವ ದನಿ, ಜಾಗತೀಕರಣದ ಸಹಸ್ರ ಬಾಹುಗಳು ಹಳ್ಳಿಹಳ್ಳಿಗಳ ಗೂಡಂಗಡಿಗಳನ್ನು ತಲುಪುತ್ತಿರುವ-ನಗರದ ಗೂಡಂಗಡಿಗಳು ಹೇಳಹೆಸರಿಲ್ಲದಂತೆ ಮಾಯವಾಗಿ ವಿಸ್ತರಿಸುತ್ತಿರುವ ಶಾಪಿಂಗ್‌ಮಾಲುಗಳ ಯಜಮಾನಿಕೆ, ಮಾರುಕಟ್ಟೆ ಯುಗದ ನಿರ್ಲಜ್ಜ ಜಾಹೀರಾತುಗಳ ಅಬ್ಬರ, ಈ ಹಿನ್ನೆಲೆಯಲ್ಲಿ ಹೃದಯ ಸಂವಾದಗಳ ಸೂಕ್ಷ್ಮತೆಗೆ ಸ್ಪಂದಿಸುವ ಜರೂರನ್ನು ಸ್ಪಷ್ಟಪಡಿಸಿಕೊಳ್ಳಲಾಗಿದೆ. ತರಗತಿಯಲ್ಲಿ ಹೇಳುವ ವಿಶಯಗಳು, ವಿಶಯಗಳ ಬಗೆಗಿನ ದೃಶ್ಟಿಕೋನ, 'ಅನುಸಂಧಾನದ ವಿಧಾನ'ಗಳು ಎಲ್ಲವೂ ಈ ಹೊತ್ತಿಗೆ ತಕ್ಕಂತೆ ಬದಲಾಗಬೇಕೆಂಬ ಆಶಯವನ್ನು ವ್ಯಕ್ತಪಡಿಸಲಾಗಿದೆ. ಈ ಹಿನ್ನೆಲೆಯಲ್ಲಿ; ಜಾಗತಿಕವಾಗಿ ಹೊಸಹೊಸ ಚಿಂತನಾಕ್ರಮಗಳು ಪ್ರವೃತ್ತಗೊಳ್ಳುತ್ತಿರುವುದರ ನೆಲೆಯಲ್ಲಿ ಭಾಶೆ ಮತ್ತು ಸಾಹಿತ್ಯಗಳನ್ನು 'ನೋಡುವ ಕ್ರಮ'ವನ್ನು ಬದಲಾಯಿಸುವುದು. ಸಾಹಿತ್ಯಕ್ಕೂ ಬದುಕಿಗೂ ಇರುವ ಸಂಬಂಧ, ಅದರಿಂದ ಪಡೆದುಕೊಳ್ಳಬೇಕಾದ್ದು ಏನು, ಕಲಿಯಬೇಕಾದ್ದೇನು ಎಂಬುದನ್ನು ಸ್ಪಶ್ಟಪಡಿಸಿಕೊಳ್ಳುವುದು. ಪಠ್ಯಪುಸ್ತಕದಲ್ಲಿ ಪಠ್ಯವಶ್ಟೇ ಅಲ್ಲದೆ ಅದನ್ನು ವ್ಯವಸ್ಥಿತವಾಗಿ ಬೋಧಿಸಲು ಬೇಕಾದ 'ಪೂರಕಸಾಮಗ್ರಿ'ಯನ್ನು ನೀಡುವುದು ಎನ್ನಲಾಗಿದೆ. ಅಲ್ಲದೆ ಎಲ್ಲ ಕಾಲೇಜುಗಳ ಕನ್ನಡ ತರಗತಿಗಳಲ್ಲೂ 'ಒಂದೇ ವಿನ್ಯಾಸ'ದ ಮತ್ತು 'ಒಂದೇ ಗುಣಮಟ್ಟ'ದ ಪಾಠ ನಡೆಯುವಂತೆ ಯೋಜಿಸುವುದನ್ನು ಗುರಿಯಾಗಿಸಿಕೊಳ್ಳಲಾಗಿದೆ. ಸಂಸ್ಕೃತಿ ಅಧ್ಯಯನ, ಭಾಶೆಯ ಬಳಕೆಯ ನೆಲೆಗಳು ಸೂಕ್ಷ್ಮಗೊಳ್ಳುವ ಬಗ್ಗೆ ಸಾಹಿತ್ಯದಿಂದಶ್ಟೆ ಸಿಗಬಹುದಾದ ಮಹತ್ವ, ಮಾತು, ಚರ್ಚೆ, ವಿಶ್ಲೇಶಣೆ, ಬರವಣಿಗೆಯನ್ನು ಸಮಕಾಲೀನಗೊಳಿಸುವ, 'ತಮ್ಮ ವಿಚಾರಗಳ ಅಭಿವ್ಯಕ್ತಿಗೆ ತಮ್ಮ ಭಾಶೆಯನ್ನು ಸಜ್ಜುಗೊಳಿಸುವ' ಸಕ್ರಿಯ ಕೌಶಲಗಳನ್ನು ಕಲಿಕಾರ್ಥಿಗಳಲ್ಲಿ ಬೆಳೆಸುವುದು. ಸಾಹಿತ್ಯವು ಕಾಲೇಜಿನಲ್ಲಿ ಓದುವ ಒಂದು ವಿಶಯ ಮಾತ್ರವಲ್ಲ, ಬದಲಾಗಿ 'ಜೀವನಪೂರ್ತಿ ಜೊತೆಗಿರಿಸಿಕೊಳ್ಳಲು ಸಾಧ್ಯವಿರುವ ಒಂದು ಅಭಿರುಚಿ' ಎಂಬ ತಿಳುವಳಿಕೆಯ ನಿರ್ಮಾಣ ಮಾಡುವುದು. ಅದಕ್ಕಾಗಿ ಈ ಪಠ್ಯದ ಬದಲು ಆ ಪಠ್ಯವನ್ನು ಹಾಕು ಎಂಬ ವಾತಾವರಣವನ್ನು ಬದಲಿಸುವುದು ಎಂದು ವಿವರಿಸಿಕೊಳ್ಳಲಾಗಿದೆ.

ಈ ಕಾರಣವಾಗಿ ವಿಶಯ(ಥೀಮ್) ಆಧಾರಿತ ಪಠ್ಯಕ್ರಮವನ್ನು ರೂಪಿಸಲಾಗಿದ್ದು, ಈ ಮೂಲಕ ಪದವಿ ವಿದ್ಯಾರ್ಥಿಗಳ ಮನಸ್ಸಿಗೆ ಆಪ್ತವಾಗುವ ಸಂಗತಿಗಳ ಸಂವಾದ, ವರ್ತಮಾನಕ್ಕೆ ಪ್ರಸ್ತುತವಾಗುವ ವಿಚಾರಗಳು, ಸಂಸ್ಕೃತಿಗೆ ಸಂಬಂಧಿಸಿದ ವಿಶಯಗಳು, ದರ್ಶನ ಮುಂತಾದ ಅಮೂರ್ತ ಭಾವಗಳ(ಕಾಲ, ಸೃಜನಶೀಲತೆ) ಗ್ರಹಿಕೆಗಳನ್ನು ಪಠ್ಯಕ್ರಮದೊಳಗೆ ತರಬೇಕೆಂದು ಆಶಿಸಲಾಗಿದೆ. ಇದನ್ನು ಕಲಿಕಾರ್ಥಿಗಳ ಅನುಭವದ ಭಾಗವಾಗುವಂತೆ ಮಾಡಬೇಕೆಂದು ಆಶಯವನ್ನು ವ್ಯಕ್ತಪಡಿಸಲಾಗಿದೆ. ಇದಕ್ಕಾಗಿ, ಪಠ್ಯ ಮತ್ತು ಪೂರಕ ಪಠ್ಯಗಳ ಪರಿಕಲ್ಪನೆಯನ್ನು ಹುಟ್ಟುಹಾಕಿದ್ದು, ಇವುಗಳ ನಡುವಿನ ಸಂಬಂಧಾಂತರಗಳನ್ನು ಸೂಕ್ಷ್ಮವಾಗಿ ಗ್ರಹಿಸುವುದರ ಮೂಲಕ ವಿದ್ಯಾರ್ಥಿಯು ಹೊಸ ಚಿಂತನೆ ಮತ್ತು ಸೃಜನಶೀಲತೆಯನ್ನು ಕಟ್ಟಿಕೊಳ್ಳಬೇಕೆಂಬ ಉದ್ದೇಶವನ್ನು ಇರಿಸಿಕೊಳ್ಳಲಾಗಿದೆ. ಪಠ್ಯಕ್ರಮದ ಪ್ರತಿ ಅಧ್ಯಾಯಗಳನ್ನು 'ಪೂರ್ವ ಪಠ್ಯ, ಪಠ್ಯ, ಪೂರಕ ಪಠ್ಯ ಮತ್ತು ಅಭ್ಯಾಸ' ಭಾಗಗಳಾಗಿ ಯೋಜಿಸಲಾಗಿದ್ದು, ಪೂರ್ವ ಪಠ್ಯವು ಮುಖ್ಯಪಠ್ಯದ ಭಾವ ಸಂದರ್ಭವನ್ನು, ಪೂರಕ ಪಠ್ಯಗಳು ಮುಖ್ಯಪಠ್ಯದ ಆಶಯದ ವಿಸ್ತರಣೆಯನ್ನು ಮಾಡಿ ವಿದ್ಯಾರ್ಥಿಯು ವಿಸ್ತೃತ ಓದಿಗೆ ತೆರೆದುಕೊಳ್ಳಲು ಸಹಾಯ ಮಾಡುತ್ತದೆ. ಅಭ್ಯಾಸ ಭಾಗದಲ್ಲಿ ವಿದ್ಯಾರ್ಥಿಗಳ ಗ್ರಹಿಕೆ, ವಿವರಣಾ ಸಾಮರ್ಥ್ಯ, ವಿಮರ್ಶೆ ಮತ್ತು ಸ್ವಂತ ಅನುಭವದೊಂದಿಗೆ ತುಲನೆಯ ಸಾಮರ್ಥ್ಯವನ್ನು ಒಳಗೊಂಡ ಪ್ರಶ್ನೆಗಳಿದ್ದು ತರಗತಿಯನ್ನು ಕ್ರಿಯಾಶೀಲವಾಗಿ, ಲವಲವಿಕೆಯಿಂದಿಡುತ್ತವೆ ಎಂದು ಈ ಸಂದರ್ಭದ ಆಶಯಗಳು ವ್ಯಕ್ತವಾಗಿವೆ.

ತರಗತಿಯಲ್ಲಿ ವಿದ್ಯಾರ್ಥಿಗಳು ಪ್ರಮಾಣೀಕೃತ ಭಾಶೆಯನ್ನೇ ಬಳಸುವಂತೆ ಒತ್ತಾಯಿಸದೆ, ಕಲಿಕಾರ್ಥಿಗಳು ತಮ್ಮ ತಮ್ಮ ವಿಚಾರಗಳನ್ನು ಮುಕ್ತವಾಗಿ ಅಭಿವ್ಯಕ್ತಿಸುವಂತ ವಾತಾವರಣವನ್ನು ನಿರ್ಮಿಸಬೇಕು ಎಂಬ ಅಭಿಪ್ರಾಯ ವ್ಯಕ್ತವಾಗಿದೆ. ಆದರೂ ಭಾಶೆಯ ಕಲಿಕೆಯ ದೃಶ್ಟಿಯಿಂದ ಅಶ್ಟೇನೂ ಮಹತ್ವವನ್ನು ಹೊಂದಿಲ್ಲದಿರುವುದು, ಸಾಮಾಜಿಕವಾಗಿ ಭಿನ್ನ ಮತ್ತು ಅಸಮಾನ ವಲಯಗಳ ನಡುವೆ ಸಂವಾದ ಸಾಧ್ಯತೆಯನ್ನು ಸೃಶ್ಟಿಸಿದ ಈ ಹೊಸ ಯೋಜನೆಯ ಪಠ್ಯಗಳಲ್ಲೂ ಕಾಣುವ ಅಂಶವಾಗಿದೆ. ಆದರೆ, ಹಿಂದಿನ ಪಠ್ಯಕ್ರಮ ಪರಂಪರೆಯನ್ನು ಸಮಗ್ರವಾಗಿ ಬದಲಾಯಿಸುವ ಹೊಸ ಕ್ರಮವೊಂದು ಈ ಪಠ್ಯಕ್ರಮದ ಮೂಲಕ ಜಾರಿಯಾಗಿರುವುದನ್ನು ಗಮನಿಸಬಹುದಾಗಿದೆ. ಅಲ್ಲದೆ ಈ ಪಠ್ಯಕ್ರಮದ ಮಹತ್ವದ ವಿಚಾರವೆಂದರೆ, ಲೇಖಕ ಕೇಂದ್ರಿತ ಪಠ್ಯಗಳು ಹಿಂದೆ ಸರಿದು ಪಠ್ಯ ಪಠ್ಯಗಳ ನಡುವಿನ ಸಂವಾದ ಮುಖ್ಯವಾಗಿರುವುದು. ಖಾಸಗಿ ಪ್ರಕಾಶಕರು ಸಂಪೂರ್ಣವಾಗಿ ಇಲ್ಲವಾಗಿದ್ದು ಲೇಖಕ, ಪ್ರಕಾಶಕ ಮತ್ತು ಪಠ್ಯನಿರ್ಧಾರ ಮಂಡಳಿಗಳನ್ನು ಪರಸ್ಪರ ಪ್ರಭಾವಿಸುವ ಅಂಶಗಳು ಇಲ್ಲದಂತಾಗಿರುವುದು. ಈ ಬಗೆಯ ಅಧಿಕಾರ

ಸಂಬಂಧಗಳನ್ನು ಕನ್ನಡ ಪಠ್ಯಕ್ರಮದ ಪರಂಪರೆಯಲ್ಲಿಯೇ ಮೊದಲಿಗೆ ಒಡೆಯುವುದರ ಮೂಲಕ ಸಾಮಾಜಿಕವಾದ ಅವಕಾಶಗಳು ವಿಸ್ತೃತವಾಗಿ ಬಿಚ್ಚಿಕೊಂಡಿರುವುದು ಈ ಪಠ್ಯಕ್ರಮಗಳಲ್ಲಿ ಕಾಣುವ ಪ್ರಮುಖ ಅಂಶವಾಗಿದೆ. ಇದಕ್ಕಾಗಿ ಬಹುಮುಖಿ ಸಾಮಾಜಿಕ ಪಠ್ಯ-ಸಾಹಿತ್ಯ ಮತ್ತು ಇತರೆ ಬರವಣಿಗೆ-ಗಳ ಮೂಲಕ ಪಠ್ಯಕ್ರಮವೊಂದು ಇಲ್ಲಿ ಅನಾವರಣಗೊಂಡಿದೆ. ಆದ್ದರಿಂದಾಗಿಯೆ ಇದು ಭಾಶಿಕ ಕೌಶಲ್ಯಗಳ ಕಲಿಕೆಯನ್ನೆ ಮುಖ್ಯ ಮಾಡಿಕೊಂಡಿಲ್ಲದಿದ್ದರೂ ಕೌಶಲಗಳ ವಿಭಿನ್ನ ಮಾದರಿಗಳಿಗೆ(ಸಾಹಿತ್ಯವೂ ಸೇರಿದಂತೆ ಎಲೆಕ್ಟ್ರಾನಿಕ್ ಮಾಧ್ಯಮ ಮತ್ತು ಇತರೆ) ತೆರೆದುಕೊಳ್ಳುವ ಒಂದು ಮಹತ್ವದ ಪ್ರಯತ್ನವಾಗಿರುವುದನ್ನು ಕೆಲಮಟ್ಟಿಗಾದರೂ ಕಾಣಬಹುದಾಗಿದೆ.

**ಸಿ) ಮಂಗಳೂರು ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿ:**

೧) ದಕ್ಷಿಣ ಕನ್ನಡ ಜಿಲ್ಲಾ ಬಂಡಾಯ ಸಾಹಿತ್ಯ ಸಂಘಟನೆಯು ಉಡುಪಿಯಲ್ಲಿ ೧೯೮೪ ರಲ್ಲಿ **ಕನ್ನಡ ಭಾಶಾ ಪಠ್ಯ ಪುಸ್ತಕಗಳು** ಕುರಿತಂತೆ ಒಂದು ಸೆಮಿನಾರನ್ನು ಸಂಘಟಿಸಿದೆ[೬]. ಬದುಕಿನ ವಿವಿಧ ಕ್ಷೇತ್ರಗಳಲ್ಲಿನ ಸಾಮಾಜಿಕ ಸಮಸ್ಯೆಗಳ ಚಿಂತನೆಯ ಹಿನ್ನೆಲೆಯಲ್ಲಿ ನಡೆದಿರುವ ಒಂದು ದಿನದ ಈ ವಿಚಾರ ಸಂಕಿರಣದಲ್ಲಿ ಕ್ರಮವಾಗಿ ಪ್ರಾಥಮಿಕ ಭಾಶೆಯ ಕನ್ನಡ ಪಠ್ಯಗಳು, ಪ್ರೌಢಶಾಲೆಯಲ್ಲಿ ಭಾಶಾ ಬೋಧನೆ ಮತ್ತು ಕಾಲೇಜು ಕನ್ನಡ ಭಾಶಾ ಪಠ್ಯಕ್ರಮವನ್ನು ಕುರಿತ ಮೂರು ಪ್ರಬಂಧಗಳು ಮಂಡನೆಯಾಗಿವೆ.

ನಮ್ಮ ಶಿಕ್ಷಣ ವ್ಯವಸ್ಥೆಯು, ವ್ಯವಸ್ಥೆಯ ನಿರ್ಧಾರಕ್ಕೆ ತಕ್ಕಂತೆ ವಿದ್ಯಾರ್ಥಿಗಳನ್ನು ಒಗ್ಗಿಸುವ ಒಂದು **ಖೆಡ್ಡಾ**. ವಿಮೋಚನಾಸ್ತ್ರವಾಗಬೇಕಾಗಿದ್ದ ಶಿಕ್ಷಣ ವಿದ್ಯಾರ್ಥಿಯ 'ಪ್ರಜ್ಞೆಯ ದಿಗ್ಬಂಧನ'ಕ್ಕೆ ಕಾರಣವಾಗಿದೆ (ಆರ್ಕೆ.ಮಣಿಪಾಲ್) ಎಂದು ಪ್ರತಿಕ್ರಿಯಿಸುತ್ತ, ಪಠ್ಯಪುಸ್ತಕಗಳು 'ವಿದ್ಯಾರ್ಥಿಗಳ ಮೇಲೆ ಹೆಚ್ಚು ಪ್ರಭಾವೀ ಪರಿಣಾಮ'ವನ್ನು ಉಂಟುಮಾಡುವ ಪರಿಕರಗಳೆಂದು ಗಮನಿಸಲಾಗಿದೆ. ಭಾಶೆ ಭಾವಾತ್ಮಕ ಮತ್ತು ವೈಚಾರಿಕ ವ್ಯಕ್ತಿತ್ವದ ಚುಕ್ಕಾಣಿ ಹಿಡಿದಿರುವುದರಿಂದ, ಭಾಶೆ ತನ್ನಿಂದ ತಾನೆ ಸಾಧನವೂ, ಸಾಧ್ಯವೂ ಆಗುತ್ತದೆ. ಆದ್ದರಿಂದ, ಭಾಶಾ ಪಠ್ಯಪುಸ್ತಕವು ಒಂದು ರಾಶ್ಟ್ರದ ಅಧಿಕೃತ ಆಶೋತ್ತರದ ಬೀಜಗರ್ಭವುಳ್ಳ ಸಾಧ್ಯತೆ(ಆರ್. ವಿ. ಭಂಡಾರಿ) ಎಂದು ವಿವರಿಸಿಕೊಳ್ಳಲಾಗಿದೆ. ಜನಪರವಾದ ಶಿಕ್ಷಣ ಎನ್ನುವುದು ಮುಖ್ಯವಾಗಿ ರಾಜಕೀಯ ಸಮಸ್ಯೆ(ಎಂ. ಅನಂತಕೃಷ್ಣ ಹೆಬ್ಬಾರ್)ಯಾಗಿರುವುದರಿಂದಾಗಿ, ಕಾಲೇಜು ಹಂತದ ಸಾಹಿತ್ಯ ಮತ್ತು ಭಾಶಾ ಕಲಿಕೆಯು ಸಂವಿಧಾನದ ಆಶೋತ್ತರಗಳಿಗೆ ಅನುಗುಣವಾಗಿ ಮೌಲ್ಯಗಳನ್ನು ರೂಪಿಸುವ ಪ್ರಬಲ

ಸಾಧನವಾಗಬೇಕು ಎನ್ನಲಾಗಿದೆ. ಸಾಹಿತ್ಯಕ್ಕೆ(ಪ್ರೌಢ ಮತ್ತು ಸಂಕೀರ್ಣ ಸಾಹಿತ್ಯ) ಸ್ಪಂಧಿಸಬಲ್ಲ ಸಂವೇದನೆಯನ್ನು ಬೆಳೆಸಲು ಪಠ್ಯಗಳು ನೆರವಾಗಬೇಕು ಎಂಬ ಅಭಿಪ್ರಾಯ ಇಲ್ಲೂ ವ್ಯಕ್ತವಾಗಿದ್ದು, ದೇಶೀಯ ಭಾಶೆಗಳಿಗೆ ಪೂರಕ ಮತ್ತು ಪೋಶಕವಾಗುವ ರೀತಿಯಲ್ಲಿ ಇಂಗ್ಲಿಶ್ ಪಠ್ಯಕ್ರಮವನ್ನು ರೂಪಿಸಿಕೊಳ್ಳಬೇಕು ಮತ್ತು ಕಾವ್ಯ ಪರಂಪರೆ ಮತ್ತು ಭಾಶೆಯ ದೃಶ್ಟಿಯಿಂದ ಅನೇಕ ಕ್ಶೇತ್ರಗಳಲ್ಲಿ ಕನ್ನಡ ಬಳಸಬೇಕಾಗಿರುವುದರಿಂದ ಆಧುನಿಕ ಸಾಹಿತ್ಯವೂ ಮುಖ್ಯವಾಗಬೇಕು (ಡಿ.ರಘುನಾಥ ರಾವ್) ಎಂಬ ಅಭಿಪ್ರಾಯಗಳು ಇಲ್ಲಿಯೂ ವ್ಯಕ್ತವಾಗಿವೆ.

೨) ಮಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಾಪಕರ ಸಂಘವು ೨೦೦೫ರಲ್ಲಿ ಬದಲಾಗುತ್ತಿರುವ ಸಾಮಾಜಿಕ ಸಾಂಸ್ಕೃತಿಕ ಸಂದರ್ಭವನ್ನು ಮುಖ್ಯಮಾಡಿಕೊಂಡು ಪಠ್ಯಕ್ರಮ ಪರಿಶ್ಕರಣೆಯ ಚಿಂತನೆ ನಡೆಸಿದ್ದು ಈ ಸಂದರ್ಭದಲ್ಲಿ ಪಠ್ಯಕ್ರಮದ ಬದಲಾವಣೆಯ ಉದ್ದೇಶಗಳನ್ನು ಹೀಗೆ ಸ್ಪಶ್ಟಪಡಿಸಿಕೊಳ್ಳಲಾಗಿದೆ; 'ಕನ್ನಡಕ್ಕೆ ಕುತ್ತು ಬಂದಾಗ ಅದನ್ನು ಪ್ರಬಲವಾಗಿ ಎದುರಿಸಿದಂತೆ, ಕನ್ನಡ ಕಲಿಕೆಯನ್ನು ಆಂತರಿಕವಾಗಿ ಬಲಪಡಿಸುವ ಕೆಲಸ ಕೂಡ ಸಮಾನಾಂತರವಾಗಿ ನಡೆಯಬೇಕು. ಕನ್ನಡದಿಂದ ಏನು ಪ್ರಯೋಜನ? ಎಂಬ ಉಡಾಫೆಯ ಮಾತು ಈ ಹೊತ್ತು ಏಳುತ್ತಿದ್ದರೆ, ಕನ್ನಡದಿಂದ ಸಾಧ್ಯವಾಗದ್ದು ಏನು? ಎಂಬ ಪ್ರತಿ ಉತ್ತರವನ್ನು ಕಾರ್ಯದಲ್ಲಿ ಮಾಡಿ ತೋರಿಸಬೇಕು' ಎಂದು ಬದಲಾದ ಸಂದರ್ಭದ ಕನ್ನಡ ಪಠ್ಯಕ್ರಮ ಕುರಿತಾದ ಅಭಿಪ್ರಾಯಗಳು ವ್ಯಕ್ತವಾಗಿವೆ. ಈ ಹಿನ್ನೆಲೆಯಲ್ಲಿ, ಪಠ್ಯವಸ್ತು ಮತ್ತು ಪಠ್ಯವನ್ನು ರೂಪಿಸುವಾಗ, 'ನೂರು ವರ್ಶಗಳ ಹಿಂದೆ ಇಂಗ್ಲೆಂಡ್ ಪ್ರಣೀತ ಕನ್ನಡ ಶಾಲಾ ವ್ಯವಸ್ಥೆಗಾಗಿ ಕಟ್ಟಿದ್ದ ಪಂಜೆ, ಕಾರಂತಾದಿ ಹಿರಿಯರು ಇಂಥ ಸವಾಲುಗಳನ್ನೇ ಎದುರಿಸಿದ್ದರು. ನೂರು ವರುಶದ ಬಳಿಕ ಇನ್ನೊಮ್ಮೆ ಅದೇ ಎದೆಗಾರಿಕೆ ಬೇಕಾದ ಪಲ್ಲಟದ ಹೊತ್ತು ಕಾಲದ ಒಂದು ಆಹ್ವಾನವಾಗಿ ನಮ್ಮೊಂದಿಗೆ ಇದೆ' ಎಂದು ಭಾವಿಸಲಾಗಿದೆ. ಈ ಮೂಲಕ ಜಾಗತೀಕರಣ ಮತ್ತು ಈ ಸಂದರ್ಭದ ವಿದ್ಯಾಸಂಸ್ಥೆಗಳ ಖಾಸಗೀಕರಣದಿಂದಾಗಿ 'ಕನ್ನಡವು ಕಂದಿ ಹೋಗಬಹುದಾದ ಅಪಾಯ'ದ ಸಂಕೇತಗಳನ್ನು ಗುರುತಿಸಿಕೊಂಡು, 'ಪಠ್ಯ ಮತ್ತು ಪಠ್ಯಕ್ರಮಗಳು ಅನುಪಯುಕ್ತ ಎಂಬ ಧೂರ್ತ ಪುಕಾರು' ಹುಟ್ಟಿದಂತೆ, ವಿದ್ಯಾಭ್ಯಾಸವನ್ನು ಗ್ರಾಹಕ ಸಂಸ್ಕೃತಿಯ ಭಾಗವಾಗಿ ನೋಡತೊಡಗಿರುವುದರಿಂದ 'ಕನ್ನಡ ಕಲಿತರೆ ಏನು ಲಾಭ' ಎಂಬ ವ್ಯವಹಾರಿಕ ದೃಶ್ಟಿಯ ಉದ್ಯೋಗ ಮಾರುಕಟ್ಟೆಯು ಕನ್ನಡಕ್ಕೆ ತಳಮಳವನ್ನು ಸೃಶ್ಟಿಸದಂತೆ ಪಠ್ಯಕ್ರಮವನ್ನು ರೂಪಿಸಬೇಕಾದ ಯೋಜನೆಯನ್ನು ನಿರೂಪಿಸಿಕೊಳ್ಳಲಾಗಿದೆ. ಈ ಕಾರಣವಾಗಿ ಕಲಿಯುವ

ವಿದ್ಯಾರ್ಥಿಗೆ ಅರ್ಥಪೂರ್ಣವಾಗುವಂತೆ, ಕಲಿಸುವ ಅಧ್ಯಾಪಕರಿಗೆ ದುಡಿಮೆಯು 'ಅಪೂರ್ವ ಸಾರ್ಥಕತೆ' ಒದಗುವಂತೆ ಪಠ್ಯಕ್ರಮ (ಕರಿಕುಲಂ), ಪಠ್ಯವಸ್ತು(ಸಿಲೆಬಸ್)ಗಳನ್ನು ತರಗತಿ ನಿರ್ವಹಣೆ, ಪರೀಕ್ಷಾಕ್ರಮ ಮತ್ತು ಮೌಲ್ಯಮಾಪನ ವಿಧಾನಗಳನ್ನು ಹೊಸದಾಗಿ ರೂಪಿಸುವುದನ್ನು ಮುಖ್ಯಮಾಡಿಕೊಳ್ಳಲಾಗಿದೆ. ವಿದ್ಯಾರ್ಥಿಯ 'ಅಭಿರುಚಿ, ಮಾನಸಿಕ ಹಿನ್ನೆಲೆ ಮತ್ತು ವ್ಯಕ್ತಿತ್ವದ ಅಗತ್ಯ'ಗಳಿಗೆ ಬೆಲೆ ಕೊಡುವ ಸಲುವಾಗಿ ವಾಣಿಜ್ಯ, ವಿಜ್ಞಾನ, ಮಾನವಿಕ ಕೋರ್ಸುಗಳಿಗೆ ಪ್ರತ್ಯೇಕವಾಗಿ ಪಠ್ಯಗಳನ್ನು ರಚಿಸುವುದು, 'ಆತ್ಮೀಯ ಸಂವಹನ ಸಾಧ್ಯತೆ'ಗಳ ನಿರ್ಮಾಣ, ಉನ್ನತ ಶಿಕ್ಷಣದಲ್ಲಿ ಪಡೆದ ಜ್ಞಾನಪ್ರಾವಿಣ್ಯವನ್ನು 'ಕನ್ನಡ ಭಾಷೆಯಲ್ಲಿ ಕಿಂಚಿತ್ತಾದರೂ ಅಭಿವ್ಯಕ್ತಿ'ಸಲು ಸಾಧ್ಯವಾಗುವಂತೆ ರೂಪಿಸುವ ಆಶಯ ವ್ಯಕ್ತವಾಗಿದ್ದು, 'ವೈಚಾರಿಕ ಕ್ರಾಂತಿ ಭಾಷಾ ತರಗತಿಗಳಲ್ಲಿ ಮಾತ್ರವೇ ಸಾಧ್ಯ' ಎಂಬ ತಿಳುವಳಿಕೆಯನ್ನು ವ್ಯಕ್ತಪಡಿಸಲಾಗಿದೆ. ಈ ಕಾರಣವಾಗಿ ಭಾಷೆಯ ಬಹುರೂಪಿ ಬಳಕೆಯನ್ನು ಕ್ರಿಯಾತ್ಮಕ ಕನ್ನಡ ಮತ್ತು ಸಂವಹನ ಕನ್ನಡ ರೂಪದಲ್ಲಿ ಅಧ್ಯಯನದ ವಾತಾವರಣಕ್ಕೆ ತರುವುದು, ಈ ಮೂಲಕ ಸಾಮಾಜಿಕ ನ್ಯಾಯ ಒದಗಿಸುವುದು ಎಂಬುದನ್ನು ಬಹುಮಟ್ಟಿಗೆ ಆಶಾದಾಯಕವಾಗಿ ವಿವರಿಸಿಕೊಂಡಿರುವುದು ಇಲ್ಲಿ ಮುಖ್ಯವಾಗಿ ಗಮನಿಸಬಹುದಾದ ವಿಚಾರವಾಗಿದೆ. ಈ ಹಿನ್ನೆಲೆಯಲ್ಲಿ ಇದನ್ನು, ಭಾಷಾ ಕೌಶಲಗಳ ಅಭಿವೃದ್ಧಿ: ಓದು-ಬರವಣಿಗೆ-ಮಾತು, ಭಾವ ಕೋಶದ ಅಭಿವೃದ್ಧಿ: ವ್ಯಕ್ತಿತ್ವ ವಿಕಸನ, ಕನ್ನಡ ಸಂಸ್ಕೃತಿಯ ಬಗೆಗಿನ 'ಅಭಿಮಾನ ಸೃಷ್ಟಿಯ ತಾತ್ವಿಕ' ತಿಳುವಳಿಕೆ ಎಂದೇ ಇಲ್ಲಿ ವ್ಯಕ್ತಪಡಿಸಲಾಗಿದೆ. ಆದ್ದರಿಂದಾಗಿ ಇಲ್ಲಿಯೂ ಸಹ ಭಾಶಿಕ ತಿಳುವಳಿಕೆಯ ಪ್ರಶ್ನೆಗಳಿದ್ದರೂ ಸಹ ವ್ಯಕ್ತಿ, ಸಾಹಿತ್ಯ, ಸಮಾಜ ಮತ್ತು ಸಂಸ್ಕೃತಿ ಕುರಿತ ಒಲವುಗಳೇ ಮುನ್ನೆಲೆಗೆ ಬದು ಕನ್ನಡ ಕಲಿಕೆ ಮತ್ತು ಬಳಕೆಯ ಪ್ರಶ್ನೆಗಳು ಪ್ರಾಸಂಗಿಕವಾಗಿರುವುದು ಕಾಣುವ ಅಂಶವಾಗಿದೆ.

ಕನ್ನಡ ಪಠ್ಯಕ್ರಮ ಮತ್ತು ಬೋಧನೆ ಕುರಿತಾಗಿ ಇಂದು ಕರ್ನಾಟಕದ ಹಲವು ವಿಶ್ವವಿದ್ಯಾಲಯಗಳ ವ್ಯಾಪ್ತಿಯಲ್ಲಿ ಚರ್ಚೆಗಳು, ಸಂವಾದಗಳು ಹಿಂದೆಂದಿಗಿಂತಲೂ ಹೆಚ್ಚಾಗಿಯೆ ನಡೆಯುತ್ತಿವೆ. ಈ ಕಾರಣವಾಗಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠವು ಮೈಸೂರಿನ ಕೇಂದ್ರೀಯ ಭಾರತೀಯ ಭಾಶೆಗಳ ಸಂಸ್ಥಾನದ ಜೊತೆಗೂಡಿ ೨೦೦೭ರ ಸೆಪ್ಟೆಂಬರ್ ೭, ೮, ೯ರಂದು ಮೂರುದಿನಗಳ ಕಾಲ ಪದವಿ ತರಗತಿಗಳ **ಕನ್ನಡ ಪಠ್ಯಕ್ರಮ ಪರಿಶ್ಕರಣೆ ಮತ್ತು ನವೀಕರಣ** ಕಾರ್ಯಾಗಾರವನ್ನು, ೨೦೦೯ರ ಮಾರ್ಚ್ ತಿಂಗಳ ೨೩ನೆ ತಾರೀಕು ಕುವೆಂಪು ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿ **ಕನ್ನಡ ಪಠ್ಯಕ್ರಮ ಪರಿಶ್ಕರಣೆ** ಕುರಿತಂತೆ ಒಂದು ದಿನದ

ಕಾರ್ಯಾಗಾರ ನಡೆದಿರುವುದನ್ನು ಇದಕ್ಕೆ ಉದಾಹರಣೆಯಾಗಿ ನೋಡಬಹುದಾಗಿದೆ. ಮೈಸೂರು ವಿಶ್ವವಿದ್ಯಾಲಯ ೨೦೧೦ರ ಫೆಬ್ರವರಿಯಲ್ಲಿ ಪ್ರಸ್ತುತ ಜಾರಿಯಲ್ಲಿರುವ **ಕನ್ನಡ ಪಠ್ಯಗಳ ಬೋಧನೆ**ಯು ಕುರಿತಾಗಿ ಒಂದು ದಿನದ ವಿಚಾರ ಸಂಕಿರಣವನ್ನು ಯೋಜಿಸಿದೆ. ಆದರೆ, ಇಲ್ಲೆಲ್ಲ ಗಮನಿಸಬೇಕಾದ ಮುಖ್ಯ ಅಂಶವೆಂದರೆ, ಸಾಂಪ್ರದಾಯಿಕ ಪಠ್ಯಕ್ರಮವನ್ನು ಒಪ್ಪಿದವರ ಹಠಮಾರಿತನ ಮತ್ತು ಹೊಸ ಬದಲಾವಣೆಗಳ ಚಿಂತನೆಗಳ ಮುಖಾಮುಖಿ ಈ ಚರ್ಚೆಗಳಲ್ಲಿ ಮುಖ್ಯ ಸಂಘರ್ಷವಾಗಿ ಕಾಣುತ್ತಿರುವುದು. ಹಿರಿಯ ತಲೆಮಾರಿನ ಪಂಡಿತಮಾನ್ಯ ಕನ್ನಡ ಚಿಂತನೆಗಳು ಮತ್ತು ವಿಭಿನ್ನ ಪ್ರದೇಶ, ಸಮುದಾಯಗಳಿಂದ ಕನ್ನಡ ಅಧ್ಯಾಪನ ವಲಯಕ್ಕೆ ಪ್ರವೇಶ ಪಡೆದಿರುವ ಹೊಸ ತಲೆಮಾರಿನ **ಕನ್ನಡಂಗಳ** ನಡುವೆ ಈ ಸಂಘರ್ಷಗಳು ಪ್ರವೃತ್ತವಾಗಿವೆ. ಈ ಮೇಲಿನ ಚರ್ಚೆಗಳ ಸಂದರ್ಭಗಳಲ್ಲಿ ವ್ಯಕ್ತವಾಗಿರುವ ಅನೇಕ ಅಭಿಪ್ರಾಯಗಳಲ್ಲಿ ಸಹ ಇಂತಹ ಅಸ್ಪಷ್ಟ ತುಡಿತವೊಂದು ಕಾಣಸಿಗುತ್ತದೆ. ಅದರಲ್ಲೂ ಅಂತಹ ಒಂದು ಸಂಘರ್ಷವನ್ನು ತೀಕ್ಷ್ಣವಾಗಿ ತನ್ನೊಳಗೆ ಇರಿಸಿಕೊಂಡಿರುವುದನ್ನು ಬೆಂಗಳೂರು, ಮಂಗಳೂರು ವಿಶ್ವವಿದ್ಯಾಲಯದ ವ್ಯಾಪ್ತಿಯ ಹೊಸ ಪಠ್ಯಕ್ರಮಗಳ ಕುರಿತ ಚರ್ಚೆಗಳಲ್ಲಿ ಗಮನಿಸಿಕೊಳ್ಳಬಹುದಾಗಿದೆ. ಇಂಥ ಚರ್ಚೆಗಳ ಸಂದರ್ಭದಲ್ಲಿ ಸಹ, ಪದವಿ ಹಂತದ ಕನ್ನಡ ಭಾಷೆಯ ಕಲಿಕೆಯ ಅಗತ್ಯವನ್ನು ಅಕಡೆಮಿಕ್ಕಾಗಿ ನಿರ್ವಚಿಸಿಕೊಳ್ಳಲು ಸಾಧ್ಯವಾಗದಿರುವುದು ಏಕೀಕರಣೋತ್ತರ ಕಾಲದಿಂದಲೂ ಮುಂದುವರಿದ ವಿಚಾರವೇ ಆಗಿ ಕಾಣುತ್ತದೆ. ಇದು ಬಹುಮುಖ್ಯವಾಗಿ ಕನ್ನಡ ಅಧ್ಯಾಪನಕ್ಕೆ ಅರ್ಹತೆಯಾಗಿರುವ ಸಾಹಿತ್ಯ ಶಿಕ್ಷಣದ(ಸ್ನಾತಕೋತ್ತರ ಪದವಿಯಲ್ಲಿ) ಸಮಸ್ಯೆಯೂ ಆಗಿದೆ ಎಂಬುದನ್ನು ಗ್ರಹಿಸಬೇಕಾಗುತ್ತದೆ.

**೩.೩ ಜೀವನ ಮತ್ತು ಶಿಕ್ಷಣ ಸಂಬಂಧಿ ಕಾಳಜಿಗಳಲ್ಲಿ ವ್ಯಕ್ತವಾಗಿರುವ ಪ್ರತಿಕ್ರಿಯೆಗಳು**

ಮ.ಗಂ. ರೇಣುಕಾ ಪ್ರಸನ್ನ, ಶಿಕ್ಷಣದ ಸಾಂವಿಧಾನಿಕ ಬದ್ಧತೆಯ ಹಿನ್ನೆಲೆಯಲ್ಲಿ ಕನ್ನಡ ಕಲಿಕೆಯ ಪಠ್ಯ ನಿರ್ಮಾಣ, ಪರೀಕ್ಷೆ ಮತ್ತು ಮೌಲ್ಯಮಾಪನ ಚಟುವಟಿಕೆಗಳನ್ನು 'ಪ್ರಚಲಿತ ಶಿಕ್ಷಣ ಒಂದು ಚಿಂತನೆ'' 'ಮತ್ತಷ್ಟು ಶೈಕಶಣಿಕ ಚಿಂತನೆಗಳು' ಕೃತಿಗಳಲ್ಲಿ ಚರ್ಚೆಗೆ ತೆಗೆದುಕೊಳ್ಳುತ್ತಾರೆ. ಪಠ್ಯ ನಿರ್ಮಾಣದ ಸಂದರ್ಭದ ಸಾಹಿತ್ಯಕ, ಸಾಂಸ್ಕೃತಿಕ ಮತ್ತು ಆರ್ಥಿಕ ರಾಜಕಾರಣದ ಅಧಿಕಾರ ಸಂಬಂಧಗಳ ಅನಾವರಣ, ಪರೀಕ್ಷೆ ಮತ್ತು ಮೌಲ್ಯಮಾಪನ ಸಂದರ್ಭದ ನೈತಿಕಹೊಣೆಯ ಪತನ, ಕಲಿಕೆ ಎನ್ನುವುದು 'ಸಾಂವಿಧಾನಿಕವಾಗಿಯೂ ನಿಷ್ಪ್ರಯೋಜನೆಗೊಂಡ' ಸ್ಥಿತಿಯಲ್ಲಿರುವುದನ್ನು ಕುರಿತು ಆಲೋಚಿಸುತ್ತಾರೆ. ಪತ್ರಿಕೆಗಳಲ್ಲಿ ಪ್ರಕಟವಾದ ಸಾರ್ವಜನಿಕ ಪ್ರತಿಕ್ರಿಯೆಗಳನ್ನು ಮತ್ತು

ಕನ್ನಡ ಅಧ್ಯಾಪಕರಾಗಿ, ಮತ್ತು ಮೈಸೂರು ವಿಶ್ವವಿದ್ಯಾಲಯದ ಆಡಳಿತಾಂಗದ ಭಾಗವಾಗಿ ಪಡೆದ ತಮ್ಮ ಸ್ವಂತ ಅನುಭವವನ್ನು ಚರ್ಚೆಗೆ ತೆಗೆದುಕೊಂಡು ಕನ್ನಡ ಪಠ್ಯಪುಸ್ತಕ ನಿರ್ಧಾರದ ಪ್ರಕ್ರಿಯೆಯ ಬಗ್ಗೆ ಖಾರವಾಗಿ ಪ್ರತಿಕ್ರಿಯಿಸುತ್ತಾರೆ. ಲೇಖಕ, ಪ್ರಕಾಶಕ ಮತ್ತು ಪಠ್ಯಪುಸ್ತಕ ಸಮಿತಿಯ ನಡುವಿನ ವ್ಯಾಪಾರಿ ಒಪ್ಪಂದಗಳಿಂದಾಗಿ ಪಾಠ ಮಾಡುವ ಅಧ್ಯಾಪಕರನ್ನು ದೂರವೇ ಇಡಲಾಗುತ್ತದೆ. ಇದರಿಂದಾಗಿ, ಹೆಸರಾಂತ ಲೇಖಕನ ಅಮುಖ್ಯ ಕೃತಿ, ಕವಿಯೊಬ್ಬನ ಪ್ರವಾಸ ಕಥನ ಪಠ್ಯವಾಗುತ್ತದೆ. 'ಅಲ್ಲಿ ಹತ್ತು ಪದ್ಯ, ಇಲ್ಲಿಶ್ಟು ಗದ್ಯ ಸೇರಿಸಿಕೊಂಡು' ಪಠ್ಯಪುಸ್ತಕಗಳು ಸಂಪಾದಿತವಾಗುತ್ತವೆ ಎಂದು ಪಠ್ಯಕ್ರಮ ವ್ಯವಸ್ಥೆ ಮತ್ತು ಪಠ್ಯಪುಸ್ತಕ ಮಂಡಳಿ ಕುರಿತು ಅಸಮದಾನವನ್ನು ವ್ಯಕ್ತಪಡಿಸುತ್ತಾರೆ. ಪಠ್ಯಪುಸ್ತಕ ಸಮಿತಿ, ಪಠ್ಯಗಳ ಲೇಖಕರು ಮತ್ತು ಪ್ರಕಾಶಕರ ಸಂಬಂಧಗಳನ್ನು ಪ್ರಸ್ತಾಪಿಸುತ್ತಾ(ರೇಣುಕಾ ಪ್ರಸನ್ನ ೧೯೯೬);

> ಹೀಗಾಗಿ ಆಸಕ್ತರು ಪಠ್ಯಪುಸ್ತಕ ಸಮಿತಿಯ ಸದಸ್ಯರನ್ನು ಬೇಟಿಯಾಗಿ ಪುಸ್ತಕಗಳನ್ನು ಕೊಡುವ ಪದ್ಧತಿಯೇ ಜಾರಿಯಲ್ಲಿದೆ. ಪಠ್ಯಪುಸ್ತಕ ಸಮಿತಿ ಸಭೆ ನಡೆಯುವ ದಿನಾಂಕಕ್ಕೆ ನಾಲ್ಕಾರು ದಿನ ಮುಂಚಿತವಾಗಿ ಇಂಥ ಬೇಟಿಗಳಾಗುತ್ತವೆ; ಕೊನೆಯ ಗಳಿಗೆಯವರಿಗೂ ಪುಸ್ತಕಗಳನ್ನು ತಂದುಕೊಡುತ್ತಲೇ ಇರುತ್ತಾರೆ. ಐದಾರು ದಿನಗಳಲ್ಲಿ ೨೫-೩೦ ಪುಸ್ತಕಗಳು ಹೀಗೆ ಬಂದರೆ ಅವೆಲ್ಲವನ್ನೂ ಸಭೆ ನಡೆಯುವುದಕ್ಕೆ ಮೊದಲು ಓದಲು ಸಮಯವಾದರೂ ಎಲ್ಲಿರುತ್ತದೆ? ಹೀಗಾಗಿ ಕೆಲವೊಮ್ಮೆ ಪುಸ್ತಕಗಳನ್ನು ಓದದೆಯೇ ಪಠ್ಯಪುಸ್ತಕಗಳಾಗಿ ನಿಯಮಿಸಿದ ನಿದರ್ಶನಗಳೂ ಇಲ್ಲದಿಲ್ಲ. ಏಕೆಂದರೆ ಹೀಗೆ ಆಸಕ್ತರಿಂದ ಬರುವ ಎಶ್ಟೋ ಪುಸ್ತಕಗಳು ಮೊದಲಬಾರಿಗೆ ಪ್ರಕಟವಾದ, ಪ್ರಸಿದ್ದಿಗೆ ಬರದ ಪುಸ್ತಕಗಳಾಗಿದ್ದು, ಸಮಿತಿಯ ಎಲ್ಲ ಸದಸ್ಯರೂ ಅವುಗಳನ್ನು ಗಮನಿಸುವ ಸಾಧ್ಯತೆ ಇರುವುದಿಲ್ಲ.

ಪ್ರಾಮಾಣಿಕರನ್ನೂ ಅಪ್ರಾಮಾಣಿಕರನ್ನಾಗಿಸುವ ಇಂಥ ಮುಜುಗರದ ವ್ಯವಸ್ಥೆ ಬದಲಾಗಬೇಕು. ವಿಶ್ವವಿದ್ಯಾಲಯದ ಬಳಿ ಸುಳಿದಾಡುವವರ ಪಠ್ಯಗಳು ಮಾತ್ರ ಸೇರಿ ಉಳಿದವರು ಅವಕಾಶದಿಂದ ವಂಚಿತರಾಗುವುದು ತಪ್ಪಬೇಕು. 'ಅಧ್ಯಾಪಕರನ್ನು ಹೆಚ್ಚು ಹೆಚ್ಚಾಗಿ ತೊಡಗಿಸಿಕೊಳ್ಳಬೇಕು' 'ಪಠ್ಯಪುಸ್ತಕ ನಿರ್ಮಾಣಕ್ಕೆ ಮುನ್ನ ಅಧ್ಯಾಪಕರಿಗೆ ವಿಚಾರಗೋಶ್ಟಿಗಳನ್ನೇರ್ಪಡಿಸಬೇಕು' ಎಂಬ ಸಲಹೆಗಳನ್ನು ಮುಂದಿಟ್ಟರೂ, 'ನಿಯಮಗಳೇ ದೋಶಪೂರ್ಣವಾಗಿರುವುದು, ಇರುವ ನಿಯಮಗಳನ್ನು ಕಟ್ಟು ನಿಟ್ಟಾಗಿ ಪಾಲಿಸದಿರುವುದು, ಪರೀಕ್ಷಾ ವಿಭಾಗಗಳ ಆಡಳಿತದ ಅದಕ್ಷತೆ, ನಿಯಮಿತ ಅವದಿಯಲ್ಲಿ ನಿಗದಿಗೊಳಿಸಿದ ಸಂಖ್ಯೆಗಿಂತ ಹೆಚ್ಚು

ಉತ್ತರ ಪತ್ರಿಕೆಗಳನ್ನು ಮೌಲ್ಯಮಾಪನ ಮಾಡುವುದು, ಪಠ್ಯ ಪುಸ್ತಕಗಳನ್ನು ಓದದ, ಬೋಧಿಸದ ಅಧ್ಯಾಪಕರು ಈ ಚಟುವಟಿಕೆಯಲ್ಲಿ ಭಾಗಿಯಾಗುವುದು, ಬೋಧನೆ ಮಾಡದಿದ್ದರೂ ಸೇವಾ ಹಿರಿತನದ ನೆಪದಿಂದ ಪ್ರಶ್ನೆ ಪತ್ರಿಕೆ ಸಂಯೋಜಿಸುವುದು, ತರಾತುರಿಯಿಂದ ಮೌಲ್ಯಮಾಪನ ಮಾಡುವ ವ್ಯವಸ್ಥೆ' ಮೊದಲಾದ ವಿಚಾರಗಳನ್ನು ಅಧ್ಯಾಪನ ಸಮುದಾಯದ ನೈತಿಕ ಸಮಸ್ಯೆಗಳ ಗುರಿಯಾಗಿಸಿಕೊಂಡು ನೋಡುತ್ತಾರೆ.

ಇಂದಿನ ಶಿಕ್ಷಣ ಪದ್ಧತಿಯನ್ನು ಅಸಂಗತ ಅವೈಜ್ಞಾನಿಕ' ಎಂದು ಕರೆಯುವ ಬಿ. ಭಾಸ್ಕರರಾವ್ 'ಯಥಾಸ್ಥಿತಿಯನ್ನು ಮುಂದುವರಿಸಿಕೊಂಡು ಹೋಗುವ ಶಿಕ್ಷಣ ಪದ್ಧತಿಯ ಅಸಂಗತ, ಅವೈಜ್ಞಾನಿಕ ಸ್ಥಿತಿಯನ್ನು ತಿಳಿದುಕೊಳ್ಳಬೇಕಾದರೆ ಪಠ್ಯಪುಸ್ತಕಗಳನ್ನೋದಬೇಕು' ಎನ್ನುತ್ತಾರೆ. ಪಠ್ಯಪುಸ್ತಕಗಳು ಅತಾರ್ಕಿಕವಾಗಿದ್ದು, ಪಠ್ಯಪುಸ್ತಕಗಳ ನಿರ್ಧಾರದ ಹಿಂದೆ ನಿರ್ದಿಷ್ಟ ವರ್ಗವು ಕೆಲಸ ಮಾಡುತ್ತಿದೆ ಮತ್ತು ಪಠ್ಯಪುಸ್ತಕಗಳು ನಗರಕೇಂದ್ರಿತ ಮಧ್ಯಮ ವರ್ಗವನ್ನು ಮಾತ್ರ ಮುಖ್ಯಮಾಡಿಕೊಂಡು ನಿರ್ಮಾಣವಾಗುತ್ತವೆ'' ಎಂದು ಅಭಿಪ್ರಾಯ ಪಡುತ್ತಾರೆ. ಇಂಥ ಪಠ್ಯಕ್ರಮಗಳು 'ಗ್ರಾಮೀಣ ಸಮಾಜದ ಕೆಳವರ್ಗದಿಂದ ಬರುವವರಿಗೆ ಅಸಂಗತ ಪಾಠಗಳು ಎಂದು ಪ್ರತಿಕ್ರಿಯಿಸುತ್ತಾರೆ. ಇಂದು ಶಿಕ್ಷಣ ಸಂಸ್ಥೆಗಳ ಸಾಧನೆಯನ್ನು ಗುರುತಿಸಲು ಉಪಯೋಗಕ್ಕೆ ಬರುವ 'ಫಲಿತಾಂಶ ಶನಿ ನಮ್ಮ ಶಿಕ್ಷಣ ಪದ್ಧತಿಯನ್ನು ಯಾಂತ್ರಿಕಗೊಳಿಸಿದೆ, ಭ್ರಷ್ಟಾಚಾರಕ್ಕೆ ದಾರಿಮಾಡಿಕೊಟ್ಟಿದೆ'ಎಂದು ಅಭಿಪ್ರಾಯ ಪಡುತ್ತಾರೆ. ಎಚ್ಚೆನ್ 'ಜಾತಿಪದ್ಧತಿಯಿಂದಾಗುವ ಅನಾಹುತಗಳ ಬಗ್ಗೆ, ಜಾತಿಪದ್ಧತಿ ನಿರ್ಮೂಲನೆಯ ಬಗ್ಗೆ, ಜಾತಿರಹಿತ ಮದುವೆ'ಗಳ ಬಗ್ಗೆ ಪಠ್ಯಪುಸ್ತಕಗಳಲ್ಲಿ ಪ್ರಸ್ತಾಪಿಸಬೇಕು ಎನ್ನುತ್ತಾರೆ(ಮುನ್ನುಡಿಯಲ್ಲಿ).

ಪಠ್ಯಪುಸ್ತಕಗಳಲ್ಲಿ ಜೀವನ ವಿರೋಧಿ ನಿಲುವುಗಳ ಕುರಿತು ಮಾತನಾಡುತ್ತ ಆರ್ಕೆ ಮಣಿಪಾಲ್[೧೦] ಕಲಿಸುವುದು ಅಂದರೆ 'ಕಲಿಯಲಿಕ್ಕೆ ಪ್ರಚೋದಿಸುವುದು; ಕಲಿಯಲಿಕ್ಕೆ ವಿದ್ಯಾರ್ಥಿಯನ್ನು ತಯಾರು ಮಾಡುವುದು, ತಾನೆ ಕಲಿಯಲು ಯೋಗ್ಯವಾದ ವಾತಾವರಣವನ್ನು ಕಲಿಸಿಕೊಡುವುದು' ಎನ್ನುತ್ತಾ ನಮ್ಮ ಪಠ್ಯಕ್ರಮ-ನಮ್ಮ ಪಠ್ಯಪುಸ್ತಕಗಳು, ಬೋಧನೆ ಮತ್ತು ಮೌಲ್ಯಮಾಪನಾ ಪದ್ಧತಿಗಳು ''ನಮ್ಮ ಒಟ್ಟು ವ್ಯವಸ್ಥೆಯ ವರ್ಗ ಹಿತಾಸಕ್ತಿಗಳಿಂದ ನಿಯಂತ್ರಿತವಾಗಿರತಕ್ಕವು'' ಎಂದು ಅಭಿಪ್ರಾಯ ಪಡುತ್ತಾರೆ. ೧೯೮೨-೮೩ ರಲ್ಲಿ ಪಿ.ಯು.ಸಿ. ಕನ್ನಡ ಪಠ್ಯಕ್ರಮದಲ್ಲಿ ಸೇರ್ಪಡೆಯಾಗಿದ್ದ ತಳಸಮುದಾಯಗಳ ಪ್ರತಿನಿಧೀಕರಣವಾದ ಕತೆ(ಸಂಬಂಧಗಳು)ಯೊಂದರಲ್ಲಿ ಬಳಕೆಯಾಗಿದ್ದ ಭಾಷೆಯಲ್ಲಿ ಅಶ್ಲೀಲ ಪದಗಳಿವೆ ಎಂಬ

ಕಾರಣಕ್ಕಾಗಿ ಪ್ರತಿಗಾಮಿ ಶಕ್ತಿಗಳಿಂದ ಪ್ರತಿಭಟನೆ ನಡೆದು ಗುಂಡುರಾವ್ ಸರ್ಕಾರ ಮುಟ್ಟುಗೋಲು ಹಾಕಿತ್ತು. ಈ ಸಂದರ್ಭವನ್ನು ಕಾರಣ ಮಾಡಿಕೊಂಡು ಪಠ್ಯಪುಸ್ತಕಗಳ ಕುರಿತ ಇಂಥ ಚರ್ಚೆಯನ್ನು ಮಂಡಿಸುತ್ತಾರೆ.

ಬಿ.ಎಂ.ಪುಟ್ಟಯ್ಯ[೧೧]ನವರ, 'ಉನ್ನತ ಶಿಕ್ಷಣ : ಪಠ್ಯಕ್ರಮದ ಸ್ವರೂಪ ಮತ್ತು ಸಮಸ್ಯೆಗಳು' ಕುರಿತ ಲೇಖನದಲ್ಲಿ, ಉನ್ನತ ಶಿಕ್ಷಣದಲ್ಲಿ ಪಠ್ಯಕ್ರಮವು ಪಡೆದುಕೊಳ್ಳುತ್ತಿರುವ ಪಠ್ಯದ ಸ್ವರೂಪ, ಪರಿಣಾಮಗಳ ಹಿನ್ನೆಲೆಯಲ್ಲಿ ಉನ್ನತ ಶಿಕ್ಷಣದಲ್ಲಿ ಕಲೆ, ಸಾಹಿತ್ಯ ಮತ್ತು ಮಾನವಿಕಗಳಿಗೆ ಮಹತ್ವ ಕಡಿಮೆಯಾಗುತ್ತಿದೆ ಎಂದು ಪ್ರಸ್ತಾಪಿಸುತ್ತಾರೆ. ಇದು ಬಹುರಾಷ್ಟ್ರೀಯ ಕಂಪನಿಗಳ ಕಾರ್ಯಸ್ವರೂಪ ಮತ್ತು ಜಾಗತಿಕ ಮಾರುಕಟ್ಟೆಯ ಪರಿಸರ ಹುಟ್ಟುಹಾಕುತ್ತಿರುವ ಬಿಕ್ಕಟ್ಟುಗಳಿಂದ ಉಂಟಾಗುತ್ತಿದೆ. ಉನ್ನತ ಶಿಕ್ಷಣವನ್ನು ಬಹುರಾಷ್ಟ್ರೀಯ ಕಂಪನಿಗಳು ರೂಪಿಸುತ್ತಿವೆ. ಆ ಕಂಪನಿಗಳ ಬಂಡವಾಳ ಮತ್ತು ಅವು ಸೃಷ್ಟಿಸಿರುವ ಮಾರುಕಟ್ಟೆಯಲ್ಲಿ ಕೆಲಸ ಮಾಡುವಂತಹವರನ್ನು ರೂಪಿಸಲು ಉನ್ನತ ಶಿಕ್ಷಣವನ್ನು ಬಳಸಲಾಗುತ್ತಿದೆ. ಇದರಿಂದಾಗಿ ತರಗತಿಗಳು ಪ್ರೆಸ್‌ಮೀಟ್‌ಗಳಾಗುತ್ತಿವೆ ಎನ್ನುತ್ತಾರೆ.

ಒಂದು ಬಗೆಯ ಆಗ್ರಹಪೂರ್ವಕ ಸಿಟ್ಟು, ಸ್ಪಷ್ಟವಾಗಿ ಪರಿಕಲ್ಪಿಸಲಾಗದ ಆದರ್ಶದ ನೆಲೆಗಳು, ಶಿಕ್ಷಣ ವ್ಯವಸ್ಥೆಯ ನಡೆಗಳನ್ನು ಹೀಗೇ ಎಂದು ಸರಿಯಾಗಿ ಗ್ರಹಿಸಲಾಗದ ಅಸಹಾಯಕತೆ, ಶಿಕ್ಷಣವನ್ನು ಕುರಿತ ಬಹುಮಟ್ಟಿನ ಇಂಥ ಲೇಖನಗಳಲ್ಲಿ ಸಾಮಾನ್ಯವಾಗಿ ವ್ಯಕ್ತವಾಗಿರುವ ಸಂಗತಿಯಾಗಿದೆ.

ಇಲ್ಲಿಯವರೆಗೆ ನಡೆಸಿದ, ಕನ್ನಡ ಪಠ್ಯಕ್ರಮ, ಬೋಧನೆ ಮತ್ತು ಕಲಿಕೆಯ ಸಂಬಂಧವಾದ ಚಿಂತನೆ ಮತ್ತು ಪ್ರತಿಕ್ರಿಯೆಗಳ ಒಟ್ಟು ಪರಿಶೀಲನೆಯಿಂದ ಉತ್ಪನ್ನವಾಗುವ ತಾತ್ವಿಕ ಸಮಸ್ಯೆಗಳನ್ನು ಹೀಗೆ ಗುರುತಿಸಿಕೊಳ್ಳಬಹುದಾಗಿದೆ;

- **ಕನ್ನಡ ಭಾಶೆಯ ಕಲಿಕೆಯ ಅನಿವಾರ್ಯತೆ ಅಥವ ಅಗತ್ಯವನ್ನು ಕುರಿತಾದ ಸ್ಪಷ್ಟ ನಿಲುವುಗಳು ಇಲ್ಲ. ಇದಕ್ಕೆ ಸಂಬಂಧಿಸಿದ ನಿರ್ದಿಷ್ಟ ಶಿಕ್ಷಣ ತತ್ವವಿಲ್ಲ.**
- **ಕನ್ನಡ ಭಾಶೆಯನ್ನು ಅಭ್ಯಾಸ ಮಾಡುವ ಅವಧಿಯಲ್ಲಿಯೆ ತಾರತಮ್ಯಗಳಿದ್ದು[೧೨] ಎರಡು ವರ್ಶಕ್ಕೆ ಸೀಮಿತವಾಗಿರುವುದು ಇದನ್ನು ಮತ್ತಶ್ಟು ತಿರಸ್ಕೃತ ನೆಲೆಗೆ ತಳ್ಳಿದಂತಾಗಿದೆ.**
- **ಪಠ್ಯಗಳನ್ನು ಸವಿಸ್ತರ-ಅವಿಸ್ತರ ಎಂದು ನಿರ್ಧರಿಸುವುದು ಕನ್ನಡ ಭಾಶೆಯ ಕಲಿಕೆಯಲ್ಲಿನ ಮತ್ತೊಂದು ಗೊಂದಲವೇ ಆಗಿದೆ. ಇದು, ಕನ್ನಡ ಭಾಶಾ ಕಲಿಕೆಯನ್ನು ಕುರಿತ ಗೊಂದಲಗಳಿಂದಲೆ ಹುಟ್ಟಿಕೊಂಡಿದೆ.**

- ಸಂಸ್ಕೃತ ಮತ್ತು ಹಿಂದಿಭಾಷೆಗಳ ಆಯ್ಕೆಗೆ ಇರುವ ಅವಕಾಶವು ಕನ್ನಡ ಭಾಷೆಯ ಕಲಿಕೆಯಲ್ಲಿನ ಗೊಂದಲವನ್ನು ಮತ್ತಷ್ಟು ಹೆಚ್ಚಿಸಿದೆ. ಇದು ಕನ್ನಡ ಕಲಿಕೆಯ ಹೊಣೆಯಿಂದ ತಪ್ಪಿಸಿಕೊಳ್ಳುವ ಸುಲಭ ದಾರಿಯನ್ನೂ ಹುಟ್ಟುಹಾಕಿದೆ.
- ಕನ್ನಡ ಭಾಷೆಯ ಕಲಿಕೆಯಲ್ಲಿ, ಸಾಹಿತ್ಯವು ಶಿಕ್ಷಣದ ಯಶಸ್ಸಿನ ಮಾನದಂಡ. ಕನ್ನಡ ಸಾಹಿತ್ಯದ ಬಗ್ಗೆ ಆಸಕ್ತಿ ಮೂಡಿಸುವುದು. ಸಾಹಿತ್ಯಾಭಿರುಚಿಯನ್ನು ಬೆಳೆಸುವುದು. ಇದಕ್ಕಾಗಿ ರಸವತ್ತಾದ ಭಾಗಗಳನ್ನು ಪರಿಚಯಿಸುವುದು ಎನ್ನುವ ಪ್ರಶ್ನೆಯು, ಕನ್ನಡಭಾಶಿಕ ಶಿಕ್ಷಣ ಮತ್ತು ಸಾಹಿತ್ಯ ಶಿಕ್ಷಣದ ವ್ಯತ್ಯಾಸಗಳನ್ನು ಸ್ಪಷ್ಟಪಡಿಸಿಕೊಳ್ಳದೆ ಇರುವುದರಿಂದಲೆ ಉಂಟಾಗಿದೆ.
- ಸಂಸ್ಕೃತ ಭಾಶೆಯ ಜ್ಞಾನದ ಬಗೆಗಿನ ಒಲವು, ಪರಂಪರೆಯ ಪ್ರಜ್ಞೆಯನ್ನು ಬೆಳೆಸುವ ಬಗೆಗಿನ ಪ್ರೀತಿ, ಈ ತಿಳುವಳಿಕೆಯನ್ನು ಕನ್ನಡ ತರಗತಿಗಳಲ್ಲಿ ಮೂಡಿಸಬೇಕೆಂಬ ಆಶಯ, ಆ ಮೂಲಕ ಭಾಶೆಯ ಶುದ್ಧತೆ, ವೈಚಾರಿಕ ಮನೋಧರ್ಮ ಕಲಿಸಬೇಕು ಎನ್ನುವ ಅಪೇಕ್ಷೆ ಇದೆ.
- ಇದರಿಂದಾಗಿ, ಪಠ್ಯಕ್ರಮದ ಭಾಗವಾಗಿ ಲೇಖಕರ ವೈಯುಕ್ತಿಕ ಕೃತಿಗಳು ಪ್ರವೇಶ ಪಡೆಯುವ ವಿದ್ಯಮಾನವು ಒಂದು ದಂದೆಯಾಗಿ ಮಾರ್ಪಟ್ಟಿದೆ.
- ಪಠ್ಯ ಕೃತಿಗಳನ್ನು ವಕಾಲತ್ತು ವಹಿಸಿದ ಸಾಮಾಜಿಕ ಅಧಿಕಾರ ಸಂಬಂಧಗಳು ನಿರ್ಧರಿಸುತ್ತವೆ.
- ಖಾಸಗಿ ಪ್ರಕಾಶಕರು ಪಠ್ಯಪುಸ್ತಕಗಳ ಮೂಲಕ ಪಠ್ಯಕ್ರಮದ ಆರ್ಥಿಕ ರಾಜಕಾರಣದೊಳಗೆ ಪ್ರವೇಶ ಪಡೆಯುವುದು ಸುಲಭವಾಗಿದೆ ಎನ್ನುವ ಆಪಾದನೆ ಮತ್ತು ವಿಶ್ವವಿದ್ಯಾಲಯವೇ ಪ್ರಕಟಿಸಬೇಕು ಎಂಬ ಅಪೇಕ್ಷೆಯೂ ಸಹ ಶಿಕ್ಷಣ ವ್ಯವಸ್ಥೆಯಲ್ಲಿನ ನಿರ್ದಿಷ್ಟ ಕಲಿಕೆಯ ನಿಯಮಗಳನ್ನು ಬೇಡುವಂತದ್ದಾಗಿದೆ.
- ಕನ್ನಡ ಪಠ್ಯಪುಸ್ತಕಗಳಿಗೆ ಇತರೆ ಪಠ್ಯಪುಸ್ತಕಗಳಿಗಿಂತ ಹೆಚ್ಚು ಮಹತ್ವವಿದೆ. ಆದ್ದರಿಂದಾಗಿ ಕನ್ನಡ ಅಧ್ಯಾಪಕರ ಘನತೆಯನ್ನು ಕಡಿಮೆ ಮಾಡದ, ವಿಮರ್ಶೆಯ ಕ್ಷೇತ್ರದಲ್ಲಿ ಮನ್ನಣೆ ಪಡೆದ ಪಠ್ಯಗಳನ್ನು ಮಾತ್ರ ನಿಯಮಿಸಬೇಕು ಎನ್ನುವಲ್ಲಿ ಕನ್ನಡ ಭಾಶೆಯ ಕಲಿಕೆಯಲ್ಲಿ ಸಾಹಿತ್ಯದ ಮಹತ್ವವನ್ನೆ ಮುಂದಿಡುವಂತಾಗಿದೆ.

- ಬೋಧನೆಯೆನ್ನುವುದು ರನ್ನಿಂಗ್ ಕಾಮೆಂಟರಿ, ಹರಿಕಥಾ ಶಿವಕಥಾ ಕಾಲಕ್ಷೇಪ. ಕುರುಡು ಪಾಠ, ಕುರುಡು ಕಲಿಕೆ. ಕಲಿಕಾರ್ಥಿಗಳನ್ನು ತರಗತಿಯಲ್ಲಿ ಆಕರ್ಶಿಸಲು ಆಗುತ್ತಿಲ್ಲ ಎನ್ನುವುದು ಭಾಶೆ ಮತ್ತು ಸಾಹಿತ್ಯದ ಕಲಿಕೆಯ ಗೊಂದಲದ ಪರಿಣಾಮವೇ ಆಗಿದೆ.
- ಇದರಿಂದಾಗಿ, ಪರೀಕ್ಶೆ ಮತ್ತು ಮೌಲ್ಯಮಾಪನ ವ್ಯವಸ್ಥೆಗಳು ಕಣ್ಣುಕಟ್ಟು ವ್ಯಾಪಾರ. ಕೇವಲ ಕಾಗುಣಿತದ ತಪ್ಪುಗಳು ಕಲಿಕಾರ್ಥಿಯನ್ನು ಫೇಲು ಮಾಡಲು ಸರಿಯಲ್ಲದ ಮಾನದಂಡ. ಪಠ್ಯಗಳನ್ನು ಬೋಧಿಸದವರೂ ಮೌಲ್ಯಮಾಪನ ಮಾಡುವುದೂ ಆಗಿದೆ.
- ಪಠ್ಯಕ್ರಮ, ಬೋಧನೆ, ಪರೀಕ್ಶೆಗಳನ್ನು ರೂಪಿಸುವ ಹಕ್ಕು ಕನ್ನಡ ಅಧ್ಯಾಪನ ಸಮುದಾಯದ ನಿಯಂತ್ರಣದಲ್ಲಿಲ್ಲದಿರುವುದು ಕಲಿಕೆಯ ನಿಯಮಗಳಲ್ಲಿನ ಗೊಂದಲಗಳಿಂದಲೆ ಹುಟ್ಟಿಕೊಂಡಿದೆ.
- ಶಿಕ್ಶಣ ಪದ್ಧತಿಯ ಅಸಂಗತ, ಅವೈಜ್ಞಾನಿಕತೆಯ ಹಿಂದೆ ನಿರ್ದಿಶ್ಟವಾದ ವರ್ಗ ಹಿತಾಸಕ್ತಿಗಳಿವೆ ಮತ್ತು ಇದು ಪಠ್ಯಕ್ರಮಗಳ ಮೂಲಕ ಕಾಣಸಿಗುತ್ತದೆ.
- ಒಂದು ಭಾಶೆಯ ಅಸ್ತಿತ್ವ ಮತ್ತು ಬೆಳವಣಿಗೆಗೆ ಬೇಕಾದ ಸಾಮಾಜಿಕ ಪ್ರಯೋಜನಗಳ ಪಠ್ಯಕ್ರಮ ಇಲ್ಲ.
- ಕಲಿಕೆಯು ಸಾಹಿತ್ಯಾಭಿವ್ಯಕ್ತಿಯ ಸಾಧನವಾಗುವುದಕ್ಕೆ ಪ್ರಾಮುಖ್ಯತೆ ಇದೆ. ಆದರೆ ಇದು ಕಲಿಕಾರ್ಥಿಯ ಸ್ವಾತಂತ್ರ್ಯಾಭಿವ್ಯಕ್ತಿಯ ಸಾಧನವಾಗಿಲ್ಲ.

ಕನ್ನಡ ಭಾಶೆಯ ಕಲಿಕೆಯ ಸಂಬಂಧಗಳಲ್ಲಿ ಈ ಅಂಶಗಳು, ಅಭಿಪ್ರಾಯ ರೂಪವನ್ನು ಧರಿಸಿದ ಪ್ರಮುಖವಾದ ತಾತ್ವಿಕ ಪ್ರಶ್ನೆಗಳೇ ಆಗಿವೆ. ಇಂಥ ಪ್ರಶ್ನೆಗಳ ಹಿಂದಿನ ಕಾರಣಗಳನ್ನು, ಆ ಮೂಲಕ ಕನ್ನಡ ಕಲಿಕೆಯಲ್ಲಿಲ್ಲದ ಸ್ಪಶ್ಟತೆಯನ್ನು, ಆ ಕಾರಣದಿಂದಲೇ ಈ ಪ್ರಕ್ರಿಯೆಯಲ್ಲಿ ಪ್ರವೃತ್ತವಾಗಿರುವ ಕನ್ನಡ ಸಾಹಿತ್ಯದ ಆಸಕ್ತಿ, ಅಭಿರುಚಿಗಳ ಒಲವುಗಳನ್ನು ಪರಿಶೀಲಿಸಿಕೊಳ್ಳಬೇಕಾಗುತ್ತದೆ. ಕನ್ನಡ ಭಾಶೆಯ ಕಲಿಕೆಯ ನೆಲೆಯನ್ನು ಅಸ್ಪಶ್ಟವಾಗಿಯೇ ಉಳಿಯುವಂತೆ ಮಾಡಿರುವ ಈ ಗೊಂದಲ ಸಾಂಸ್ಕೃತಿಕ ಯಜಮಾನಿಕೆಯನ್ನು ಉಳಿಸಿಕೊಳ್ಳುವ ಉಪಾಯದ ಕಡೆಗೆ, ಆ ಮೂಲಕ ಸಾಮಾಜಿಕ ಅಧಿಕಾರ ವ್ಯವಸ್ಥೆಯನ್ನು ಸ್ಥಿರಗೊಳಿಸುವ ಕಡೆಗೆ ಮುಖಮಾಡುತ್ತದೆ. ಹೀಗಾಗಿ, ನಿಗದಿಯಾಗುವ ಪಠ್ಯಕ್ರಮಗಳ ಹಿಂದೆ ಸಾಹಿತ್ಯ, ಸಾಹಿತ್ಯ ವಿಮರ್ಶೆಯ ಮಾನದಂಡಗಳು ಪ್ರವೃತ್ತವಾಗಿ ಕನ್ನಡ ಕಲಿಕೆಯಲ್ಲಿನ ಸಮಸ್ಯೆಗಳನ್ನು ಸ್ಪಶ್ಟವಾಗಿ

ಗುರುತಿಸಿಕೊಳ್ಳದಂತೆ ತಡೆಯುತ್ತವೆ. ತರಗತಿಗಳಲ್ಲಿ ಪಡೆಯಬೇಕಾದ ಕನ್ನಡಭಾಶಿಕ ಜ್ಞಾನಕ್ಕೂ ಸಾಹಿತ್ಯಕ್ಕೂ ನಂಟು ಬೆಳೆಸಿ ಕನ್ನಡ ಕಲಿಕೆಯ ವಲಯವನ್ನೆ ಅನುಕೂಲಸಿಂಧು ವಾತಾವರಣವನ್ನಾಗಿ ನಿರ್ಮಿಸಿಕೊಳ್ಳುವಂತಾಗಿದೆ. ಹೀಗಾಗಿ, ಭಾಶೆಯ ಬೋಧನೆ ಮತ್ತು ಕಲಿಕೆ ಹಾಗೂ ಸಾಹಿತ್ಯದ ಬೋಧನೆ ಮತ್ತು ಕಲಿಕೆಯ ಗೊಂದಲಗಳು ಪರಸ್ಪರ ಪ್ರಭಾವಿಸುವಂತಾಗಿರುವುದರ ಕಾರಣಗಳನ್ನು ಕಲಿಕಾರ್ಥಿಗೆ ಒದಗಿ ಬರುವ ಪ್ರಯೋಜನಗಳ ಹಿನ್ನೆಲೆಯಿಂದ ಸ್ಪಶ್ಟಪಡಿಸಿಕೊಳ್ಳುವ ಅಗತ್ಯವಿದೆ. ಕಲಿಕಾರ್ಥಿಗಳನ್ನು, ಕಲಿಕಾರ್ಥಿಗಳ ಸಾಮಾಜಿಕ ಸನ್ನಿವೇಶವನ್ನು ಅಂಚಿನಲ್ಲಿಟ್ಟು ಅಧ್ಯಾಪನ ಸಮುದಾಯದ ಕಡೆಗೇ ಮುಖಮಾಡಿರುವ ಈ ವಿದ್ಯಮಾನಗಳು–ಪರೀಕ್ಶೆಗಳನ್ನು ಕ್ಲುಪ್ತ ಅವಧಿಗಳಲ್ಲಿ ಅಧ್ಯಾಪಕರೆ ನಡೆಸಬೇಕು. ಆಂತರಿಕ ಮೌಲ್ಯಮಾಪನ ಇರಬೇಕು. ಈ ಅಧಿಕಾರ ಪಾಠ ಮಾಡುವ ಅಧ್ಯಾಪಕ/ಕಿಗೆ ಇರಬೇಕು–ಮುಂಚೂಣಿಯಲ್ಲಿ ಯಾಕಿವೆಯೆಂಬುದನ್ನೂ ವರ್ತಮಾನದ ಅಗತ್ಯಗಳಲ್ಲಿ ವಿವರಿಸಿಕೊಳ್ಳಬೇಕಾಗುತ್ತದೆ. ಈ ಹಿತಾಸಕ್ತಿ ಎಲ್ಲಿಂದ ಪ್ರವೃತ್ತವಾಗಿದೆ ಮತ್ತು ಯಾಕೆ ಎಂಬುದನ್ನು ಚಾರಿತ್ರಿಕವಾಗಿ ಗ್ರಹಿಸುತ್ತಲೆ ಮುಂದಿನ ಅಧ್ಯಾಯಗಳಲ್ಲಿ ಹೊಣೆಗಾರಿಕೆಯ ತೊಡಕುಗಳನ್ನು ಶೋಧಿಸಿಕೊಳ್ಳಲು ಪ್ರಯತ್ನಿಸಲಾಗುತ್ತದೆ. ಈ ಹಿನ್ನೆಲೆಯಲ್ಲಿ ಬೇಕಾಗಿರುವ ಕನ್ನಡಭಾಶಿಕ ಶಿಕ್ಶಣವನ್ನು ಕಂಡುಕೊಳ್ಳುವುದು ಮುಖ್ಯವಾಗುತ್ತದೆ.

**ಅಡಿ ಟಿಪ್ಪಣಿಗಳು:**

---

೧. ಭಾರತೀಯ ಭಾಶೆಗಳ ಕೇಂದ್ರ ಸಂಸ್ಥೆಯವರು ಬೋಧನೆ, ಪಠ್ಯಕ್ರಮ, ಮೌಲ್ಯಮಾಪನ ಮೊದಲಾಗಿ ಪ್ರೌಢಶಾಲೆ ಮತ್ತು ಶಿಕ್ಶಣ ಕಾಲೇಜುಗಳ ಅಧ್ಯಾಪಕರುಗಳಿಗೆ ನಡೆಸಿದ ಕಾರ್ಯ ಶಿಬಿರಗಳಲ್ಲಿ ಮಂಡಿಸಿದ ವಿಚಾರಗಳು `ನಿರಂತರ` ಎಂಬ ಕೃತಿರೂಪದಲ್ಲಿ ಪ್ರಕಟಗೊಂಡಿದೆ. ಭಾಶಾ ಬೋಧನೆಯಲ್ಲಿ ಸಾಹಿತ್ಯ ಕಲಿಕೆಯ ಪಾತ್ರ, ಇವುಗಳ ಸಂಬಂಧಗಳನ್ನು ಕುರಿತು ಸುಧೀರ್ಘವಾಗಿ ಇಲ್ಲಿ ಚರ್ಚಿಸಲಾಗಿದೆ.(ಭ.ಮಲ್ಲಿಕಾರ್ಜುನ೨೦೦೪)

೨. ಹೊಸಕೆರೆ ಶಿವಸ್ವಾಮಿ: ೧೮೮, ಪದವಿ ತರಗತಿಗಳಲ್ಲಿ ಕನ್ನಡ ಭಾಶಾಸಾಹಿತ್ಯ ಕಲಿಕೆ: ಒಂದು ವಿವೇಚನೆ, ಅಪ್ರಕಟಿತ ಸಂಪ್ರಬಂಧ, ಮಂಗಳೂರು ವಿ.ವಿ.

೩. ಮ.ಗಂ. ರೇಣುಕ ಪ್ರಸನ್ನ(ಸಂ); ೧೯೭೫, ಒರೆಗಲ್ಲು, ಅಧ್ಯಾಪಕರ ಸಂಘ, ಜೆ.ಎಸ್.ಎಸ್.ಕಾಲೇಜು ಮೈಸೂರು.

೪. ಕಮ್ಮಟದಲ್ಲಿ ಭಾಗವಹಿಸಿದ್ದ ಅಧ್ಯಾಪಕರಾದ ಕೆ.ಕೃಶ್ಣಪ್ಪನವರ ಸಂಗ್ರಹದಲ್ಲಿದ್ದ ಕಮ್ಮಟದಲ್ಲಿ ಮಂಡಿಸಿದ ಟಿಪ್ಪಣಿಗಳ ಸೈಕ್ಲೋಸ್ಟೈಲ್ ಪ್ರತಿಯ ಆಧಾರದಿಂದ

೫. ಬಿ.ಎ, ಬಿ.ಎಸ್ಸಿ, ಬಿ.ಕಾಂ, ಬಿ.ಬಿ.ಎಂ ಪದವಿಯ ಕನ್ನಡ ಪಠ್ಯಪುಸ್ತಕಗಳ ವಿವರ ೨೦೦೭–೦೮, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿ.ವಿ

೬. ವಿವಿಧ ಲೇಖಕರು: ೧೯೮೫, ಕನ್ನಡ ಭಾಷಾ ಪಠ್ಯ ಪುಸ್ತಕಗಳು, ದ. ಕ. ಜಿಲ್ಲಾ ಬಂಡಾಯ ಸಾಹಿತ್ಯ ಸಂಘಟನೆ, ಮಂಗಳೂರು.

೭. ವಿಕಾಸ–ನೂತನ ಪಠ್ಯಕ್ರಮ ಯೋಜನೆ: ೨೦೦೫, ಪಠ್ಯಪುಸ್ತಕ ನಿರ್ಮಾಣ ಸಮಿತಿ, ಕನ್ನಡ ಅಧ್ಯಾಪಕರ ಸಂಘ, ಮಂಗಳೂರು ವಿ.ವಿ)

೮. ಮ.ಗಂ. ರೇಣುಕಾ ಪ್ರಸನ್ನ: ೧೯೭೯, ಪ್ರಚಲಿತ ಶಿಕ್ಷಣ ಒಂದು ಚಿಂತನೆ. ವಿಶ್ವನಾಥ ಪ್ರಕಾಶನ, ಮೈಸೂರು

೯. ಬಿ. ಭಾಸ್ಕರರಾವ್: ೧೯೮೨, ಇಂದಿನ ಶಿಕ್ಷಣ ಪದ್ಧತಿ, ಅಸಂಗತ, ಅವೈಜ್ಞಾನಿಕ, ನವಕರ್ನಾಟಕ ಬೆಂಗಳೂರು.

೧೦. ಪಠ್ಯಪುಸ್ತಕಗಳಲ್ಲಿ ಜೀವನ ವಿರೋಧಿ ನಿಲುವುಗಳು–ಡಾ.ಆರ್ಕೆ ಮಣಿಪಾಲ್: ೧೯೮೬, ಸಾಹಿತ್ಯ ಸಿದ್ಧಾಂತ ಮತ್ತು ಹೋರಾಟ, ನವಕರ್ನಾಟಕ, ಬೆಂಗಳೂರು.

೧೧. ಬಿ.ಎಂ.ಪುಟ್ಟಯ್ಯ: ೨೦೦೮, ಮುಖಾಮುಖಿ: ಸಮಾಜ ಸಂಸ್ಕೃತಿ ಚಳುವಳಿ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ

೧೨. ಸದ್ಯದಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಮಾತ್ರ ಕನ್ನಡಭಾಷೆಯ ಪತ್ರಿಕೆಯನ್ನು ಪದವಿಯ ಮೂರು ವರ್ಷಗಳಿಗೆ ನಿಯಮಿಸಿದೆ.

ಅಧ್ಯಾಯ-೪

# ಕನ್ನಡ ಪಠ್ಯಕ್ರಮದ ಬೆಳವಣಿಗೆ: ಆಧುನಿಕತೆಯ ವರಸೆಗಳು

ಆಧುನಿಕ ಶಿಕ್ಷಣದ ಶುರುವಿಗೆ ಮೊದಲು

ಆಧುನಿಕ ಶಿಕ್ಷಣದ ಆರಂಭಕಾಲ

ಕಾಲೇಜು ಶಿಕ್ಷಣದ ಮೊದಲ ದಿನಗಳು

ಆಧುನಿಕ ಶಿಕ್ಷಣ ವ್ಯವಸ್ಥೆಯೊಳಕ್ಕೆ ದೇಶೀ ವಿದ್ವಾಂಸರ ಪ್ರವೇಶ

ವಿಶ್ವವಿದ್ಯಾಲಯ ಮತ್ತು ಕಾಲೇಜು ಶಿಕ್ಷಣದ ಸುಧಾರಣೆಗಳು

ಮೈಸೂರು ವಿಶ್ವ ವಿದ್ಯಾಲಯ ಸ್ಥಾಪನೆ ಮತ್ತು ಕನ್ನಡ ಪಠ್ಯಕ್ರಮದ ಬೆಳವಣಿಗೆ

ಕನ್ನಡಸಾಹಿತ್ಯ ಮತ್ತು ಸಂಸ್ಕೃತ ಪರಂಪರೆ ಹಾಗೂ ಕನ್ನಡ ಪಠ್ಯಕ್ರಮ

ಸ್ವತಂತ್ರ ಭಾರತದ ಸಂವಿಧಾನ ಬದ್ಧ ಶಿಕ್ಷಣ ಮತ್ತು ಕನ್ನಡ ಕಲಿಕೆ

ಸ್ವತಂತ್ರ ಕರ್ನಾಟಕ ಮತ್ತು ಉನ್ನತ ಶಿಕ್ಷಣದಲ್ಲಿ ಕನ್ನಡ

ಅಧ್ಯಾಯ–೪

## ಕನ್ನಡ ಪಠ್ಯಕ್ರಮದ ಬೆಳವಣಿಗೆ: ಆಧುನಿಕತೆಯ ವರಸೆಗಳು

ಶಿಕ್ಷಣ[೧] ಎನ್ನುವ ಪರಿಕಲ್ಪನೆಯು ಬದಲಾವಣೆ ಅಥವಾ ಪರಿವರ್ತನೆ ಎಂಬ ಗ್ರಹೀತದೊಂದಿಗೆ ಆರಂಭವಾಗುತ್ತದೆ. ನಿಸರ್ಗವನ್ನು ಮನುಶ್ಯ ಬದುಕಿನ ಅನುಕೂಲಗಳಿಗೆ ಪರಿವರ್ತಿಸಿಕೊಳ್ಳುವಂತೆ, ವ್ಯಕ್ತಿಯನ್ನು ಸಾಮಾಜಿಕ ಬದುಕಿನ ಹೊಸ ವಿದ್ಯಮಾನಗಳಿಗೆ ಒಡ್ಡಿಕೊಳ್ಳಲು, ಆ ಮೂಲಕ ಆಧುನಿಕ ಸಮಾಜ ವ್ಯವಸ್ಥೆ ಒದಗಿಸುತ್ತಿರುವ ನಾಗರಿಕ ಅನುಕೂಲಗಳನ್ನು ತನ್ನದಾಗಿಸಿಕೊಳ್ಳಲು ಯೋಗ್ಯವಾಗಿಸುವ ಶಿಸ್ತಿನ ಮಾನದಂಡಕ್ಕೆ ಒಳಪಡಿಸುವ ಚಟುವಟಿಕೆಯನ್ನು ಶಿಕ್ಷಣ ಎಂದು ಭಾವಿಸಲಾಗಿದೆ. ಇದು ನಿಸರ್ಗ ಸಹಜ ಮತ್ತು ಪಾರಂಪರಿಕ ಕಲ್ಪನೆಗಳಿಂದ ಬೆಳೆದು ಬಂದ ವ್ಯಕ್ತಿಯ ಸ್ವರೂಪವನ್ನು ಹೊಸ ಸ್ಥಾನಮಾನಗಳಿಗೆ ಬದಲಿಸುತ್ತದೆ ಎಂದು ತಿಳಿಯಲಾಗಿದೆ. ಹೀಗೆ ನಿರೂಪಿಸುವುದೇ ಆಧುನಿಕತೆಯನ್ನು ವ್ಯಕ್ತಿಗತವಾಗಿಸುವ ವಿಧಾನವೂ ಆಗಿದೆ. ಸಮಾನತೆ ಮತ್ತು ನ್ಯಾಯಗಳ ಹೆಸರಿನಲ್ಲಿ ಎಲ್ಲ ಕಡೆಗಳಲ್ಲೂ ಶಿಕ್ಷಣವನ್ನು ಪ್ರೋತ್ಸಾಹಿಸಲಾಗುತ್ತದೆ. ಶಿಕ್ಷಣವೆಂಬುದು ಆಧುನಿಕ ಸಮಾಜದ ದಮನಕಾರಿ ಅಸಮಾನತೆಗಳಿಗೆಲ್ಲ ಮದ್ದು ಎಂಬಂತೆಯೂ ಬಿಂಬಿಸಲಾಗುತ್ತದೆ[೨]. ಇದರ ಪಠ್ಯಕ್ರಮ ಸಂಬಂಧಿಯಾದ ಆಧುನಿಕ ವರಸೆಗಳನ್ನು ಆಧುನಿಕ ಶಿಕ್ಷಣದ ಆರಂಭ ಕಾಲದಿಂದಲೂ ಪ್ರವೃತ್ತವಾಗಿರುವ ಎಂಪಿರಿಕಲ್ ಆದ ತಿಳುವಳಿಕೆಗಳ ಮೂಲಕವೇ ಸ್ಪಶ್ಟವಾಗಿ ಗ್ರಹಿಸಬೇಕಾಗುತ್ತದೆ. ಇದರಿಂದಾಗಿ, ಕನ್ನಡ ಸಾಹಿತ್ಯಾಧ್ಯಯನದ ಬೇರೆ ಬೇರೆ ಸಂದರ್ಭಗಳಲ್ಲಿ ದಾಖಲಾದ ಶಿಕ್ಷಣ ಮತ್ತು ಪಠ್ಯಕ್ರಮ ಸಂಬಂಧಿ ಮಾಹಿತಿಗಳನ್ನು ಒಂದೆಡೆಗೆ ತಂದು ಇಲ್ಲಿ ಚರ್ಚೆಯನ್ನು ಬೆಳೆಸಲಾಗಿದೆ.

**೪.೧ ಆಧುನಿಕ ಶಿಕ್ಷಣದ ಶುರುವಿಗೆ ಮೊದಲು;**

ಆಧುನಿಕ ಶಿಕ್ಷಣ ಎನ್ನುವುದು ಭಾರತದ ಸಂದರ್ಭದಲ್ಲಿ ಶುರುವಾದದ್ದು ೧೯ನೆಯ ಶತಮಾನದ ಆರಂಭ ಕಾಲದಿಂದ. ಇದಕ್ಕೂ ಮೊದಲು ಸಾವಿರಾರು ವರುಶಗಳಿಂದ ಸಂಸ್ಕೃತ ಪರಂಪರೆಯ ಅಗ್ರಹಾರಗಳು ತಮ್ಮ ಸ್ಮೃತಿ ಪರಂಪರೆಯ ಶಿಕ್ಷಣವನ್ನು ಆಚಾರ್ಯ ಸ್ಥಾನಕ್ಕಾಗಿ ಸಾಂಪ್ರದಾಯಿಕವಾಗಿ ಪೋಶಿಸಿಕೊಂಡು ಬರುತ್ತಿದ್ದವು. ಸಮಾಜದ ಪುರೋಹಿತ ಮತ್ತು ಬೌದ್ಧಿಕ ವರ್ಗದ ಆಚಾರ್ಯ ಸ್ಥಾನವನ್ನು ಬೆಳೆಸಿಕೊಂಡು ಬಂದ ಈ ವರ್ಗವು ಸಮಾಜದ ಮೇಲುಸ್ತರದ ಅಧಿಕಾರವನ್ನು ಇಂಥ ಧಾರ್ಮಿಕ ಶಿಕ್ಷಣದ ಮೂಲಕವೇ ಪಡೆದುಕೊಂಡುಬಿಟ್ಟಿತ್ತು. ಶಿಕ್ಷಣದ ಸಾರ್ವತ್ರಿಕವಾದ ವಿದ್ಯಮಾನಗಳು ಆರಂಭವಾದದ್ದು ಆಧುನಿಕದ ಮೊದಲ ದಿನಗಳಲ್ಲಿ ವಸಾಹತು ಆಡಳಿತದ ಕಾರಣವಾಗಿ. ಇದಕ್ಕೆ ಪೂರ್ವಭಾವಿಯಾಗಿ ೧೮ನೇ ಶತಮಾನದ ಉತ್ತರಾರ್ಧದಲ್ಲೇ ಆಧುನಿಕವಾದ ಶಿಕ್ಷಣ ಚಟುವಟಿಕೆಗಳಿಗೆ ಚಾಲನೆ ದೊರೆಯಿತು. ಆರ್.ಡಿ. ಕರಜಗಿಯವರು[೩] ಈ ಸಂದರ್ಭವನ್ನು, ೧೭೬೫ರ ನಂತರ ಬ್ರಿಟಿಶ್ ಈಸ್ಟ್‌ಇಂಡಿಯಾ ಕಂಪನಿಯು ರಾಜಕೀಯ ಸತ್ತೆಯಾಗಿ ಪರಿಣಮಿಸಿದ ನಂತರದಲ್ಲಿ ಕಂಪನಿಯ ಉದ್ದೇಶಕ್ಕೆ ಅನುಗುಣವಾಗಿ ಭಾರತೀಯರನ್ನು ತಮಗೆ ಕೃತಜ್ಞರಾಗಿರುವಂತೆ ತಯಾರು ಮಾಡುವುದು ಬೇಕಾಗಿತ್ತು. ಸ್ಥಳೀಯ ರಾಜ್ಯ ವ್ಯವಸ್ಥೆಗಳು ನಾಶವಾಗಿದ್ದರ ಫಲವಾಗಿ ಸ್ಥಾನವನ್ನು ಕಳೆದುಕೊಂಡ ವರ್ಗದವರಿಗೆ ನೌಕರಿ ಮತ್ತು ಶಿಕ್ಷಣದ ಅನುಕೂಲಗಳನ್ನು ಕಲ್ಪಿಸುವುದರ ಮೂಲಕ ಕೃತಜ್ಞರಾಗಿಸುವುದು ಮುಖ್ಯವಾಯಿತು' ಎಂದು ದಾಖಲಿಸುತ್ತಾರೆ. ಈ ಕಾರಣವಾಗಿ ಈಸ್ಟ್ ಇಂಡಿಯ ಕಂಪನಿಯು ೧೭೮೧ರಲ್ಲಿ ಮುಸಲ್ಮಾನರಿಗಾಗಿ ಕಲ್ಕತ್ತಾದಲ್ಲಿ ಮದ್ರಸಾವನ್ನು ಆರಂಭಿಸಿ ಇಸ್ಲಾಮಿಕ್ ಶಿಕ್ಷಣವನ್ನು ಬೆಂಬಲಿಸಿತು. ೧೭೮೪ರಲ್ಲಿ ಬನಾರಸಿನಲ್ಲಿ, ಬನಾರಸ್ ಸಂಸ್ಕೃತ ಕಾಲೇಜು ಆರಂಭವಾಯಿತು. ಈ ಮೂಲಕ ಭಾರತದ ಶಿಕ್ಷಣ ವ್ಯವಸ್ಥೆಯ ಒಳಗಡೆಗೆ ಬ್ರಿಟಿಶ್ ಈಸ್ಟ್ ಇಂಡಿಯ ಕಂಪನಿ ಪ್ರವೇಶ ಪಡೆಯಲು ದಾರಿ ಮಾಡಿಕೊಂಡಿತು.

**೪.೨ ಆಧುನಿಕ ಶಿಕ್ಷಣದ ಆರಂಭಕಾಲ;**

೧೮೧೩ ರ ಚಾರ್ಟರ್ ಆ್ಯಕ್ಟ್, ಈಸ್ಟ್ ಇಂಡಿಯಾ ಕಂಪನಿಯು ಭಾರತೀಯರ ಶಿಕ್ಷಣದ ಸಲುವಾಗಿ ವರುಶಕ್ಕೆ ಒಂದು ಲಕ್ಷ ರೂಪಾಯಿಗಳನ್ನು ವೆಚ್ಚ ಮಾಡಬೇಕೆಂಬ ನಿಯಮ ಜಾರಿ ಮಾಡುವುದರೊಂದಿಗೆ ಸರ್ಕಾರಿ ಶಿಕ್ಷಣ ಪದ್ಧತಿಗೆ ಬುನಾದಿಯನ್ನು ಹಾಕಿತು. ಈ ಕಾರಣವಾಗಿ ಸಾಹಿತ್ಯದ ಪುನರುಜ್ಜೀವನ ಹಾಗೂ ಸುಧಾರಣೆ, ವಿದ್ಯಾವಂತ ಭಾರತೀಯರಿಗೆ ಉತ್ತೇಜನ

ನೀಡುವುದು, ವಿಜ್ಞಾನ ವಿಶಯಕವಾದ ಜ್ಞಾನವನ್ನು ನೀಡುವುದು ಮತ್ತು ಅಭಿವೃದ್ಧಿ ಪಡಿಸುವುದನ್ನು ತನ್ನ ಗುರಿಯಾಗಿಸಿಕೊಳ್ಳಲಾಯಿತು. ಈ ಸಂದರ್ಭದಲ್ಲಿ ಅಗ್ರಹಾರಗಳು ಮತ್ತು ಮದ್ರಸಾಗಳು ಉಚ್ಚ ಶಿಕ್ಷಣ ಸಂಸ್ಥೆಗಳಾಗಿ ಕಾರ್ಯ ನಿರ್ವಹಿಸುತ್ತಿದ್ದವು ಎಂದು ಬರೆಯುವ ಕರಜಗಿಯವರು; 'ಪ್ರಾಥಮಿಕ ಶಿಕ್ಷಣದ ನಂತರ ೧೨ ವರುಶಗಳ ಕಾಲ ಶಿಕ್ಷಣ ನೀಡುತ್ತಿದ್ದ ಈ ಸಂಸ್ಥೆಗಳಲ್ಲಿ ಧರ್ಮಶಾಸ್ತ್ರ, ವ್ಯಾಕರಣ, ಕಾಯ್ದೆ, ಸಾಹಿತ್ಯ, ನ್ಯಾಯಶಾಸ್ತ್ರ ಮೊದಲಾದ ವಿಶಯಗಳು ಪಠ್ಯಕ್ರಮವಾಗಿದ್ದವು. ಸಂಸ್ಕೃತ ಮತ್ತು ಅರೇಬಿಕ್ ಶಿಕ್ಷಣ ಮಾಧ್ಯಮವಾಗಿದ್ದವು. ಇಲ್ಲಿಯ ಶಿಕ್ಷಕರು ತಮ್ಮ ಜ್ಞಾನ ಹಾಗೂ ವಿದ್ವತ್ತಿಗೆ ಪ್ರಸಿದ್ಧರಾಗಿದ್ದರು. ವಿದ್ಯಾದಾನವು ಪವಿತ್ರ ಕರ್ತವ್ಯವೆಂದು ತಿಳಿಯುತ್ತಿದ್ದರು. ಪುಕ್ಕಟೆ ಶಿಕ್ಷಣ ನೀಡಲಾಗುತ್ತಿತ್ತು. ಈ ಸಂಸ್ಥೆಗಳಿಗೆ ರಾಜರು, ಸರದಾರರು, ಶ್ರೀಮಂತರು ಕಾಣಿಕೆ ಹಾಗೂ ದತ್ತಿಗಳನ್ನು ಕೊಡುತ್ತಿದ್ದರು. ಆದರೆ ಸಂಸ್ಥೆಯ ಆಡಳಿತದ ಹೊಣೆ ಪೂರ್ತಿಯಾಗಿ ಶಿಕ್ಷಕರ ಕೈಯಲ್ಲಿಯೇ ಇರುತ್ತಿತ್ತು' ಎಂದು ಬರೆಯುತ್ತಾರೆ[9] ಅಂದರೆ ಈ ಸಂದರ್ಭದಲ್ಲಿ ನಿರ್ಧಿಶ್ಟ ವರ್ಗದ 'ಧಾರ್ಮಿಕ ಶಿಕ್ಷಣ'ವೇ ಮುಖ್ಯವಾಗಿತ್ತು ಎಂಬುದು ತಿಳಿದು ಬರುತ್ತದೆ.

ಧಾರ್ಮಿಕ ಶಿಕ್ಷಣವೇ ಮುಖ್ಯವಾಗಿದ್ದ, ಆಧುನಿಕ ಶಿಕ್ಷಣದ ಆರಂಭಕಾಲದ ಈ ಸಂದರ್ಭದಲ್ಲಿ ಯಾವುದನ್ನು ಶಿಕ್ಷಣವಾಗಿ ನೀಡಬೇಕು ಎಂಬ ಚರ್ಚೆಗಳು ನಡೆದು, ಪೌರಾತ್ಯ ಮತ್ತು ಪಾಶ್ಚಿಮಾತ್ಯ ವಾದಿಗಳ ನಡುವೆ ತೀವ್ರವಾದ ಸಂಘರ್ಶ ಏರ್ಪಟ್ಟಿತು. ಅಭ್ಯಾಸದ ಪರಿಕರಗಳಾಗಿ ಭಾರತೀಯ ಸಾಹಿತ್ಯ(ಸಂಸ್ಕೃತ) ಮತ್ತು ಇಂಗ್ಲಿಶ್ ಸಾಹಿತ್ಯ ಬಳಸುವ ಕುರಿತಾಗಿ ವಾದ ವಿವಾದಗಳು ಹುಟ್ಟಿಕೊಂಡವು. ಅಲ್ಲದೆ ಕಲಿಕೆಯ ಮಾಧ್ಯಮ ಇಂಗ್ಲಿಶಾಗಿರಬೇಕೊ ಅಥವಾ ಸ್ಥಳೀಯದ್ದೊ(ಸಂಸ್ಕೃತ) ಎಂಬುದರ ಕುರಿತಾಗಿಯೂ ಚರ್ಚೆಗಳು ನಡೆದಿದ್ದವು. ಅಂದರೆ ಈ ಸಂಘರ್ಶವಿದ್ದದ್ದು ಸಹ ಈಗಾಗಲೇ 'ಧಾರ್ಮಿಕ ಶಿಕ್ಷಣ' ಪಡೆಯುತ್ತಿದ್ದ ಸಂಸ್ಕೃತ ಪರಂಪರೆಯ ಮೇಲ್ವರ್ಗದ ಬುದ್ಧಿಜೀವಿಗಳು ಮತ್ತು ಇಂಗ್ಲಿಶ್ ಆಡಳಿತಗಾರರ ನಡುವೆ ಮಾತ್ರ ಎಂಬುದನ್ನು ಗಮನಿಸಿಕೊಳ್ಳಬೇಕಾಗುತ್ತದೆ. ಈ ಜಗಳದಲ್ಲಿ ಇಬ್ಬರೂ ಒಮ್ಮತಕ್ಕೆ ಬರುವ ವಿಚಾರವೆಂದರೆ, ಒಂದು; ದೇಶೀ ಭಾಶೆಗಳು ವಿಜ್ಞಾನ ಮತ್ತು ಸಾಹಿತ್ಯಕ ವಿಚಾರಗಳನ್ನು ವ್ಯಕ್ತಪಡಿಸಲು ಅಸಮರ್ಥವಾಗಿವೆ. ಎರಡು; ಕೇವಲ ಮೇಲ್ವರ್ಗದ ಜನರಿಗೆ ಶಿಕ್ಷಣ ನೀಡುವುದು ಯೋಗ್ಯವಾದುದು, ಮುಂದೆ ಇವರು ಉಳಿದವರಿಗೆ ಶಿಕ್ಷಣ ನೀಡುತ್ತಾರೆ(ಅಧೋಮುಖ ಸಿದ್ಧಾಂತ) ಎನ್ನುವುದು. ಈ ಸಂಘರ್ಶದ ಪರಿಣಾಮವು, ಮೆಕಾಲೆಯ ಪ್ರವೇಶದಿಂದಾಗಿ ಇಂಗ್ಲಿಶ್ ಶಿಕ್ಷಣ ಕ್ರಮವನ್ನು ಭಾರತೀಯ ಮೇಲ್ವರ್ಗ ಅನುಸರಿಸುವಂತಾಯಿತು[10]. ಮುಂದೆ '೧೮೫೪ರಲ್ಲಿ ಪೌರಾತ್ಯ ಮತ್ತು ಪಾಶ್ಚಾತ್ಯ ಶಿಕ್ಷಣಕ್ಕೆ ಪ್ರತ್ಯೇಕ ಹಣಕಾಸಿನ ವ್ಯವಸ್ಥೆ'ಯಾಗುವುದರ ಮೂಲಕ ಪೌರಾತ್ಯ ಮತ್ತು

ಪಾಶ್ಚಿಮಾತ್ಯ ವಾದಿಗಳ ನಡುವಿನ ಈ ಸಂಘರ್ಷ ಕೊನೆಯಾಯಿತು. ಭಾರತೀಯ ಮೇಲ್ವರ್ಗ ತಮ್ಮ ಪಾರಂಪರಿಕ ಶಿಕ್ಷಣ ಚಟುವಟಿಕೆಗಳನ್ನು ಮುಂದುವರಿಸಿತ್ತಲ್ಲದೆ, ಸಂಸ್ಕೃತ ಅಭ್ಯಾಸದ ತಮ್ಮ ಸ್ಥಳೀಯ ವಿದ್ಯಾ ಸಂಸ್ಥೆಗಳನ್ನು ಮೊದಲಿಗಿಂತ ವ್ಯವಸ್ಥಿತವಾಗಿ ನಡೆಸಿಕೊಂಡು ಹೋಗುವುದು ಸಾಧ್ಯವಾಯಿತು.

ಮುಂದೆ ಶಿಕ್ಷಣ ಸಾರ್ವತ್ರಿಕಗೊಳ್ಳತೊಡಗಿದ ಸಂದರ್ಭದಲ್ಲಿ ಸಂಸ್ಕೃತವಲ್ಲದ ಇತರ ಸ್ಥಳೀಯ ಭಾಶೆಗಳಿಗೂ ಪ್ರಾಮುಖ್ಯತೆ ಒದಗಿ ಬಂದಾಗ, ಸ್ಥಳೀಯ ಭಾಶಾಕಲಿಕೆಯ ಪಠ್ಯಕ್ರಮವನ್ನು ನಿರ್ಧರಿಸಿ ರೂಪಿಸುವವರು ಈ ಸಂಸ್ಕೃತ ವಿದ್ಯಾ ಸಂಸ್ಥೆಗಳಿಂದ ಬಂದ ಮೇಲ್ವರ್ಗವೇ ಆಗಿದ್ದರು. ಇದು, ಮುಂದಿನ ದಿನಗಳ ದೇಶೀ ಶಿಕ್ಷಣದ ಬೆಳವಣಿಗೆಯ ಹಿನ್ನೆಲೆಯಲ್ಲಿ ಮುಖ್ಯವಾಗಿ ಗಮನಿಸಿಕೊಳ್ಳಬೇಕಾದ ಅಂಶವಾಗಿದೆ. ಯಾಕೆಂದರೆ, ಬ್ರಿಟಿಶ್ ಅಧಿಪತ್ಯದ ಎದುರು ತಮ್ಮನ್ನು ಪ್ರಾತಿನಿಧಿಕವಾಗಿ ಕಟ್ಟಿಕೊಳ್ಳತೊಡಗುವಾಗ ಸ್ಥಳೀಯ ಭಾಶೆಗಳಲ್ಲಿನ ಪ್ರಾಚೀನ ಪಠ್ಯಗಳು ಇವರಿಗೆ ಬಹುಮುಖ್ಯ ಆಕರಗಳಾದವು. ಇದರಿಂದಾಗಿ ಇಂಥ ಪಠ್ಯಗಳ ಸಂಪಾದನೆ, ಸಂಗ್ರಹಗಳನ್ನು ತಮಗೆ ಈ ಮೊದಲೆ ಧಾರ್ಮಿಕ ಶಿಕ್ಷಣದ ಮೂಲಕ ಪ್ರವೃತ್ತವಾಗಿದ್ದ ಸಂಸ್ಕೃತ ಪರಂಪರೆಯ ತಿಳುವಳಿಕೆಯ ಮೂಲಕವೇ ಜೋಡಿಸಿಕೊಳ್ಳಲಾಯಿತು. ಇದನ್ನು, ಶ್ರೀನಿವಾಸ ಹಾವನೂರ[೪]ರು ಪಾಶ್ಚಾತ್ಯ ಸಂಪರ್ಕದಿಂದ ಒದಗಿಬಂದ ಆಧುನಿಕ ಶಿಕ್ಷಣ ಪದ್ಧತಿ ಮತ್ತು ಹೊಸ ವಿಚಾರ ಸರಣಿಯನ್ನು ಕುರಿತ ಮಾತುಗಳಲ್ಲಿ ಹೇಳುವಂತೆ,–ಬ್ರಿಟಿಶರ ಪ್ರಕಾರ–'ಭಾರತಿಯರಿಗೆ ಪ್ರಪಂಚದ ಅನೇಕ ಆಗುಹೋಗುಗಳ ಮತ್ತು ಉಪಯುಕ್ತ ವಿಶಯಗಳ ಪರಿಜ್ಞಾನ ಇಲ್ಲ'ದಿರುವುದನ್ನು, 'ಕಲಿಸುವ ಉಪಾದ್ಯಾಯರಿಗೆ ಮೂಲಭೂತ ತರಬೇತಿ ಮತ್ತು ತಕ್ಕ ಯೋಗ್ಯತೆ ಇಲ್ಲ'ದಿರುವುದನ್ನು[೫], 'ಮಕ್ಕಳು ಕಲಿಯಲು ಯಾವುದೇ ಪಠ್ಯ ಪುಸ್ತಕಗಳು ಇಲ್ಲ'ದಿರುವುದನ್ನು ನೀಗಿಕೊಳ್ಳುವ ಪ್ರಯತ್ನ ಮಾಡಲಾಯಿತು.

೧೯ನೆ ಶತಮಾನದ ಮೊದಲಲ್ಲಿ ಮದ್ರಾಸ್ ಮತ್ತು ಮುಂಬೈ ಪ್ರಾಂತಗಳಲ್ಲಿ ಸ್ಥಳೀಯರಿಗೆ ಆಧುನಿಕ ಶಿಕ್ಷಣ ನೀಡುವ ಯೋಜನೆಗಳಿಗೆ ಚಾಲನೆ ದೊರೆಯಿತು. ಇದರೊಂದಿಗೆ, ದೇಶಭಾಶೆಗಳಲ್ಲಿ ಶಿಕ್ಷಣ ನೀಡಬೇಕು ಎನ್ನುವ ಆಲೋಚನೆಗಳು ಆರಂಭವಾಗಿ ಪಠ್ಯಪುಸ್ತಕಗಳ ರಚನೆ ಮೊದಲಾಯಿತು[೬]. ಕನ್ನಡ ಕ್ರಮಿಕ ಪುಸ್ತಕಗಳು ಪ್ರಕಟಗೊಂಡವು. ಮಿಶನರಿಗಳು ವಿದ್ಯಾ ಸಂಸ್ಥೆಗಳನ್ನು ಆರಂಭಿಸಿದರು[೭]. ಇದರ ಜೊತೆಜೊತೆಯಲ್ಲಿಯೆ ದೇಶೀಯ ಶಿಕ್ಷಣ ಸಂಸ್ಥೆಗಳೂ ಪ್ರಾರಂಭವಾದವು. ಈ ಮೂಲಕ ಶೈಕ್ಷಣಿಕವಾಗಿ ಸ್ಥಳೀಯ ಭಾಶೆಯನ್ನು ಒಂದು ಪಠ್ಯವಾಗಿ

ಕಲಿಯಬೇಕಾದ ಸಂದರ್ಭ ಒದಗಿ ಬಂದಿತ್ತಾದ್ದರಿಂದ, ಹೀಗೆ ಸಂಪಾದಿಸಲಾದ ಪಠ್ಯಗಳು ಪಠ್ಯಕ್ರಮಗಳಲ್ಲಿ ಪ್ರವೇಶ ಪಡೆಯುವಂತಾಯಿತು.

**೪.೩ ಕಾಲೇಜು ಶಿಕ್ಷಣದ ಮೊದಲ ದಿನಗಳು;**

೧೮೫೪ರ ವುಡ್‌ನ ವರದಿಯ ಪ್ರಕಾರ ಇಂಗ್ಲಿಶ್ ಭಾಶೆಯ ಮೂಲಕ ಶಿಕ್ಷಣ ಎನ್ನುವುದು ಮತ್ತಷ್ಟು ಪ್ರಾಮುಖ್ಯತೆ ಪಡೆಯಿತಾದರೂ, ಇಂಗ್ಲಿಶ್ ಹಾಗೂ ದೇಶೀ ಭಾಶೆಗಳನ್ನು ಜೊತೆಜೊತೆಯಾಗಿ ಬಳಸಬೇಕೆಂದು ಕಡ್ಡಾಯ ಮಾಡಲಾಯಿತು. ಈ ಸಂದರ್ಭದಲ್ಲಿ ಪ್ರಾಥಮಿಕ ಶಾಲಾ ಶಿಕ್ಣ, ಮಾಧ್ಯಮಿಕ ಶಾಲಾ ಶಿಕ್ಷಣ(ಇದು ಮುಂದೆ ಮೆಟ್ರಿಕ್ ಮತ್ತು ಇಂಟರ್‌ಮೀಡಿಯಟ್ ಶಿಕ್ಷಣವೆಂದಾಯಿತು) ಮತ್ತು ಕಾಲೇಜು ಶಿಕ್ಷಣದ ಹಂತಗಳು ಮೊದಲಿಗೆ ಜಾರಿಗೆ ಬಂದವು. ಭಾರತೀಯ ಶಿಕ್ಷಣದ ಸಾರ್ವತ್ರಿಕ ಜವಾಬ್ಧಾರಿಯನ್ನು ಸಂಪೂರ್ಣವಾಗಿ ವಹಿಸಿಕೊಳ್ಳುವುದರ ಮೂಲಕ ಬ್ರಿಟಿಶ್ ಆಡಳಿತ ವುಡ್ ವರದಿಯ ಪ್ರಕಾರ ಭಾರತಿಯ ಭಾಶೆಗಳ ಮಹತ್ವವನ್ನು ಒಪ್ಪಿಕೊಂಡಿತು. ಅದರೊಂದಿಗೆ ಅಧೋಮುಖ ಶೋಧಕ ಸಿದ್ಧಾಂತ(ಮೇಲ್ವರ್ಗಗಳಿಂದ ಕೆಳವರ್ಗಕ್ಕೆ ಶಿಕ್ಷಣ ಪ್ರವಹಿಸುತ್ತದೆನ್ನುವ)ವನ್ನು ಕೈಬಿಡಲಾಯಿತು. ಇದಲ್ಲದೆ **ದೇಶೀ ಭಾಶೆಗಳಲ್ಲಿ ಯೋಗ್ಯವಾದ ಪಠ್ಯಪುಸ್ತಕಗಳನ್ನು ಒದಗಿಸಬೇಕು, ದೇಶೀ ಭಾಶಾ ಸಾಹಿತ್ಯಕ್ಕೆ ಯೋಗ್ಯ ಪುರಸ್ಕಾರ ನೀಡಬೇಕು** ಎಂಬ ಶಿಫಾರಸ್ಸನ್ನು ವುಡ್ ತನ್ನ ವರದಿಯಲ್ಲಿ ಮಾಡುತ್ತಾನೆ. ಇದು ಸ್ಥಳೀಯವಾದ ಪ್ರಾಚೀನ ಸಾಹಿತ್ಯ ರಚನೆಗಳ ಸಂಶೋಧನೆಗೆ ನಾಂದಿ ಆಯಿತು. ಇದನ್ನು ಹಾವನೂರರು ಆಧುನಿಕ ಶಿಕ್ಷಣದ ಎರಡನೆ ಘಟ್ಟ ಎಂದು ಗುರುತಿಸುತ್ತಾರೆ; ಈ ಸಂದರ್ಭದಲ್ಲಿ ಭಾರತೀಯರಿಗೆ ಪಾಶ್ಚಾತ್ಯ ವಿದ್ಯೆಯನ್ನು ನೀಡುವುದು ಸೂಕ್ತ ಎಂದು ನಿರ್ಧಾರವಾಗುತ್ತದೆ. ಇಡೀ ದೇಶಕ್ಕೆ ಅನ್ವಯಿಸುವಂತ ಏಕರೂಪದ ಶಿಕ್ಷಣ ಯೋಜನೆ ಸಿದ್ಧವಾಗಿ Department of puplic instruction ಶಿಕ್ಷಣ ಖಾತೆಯು ಪ್ರತಿ ಪ್ರಾಂತದಲ್ಲಿ ಅಸ್ತಿತ್ವಕ್ಕೆ ಬಂದಿತು. ಆ ಸಂದರ್ಭದಲ್ಲಿ, ಪ್ರಾಥಮಿಕ, ಮಾಧ್ಯಮಿಕ ಮತ್ತು ಉನ್ನತ ಶಿಕ್ಷಣದ ಹಂತಗಳು ಸ್ಪಶ್ಟವಾಗಿ ರೂಪುಗೊಂಡವು. ೧೮೫೭ರಲ್ಲಿ ಕಲ್ಕತ್ತ, ಮದ್ರಾಸ್ ಮತ್ತು ಮುಂಬಯಿಗಳಲ್ಲಿ ವಿಶ್ವವಿದ್ಯಾಲಯಗಳು ಆರಂಭವಾದವು. ೧೮೭೫ರಲ್ಲಿ ಬೆಂಗಳೂರಿನ ಹೈಸ್ಕೂಲು ಸೆಂಟ್ರಲ್ ಕಾಲೇಜಾಗಿ ಮಾರ್ಪಾಡಾಯಿತು. ೧೯೧೬ರಲ್ಲಿ ಮೈಸೂರು ವಿಶ್ವವಿದ್ಯಾಲಯ ಆರಂಭವಾಗುವವರೆಗೂ ಮೈಸೂರು ಪ್ರಾಂತದ ಕನ್ನಡ ಅಭ್ಯಾಸವೆಲ್ಲ ಮದ್ರಾಸ್ ಯೂನಿವರ್ಸಿಟಿಯ ಆಶ್ರಯದಲ್ಲಿಯೆ ನಡೆಯುತ್ತಿತ್ತು. ಕನ್ನಡ ಮತ್ತು ಸಂಸ್ಕೃತ ಭಾಶೆಗಳ ಅಭಿವೃದ್ಧಿಯ ಅಭಿಲಾಶೆಗಳ ಕಾರಣವಾಗಿ ೧೮೮೬ರಲ್ಲಿ ಮೈಸೂರಲ್ಲಿ ಭಾಶೋಜ್ಜೀವಿನಿ ಸಭಾ ಮತ್ತು

ಬೆಂಗಳೂರಲ್ಲಿ ೧೮೮೯ರಲ್ಲಿ ಸಂಸ್ಕೃತ ವಿದ್ಯಾಲಯ ಸ್ಥಾಪನೆಯಾಯಿತು[೧೦]. ಈ ಹಿನ್ನೆಲೆಯಲ್ಲಿ ಮುಂದೆ, ಮಿಶನರಿ ವಿದ್ವಾಂಸರು ಮತ್ತು ಸ್ಥಳೀಯ ಸಂಸ್ಕೃತ ವಿದ್ವಾಂಸರ ಶೋಧನೆಯ ಫಲವಾದ ಕನ್ನಡ ಸಾಹಿತ್ಯ ಎನ್ನುವ ವಿಫುಲ ರಾಶಿಯನ್ನು ಚಾರಿತ್ರಿಕವಾಗಿ 'ಜಾತಿ' ಅಥವಾ 'ಧರ್ಮ'ದ ಪರಿಕಲ್ಪನೆಗಳಡಿಯಲ್ಲಿ ವಿಂಗಡಿಸಲಾದದ್ದನ್ನು ಈ ಹಿನ್ನೆಲೆಯಲ್ಲಿಯೇ ನಾವು ಗಮನಿಸಿಕೊಳ್ಳಬೇಕಾಗುತ್ತದೆ.

**೪.೪ ಆಧುನಿಕ ಶಿಕ್ಷಣ ವ್ಯವಸ್ಥೆಯೊಳಕ್ಕೆ ದೇಶೀ ವಿದ್ವಾಂಸರ ಪ್ರವೇಶ;**

೧೮೯೧ರ ಹೊತ್ತಿಗೆ ಮೈಸೂರು ಸಂಸ್ಥಾನದಲ್ಲಿ ಬ್ರಾಹ್ಮಣ ಜನಾಂಗದ ಪುರುಶರಲ್ಲಿ ಶೇಕಡಾ ೬೩.೮ರಶ್ಟು ಮಂದಿ ಅಕ್ಶರಸ್ಥರಾಗಿದ್ದರು ಎಂದು ಇತಿಹಾಸ ತಜ್ನ ಎಸ್.ಚಂದ್ರಶೇಖರ್(೨೦೦೬) ಬರೆಯುತ್ತಾರೆ. ಶಿಕ್ಶಣ ಸಂಸ್ಥೆಗಳು ಹೆಚ್ಚಾದಂತೆಲ್ಲ ಪಠ್ಯಪುಸ್ತಕಗಳನ್ನು ನಿರ್ಧರಿಸಲು ೧೮೬೩-೬೪ ರ ಸಮಯದಲ್ಲಿ ಸಿ.ರಂಗಾಚಾರ್ಲು ಮತ್ತು ಬಿ.ಎಲ್.ರೈಸ್ ಒಳಗೊಂಡ ಸಮಿತಿಯನ್ನು ನೇಮಿಸಲಾಗುತ್ತದೆ. ಈ ಕಾರಣವಾಗಿ ೧೮೮೪ರಲ್ಲಿ 'ಪ್ರಾಚ್ಯವಸ್ತು ಸಂಶೋಧನಾ ಕಾರ್ಯಾಲಯ ಮತ್ತು ೧೮೮೬ರಲ್ಲಿ ಓರಿಯಂಟಲ್ ಲೈಬ್ರರಿ ಸ್ಥಾಪಿತವಾಗುತ್ತವೆ. ಮುಂದೆ ೧೮೮೮ರಲ್ಲಿ ಮೈಸೂರು ಸಂಸ್ಥಾನದ ಶಿಕ್ಶಣದ ಜವಾಬ್ದಾರಿಯನ್ನು ಎಚ್.ಜೆ.ಬಾಬ ವಹಿಸಿಕೊಂಡಾಗ, ಆಗಿನ ಹಿರಿಯ ಲೇಖಕರೆಂದು ಮನ್ನಣೆ ಪಡೆದಿದ್ದ ಟಿ.ಎಸ್.ವೆಂಕಣ್ಣಯ್ಯ, ಬಿ.ವೆಂಕಟನಾರಣಪ್ಪ, ಡಿ.ವಿ.ಜಿ, ಎಂ.ಎ.ರಾಮಾನುಜಯ್ಯಂಗಾರ್ ಮೊದಲಾದವರ ಪ್ರವೇಶವಾಗುತ್ತದೆ. ಉತ್ತಮ ಮಟ್ಟದ ಪಠ್ಯಪುಸ್ತಕಗಳು ಹೊರಡುವುದಕ್ಕೆ ಇದು ಸಕಾರಣವಾಯಿತು. ಮುಂಬಯಿ ಕರ್ನಾಟಕದಲ್ಲಿ ಪಠ್ಯಪುಸ್ತಕಗಳ ನಿರ್ಮಿತಿಗಾಗಿ ವಿಲಿಯಂ ಅಲೆನ್ ರಸೆಲ್‌ರ ಉಸ್ತುವಾರಿಯಲ್ಲಿ ವೆಂಕಟರಂಗೊ ಕಟ್ಟಿ(ಕೆನರೀಸ್ ಟ್ರಾನ್ಸಲೇಟರ್) ಮತ್ತು ಗಂಗಾಧರ ಮಡಿವಾಳೇಶ್ವರ ತುರಮರಿ ತೊಡಗಿಸಿಕೊಂಡರು[೧೧] ಎಂದು ಹಾವನೂರರು ದಾಖಲಿಸುತ್ತಾರೆ. ಪಠ್ಯಗಳಾದ ಕಾರಣದಿಂದ ಅನೇಕ ಹಳೆಯ ಕಾವ್ಯಗಳು, ಕಾವ್ಯ ಭಾಗಗಳು ಮತ್ತು ವ್ಯಾಕರಣ[೧೨] ಗ್ರಂಥಗಳ ಅಭ್ಯಾಸ ತೀವ್ರವಾಗಿ ನಡೆಯುತ್ತದೆ. ಮುಲ್ಕೀ ಪರೀಕ್ಶೆಯ ಮಟ್ಟದಲ್ಲಿದ್ದವರಿಗಾಗಿ ರಾಜಶೇಖರ ವಿಳಾಸ, ಜೈಮಿನಿ ಭಾರತಗಳ ಜೊತೆಗೆ ಶಬ್ದಮಣಿದರ್ಪಣ, ಶಬ್ದಸಿದ್ಧಿ ನಿಬಂಧ(Treatise on Etymology) ಮೊದಲಾದವುಗಳು ಪಠ್ಯಗಳಾದವು. ಧಾರವಾಡದ ಕನ್ನಡ ಟ್ರೈನಿಂಗ್ ಕಾಲೇಜು, ೧೯೧೬ರಲ್ಲಿ ಕರ್ನಾಟಕ ಕಾಲೇಜು ಆರಂಭವಾಗುವವರೆಗೆ ಈ ಜವಾಬ್ದಾರಿಯನ್ನು ನಿರ್ವಹಿಸಿತು. ಈ ಮಧ್ಯೆ, ದೇಶಭಾಶೆಗಳ ಶಿಕ್ಶಣ ಕಾಲೇಜು ಮಟ್ಟದಲ್ಲಿ ಅಗತ್ಯವಿಲ್ಲ ಎಂಬ ಧೋರಣೆಯೂ ಇದ್ದದ್ದರಿಂದಾಗಿ

೧೮೬೬ರಿಂದಲೆ ಮುಂಬೈ ವಿಶ್ವವಿದ್ಯಾಲಯದಲ್ಲಿ ನಿಲ್ಲಿಸಲಾದ ಕನ್ನಡ ಅಧ್ಯಯನವು ಮತ್ತೆ ಆರಂಭವಾಗುವುದು ೧೯೦೧ಕ್ಕೆ[೧೩]. ಇಂಥ ಸಂದರ್ಭದಲ್ಲಿ ಟ್ರೈನಿಂಗ್ ಕಾಲೇಜಿನ ಶಿಕ್ಷಕರೂ, ವಿದ್ಯಾರ್ಥಿಗಳೂ ಕನ್ನಡದ ಪರಂಪರೆಯನ್ನು ಕಾಯ್ದುಕೊಂಡು ಬರುತ್ತಾರೆ ಎಂದು ರಾ.ಯ.ಧಾರವಾಡಕರರು ಬರೆಯುತ್ತಾರೆ(ರಾ.ಯ.ಧಾರವಾಡಕರ ೧೯೭೫, ಪುಟ೮೩).

ಮದ್ರಾಸ್ ವಿಶ್ವವಿದ್ಯಾಲಯದ ಅಧೀನದಲ್ಲಿದ್ದ ಮೈಸೂರು ಸಂಸ್ಥಾನ, ದಕ್ಷಿಣ ಕನ್ನಡ ಮತ್ತು ಬಳ್ಳಾರಿ ಜಿಲ್ಲೆಯ ಶೈಕ್ಷಣಿಕ ಸಂಸ್ಥೆಗಳು ಪಠ್ಯಕ್ರಮಗಳಿಗಾಗಿ, ಅಂದಿನ ಪ್ರಕಾಶನ ಸಂಸ್ಥೆಗಳಾದ ಕರ್ನಾಟಕ ಕಾವ್ಯಮಂಜರಿ, ಕರ್ನಾಟಕ ಗ್ರಂಥಮಾಲೆ ಮತ್ತು ಬಿಬ್ಲಿಯಾಥಿಕ ಕರ್ನಾಟಕ ಇವು ಪ್ರಕಟಿಸುತ್ತಿದ್ದ ಹೊಸ ಪ್ರಕಟಣೆಗಳನ್ನು ಅವಲಂಭಿಸಿದವು. ಆದ್ದರಿಂದಾಗಿ, ಇಂಥ ಪ್ರಕಟಣೆಗಳು ದೇಶೀಯ ಪಂಡಿತರಿಂದ ಪರಿಶೋಧನೆ, ಪರಿಶ್ಕರಣೆಗೆ ಒಳಪಟ್ಟು ತೀವ್ರಗತಿಯಲ್ಲಿ ಪ್ರಕಟವಾದವು. ಸಂಸ್ಕೃತ, ಕನ್ನಡಗಳಲ್ಲಿಯ ಅನೇಕ ಪ್ರಾಚೀನ ಕೃತಿಗಳನ್ನು ಟೀಕೆ, ಟಿಪ್ಪಣಿ, ಗದ್ಯಾನುವಾದಗಳೊಡನೆ ಸಂಪಾದಿಸಿ ಮುದ್ರಿಸಲಾಯಿತು. ಈ ಸಂದರ್ಭವನ್ನು ಹಾವನೂರರು 'ಸ್ವಧರ್ಮಾಭಿಮಾನ, ಪಠ್ಯಪುಸ್ತಕಗಳ ಬೇಡಿಕೆ ಮತ್ತು ಪರಂಪರಾಗತವಾಗಿ ತಾವು ಕಂಡ ವಿದ್ಯೆಯನ್ನು ಜನತೆಗೆ ತಿಳಿಸಿಕೊಡಬೇಕೆನ್ನುವ ಅಪೇಕ್ಷೆ- ಇವು ಇಂಥ ಕೃತಿಗಳ ಪ್ರಕಟಣೆಗೆ ಪ್ರೇರಣೆಯಿತ್ತವು ಎಂದು ಬರೆಯುತ್ತಾರೆ(ಶ್ರೀನಿವಾಸ ಹಾವನೂರ ೨೦೦೦, ಪುಟ೩೩೩). ಈ ದೃಷ್ಟಿಯಿಂದ, ಹೊಸಗನ್ನಡ ಸಾಹಿತ್ಯೋದಯ ಕಾಲದಲ್ಲಿ ಭಾಶಾಭ್ಯಾಸವು ವಿದೇಶಿಯರು ಮತ್ತು ದೇಶಿಯ ವಿದ್ಯಾರ್ಥಿಗಳ ಮೂಲಕ ಒಂದು ವ್ಯಾಪಕ ಚಟುವಟಿಕೆಯಾಗಿದ್ದನ್ನು, ಮತ್ತು ಈ ಕಾರಣವಾಗಿ ವ್ಯಾಕರಣ[೧೪] ಮತ್ತು ವಾಚನಕ್ಕೆ ಸಹಾಯವಾಗುವ ಪುಸ್ತಕಗಳು ವ್ಯಾಪಕವಾಗಿ ರಚನೆಯಾಗುವುದನ್ನು ಗ್ರಹಿಸಬೇಕಾಗುತ್ತದೆ. ಇದನ್ನು ಹಾವನೂರರು ಹೊಸಗನ್ನಡ ಸಾಹಿತ್ಯದ ಆರಂಭಕಾಲದ ಪ್ರೇರಣಶಕ್ತಿ ಎಂದು ಚರ್ಚಿಸುತ್ತಾರೆ[೧೫]. ಈ ಹಿನ್ನೆಲೆಯಲ್ಲಿ, ಸಂಸ್ಕೃತ ಪರಂಪರೆಯ ದೇಶೀ ಪಂಡಿತರು ವಸಾಹತುವಿನ **ಯಜಮಾನಿಕೆ**ಯ ಎದುರಿಗೆ ತನ್ನನ್ನು ಸ್ಥಳೀಯವಾಗಿ ಸಂಘಟಿಸುವ ಈ ಚಟುವಟಿಕೆಯು ಮುಂದೆ **ಪರ್ಯಾಯ ಯಜಮಾನಿಕೆ**ಯಾಗಿ ಆಧುನಿಕ ಸಮಾಜದ ಸಂರಚನೆಗಳಲ್ಲಿ ಮಹತ್ವವನ್ನು ಪಡೆದುಕೊಂಡಿತು ಎಂಬುದನ್ನು ಗ್ರಹಿಸಬೇಕಾಗುತ್ತದೆ.

೧೮೮೨ರ ಹಂಟರ್ ಆಯೋಗವು ಧಾರ್ಮಿಕ ಶಿಕ್ಷಣದ-ಭಾರತೀಯವೂ ಸೇರಿದಂತೆ- ವಿಚಾರದಲ್ಲಿ ಉದಾರವಾಗಿ ನಡೆದುಕೊಳ್ಳುವುದರಿಂದಾಗಿ ಪಠ್ಯಪುಸ್ತಕಗಳ ವಿಶಯವಾಗಿ ಆಯೋಗದ ನಿರ್ಣಯವು ಮಿಶನರಿಗಳ ವಿರುದ್ಧವಾಯಿತು. ಆ ಹೊತ್ತಿಗೆ ಮಿಶನರಿಗಳು ತಮ್ಮ ಧಾರ್ಮಿಕ ಬೋಧನೆಗೆ ಉಪಯೋಗವಾಗುವಂತೆ ತಮಗೆ ಸರಿಯೆನಿಸಿದ ತಮ್ಮದೇ ಆದ

ಪಠ್ಯಪುಸ್ತಕಗಳನ್ನು ತಯಾರಿಸಿದ್ದರಾದ್ದರಿಂದ ಆ ಪುಸ್ತಕಗಳನ್ನು ಉಪಯೋಗಿಸಲು ಸಮ್ಮತಿಯನ್ನು ನಿರಾಕರಿಸಲಾಯಿತು. **ಪಠ್ಯಪುಸ್ತಕ ಸಮಿತಿ ಶಿಫಾರಸು ಮಾಡಿದ ಪುಸ್ತಕಗಳನ್ನು ಮಾತ್ರವೇ ಉಪಯೋಗಿಸಬೇಕು** ಎಂದು ಹಂಟರ್ ವರದಿಯು ಶಿಫಾರಸು ಮಾಡಿತು.[೧೬]' ಆದರೆ, ಕಲಿಕೆಯ ಮಾಧ್ಯಮದ ವಿಚಾರದಲ್ಲಿ ಸ್ಥಳೀಯ ಭಾಷೆಗಳು ನಿರ್ಲಕ್ಷಿಸಲ್ಪಟ್ಟದ್ದರಿಂದಾಗಿ ಮಾಧ್ಯಮಿಕ ಶಿಕ್ಷಣ(ಈಗಿನ ಪ್ರೌಢ ಮತ್ತು ಪ್ರಿ ಯೂನಿವರ್ಸಿಟಿ ಶಿಕ್ಷಣ)ದ ಮುಖ್ಯಗುರಿ ಇಂಗ್ಲಿಶ್ ಅಭ್ಯಾಸವೆ ಆಯಿತು. ಈ ವಿದ್ಯಮಾನವು, ಏಕೀಕರಣೋತ್ತರದಲ್ಲಿ ಸ್ಥಳೀಯ ಆಡಳಿತ ಮತ್ತು ಶಿಕ್ಷಣದಲ್ಲಿ ಸೃಷ್ಟಿಯಾದ ಗೊಂದಲಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡಬೇಕಾದ ಅಗತ್ಯವಿದೆ.

**೪.೫ ವಿಶ್ವವಿದ್ಯಾಲಯ ಮತ್ತು ಕಾಲೇಜು ಶಿಕ್ಷಣದ ಸುಧಾರಣೆಗಳು;**

ಈ ಎಲ್ಲ ಬೆಳವಣಿಗೆಗಳಿಂದಾಗಿ, ಇಪ್ಪತ್ತನೆಯ ಶತಮಾನದ ಆರಂಭದ ಹೊತ್ತಿಗೆ, ಶಿಕ್ಷಣದ ಧೋರಣೆ ಮತ್ತು ದೋಶಗಳನ್ನು ಕುರಿತು ತೀವ್ರವಾದ ಚರ್ಚೆ ನಡೆಯುವಂತಾಯಿತು. ೧೯೦೨ರಲ್ಲಿ ಉನ್ನತ ಶಿಕ್ಷಣ ಸುಧಾರಣೆಯ ಸಲುವಾಗಿ ಭಾರತೀಯ ವಿಶ್ವವಿದ್ಯಾಲಯ ಆಯೋಗ ನೇಮಕವಾಯಿತು. ಅದರ ಶಿಫಾರಸುಗಳ ಮೇರೆಗೆ ೧೯೦೪ರಲ್ಲಿ ಭಾರತೀಯ ಬ್ರಿಟಿಶ್ ಸರ್ಕಾರ ಆಜ್ನತಾ ಪತ್ರವೊಂದನ್ನು ಹೊರಡಿಸಿ ಆ ಮೂಲಕ ಭಾರತೀಯ ವಿಶ್ವವಿದ್ಯಾಲಯ ಕಾಯ್ದೆಯೊಂದನ್ನು ರೂಪಿಸಿ ಜಾರಿಗೊಳಿಸಿತು. ಇದೇ ಸಂದರ್ಭದಲ್ಲಿ ವಿಶ್ವವಿದ್ಯಾಲಯಗಳ ಆಡಳಿತ ಸುಧಾರಣೆಯಲ್ಲಿ ಬದಲಾವಣೆಗಳು ಬರುವುದರೊಂದಿಗೆ ಶಿಕ್ಷಣದ ಗುಣಮಟ್ಟದ ಸುಧಾರಣೆಗಾಗಿ ಮೂರು ವರುಶಗಳ ಪದವಿ ಕೋರ್ಸುಗಳನ್ನು ಆರಂಭಿಸಲಾಯಿತು. ಈ ಸಂದರ್ಭದಲ್ಲಿ, ಶಾಲಾ ಹಂತದಲ್ಲಿ ನಗರ ಮತ್ತು ಗ್ರಾಮಾಂತರ ಶಾಲೆಗಳಿಗೆ ಪ್ರತ್ಯೇಕವಾದ ಪಠ್ಯಕ್ರಮಗಳಿಡುವ ಬಗ್ಗೆಯೂ, ಪಠ್ಯಕ್ರಮದ ಗುಣಮಟ್ಟವನ್ನು ಎತ್ತರಿಸುವ ಬಗ್ಗೆಯೂ ಚರ್ಚೆ ಮತ್ತು ಪರಿಶೀಲನೆಗಳು ನಡೆದು ಶಿಕ್ಷಣ ಪದ್ಧತಿಯನ್ನು ಮತ್ತಷ್ಟು ಆಧುನಿಕಗೊಳಿಸಿಕೊಳ್ಳಬೇಕೆಂಬ ಶಿಫಾರಸುಗಳು ಜಾರಿಗೆ ಬಂದವು.

೧೯೧೩ರಲ್ಲಿ ಮತ್ತೊಂದು ಆಜ್ನಾ ಪತ್ರವನ್ನು ಹೊರಡಿಸಿದ ಭಾರತೀಯ ಬ್ರಿಟಿಶ್ ಸರ್ಕಾರ, ಪ್ರತಿಯೊಂದು ಪ್ರಾಂತದಲ್ಲಿ ಒಂದೊಂದು ಪ್ರತ್ಯೇಕ ವಿಶ್ವ ವಿದ್ಯಾಲಯವನ್ನು ಸ್ಥಾಪಿಸುವುದೂ ಸೇರಿದಂತೆ, ವಿಶ್ವವಿದ್ಯಾಲಯಗಳಲ್ಲಿ ಬೋಧನಾ ಕಾರ್ಯವನ್ನು ಕೈಗೊಳ್ಳುವಂತೆ ಪ್ರೋತ್ಸಾಹಿಸಿತು. ಈ ಸಂದರ್ಭದಲ್ಲಿ, ಗ್ರಾಮಾಂತರ ಪ್ರದೇಶಗಳಲ್ಲಿ ಕಾಲೇಜುಗಳನ್ನು ಅಭಿವೃದ್ಧಿಪಡಿಸುವುದನ್ನೂ ಶಿಫಾರಸು ಮಾಡಲಾಯಿತು. ೧೯೧೭ರ ಮೈಕೆಲ್ ಸ್ಯಾಡ್ಲರ್ ಅಧ್ಯಕ್ಷತೆಯ ಕಲ್ಕತ್ತಾ ವಿಶ್ವವಿದ್ಯಾಲಯ

ಆಯೋಗವು(ಸ್ಯಾಡ್ಲರ್ ಕಮಿಶನ್) ದೇಶದ ವಿಶ್ವವಿದ್ಯಾಲಯ ಶಿಕ್ಷಣ ಸ್ವರೂಪದಲ್ಲಾದ ಬದಲಾವಣೆಗಳಿಗೆ ಒಂದು ಪ್ರಮುಖವಾದ ತಿರುವನ್ನು ತಂದುಕೊಟ್ಟಿತು. ಸ್ಯಾಡ್ಲರ್ ಆಯೋಗವು ಉನ್ನತ ಶಿಕ್ಷಣ ಮತ್ತು ಇದಕ್ಕೂ ಪೂರ್ವದಲ್ಲಿ ನಡೆಯುವ ಶಿಕ್ಷಣ ಸಂಬಂಧಗಳನ್ನು ಸ್ಪಷ್ಟವಾಗಿ ರೂಪಿಸಲು ಪ್ರಯತ್ನಿಸಿರುವುದನ್ನು ಕಾಣಬಹುದಾಗಿದೆ.

- ಇಂಟರ್‌ಮಿಡಿಯಟ್ ಶಿಕ್ಷಣದ ನಂತರ ವಿಶ್ವವಿದ್ಯಾಲಯ ಪ್ರವೇಶಕ್ಕೆ ಅವಕಾಶ ಮಾಡುವುದು(ಮೊದಲು ಮೆಟ್ರಿಕ್ ಪರೀಕ್ಷೆಯ ನಂತರವಿತ್ತು),
- ಇಂಟರ್‌ಮೀಡಿಯೆಟ್ ಕಾಲೇಜುಗಳನ್ನು ಆರಂಭಿಸುವುದು-ಇಲ್ಲಿ ಆರ್ಟ್ಸ್, ಸೈನ್ಸ್, ವಾಣಿಜ್ಯ, ಕೃಶಿ, ಇಂಜನಿಯರಿಂಗ್, ವೈದ್ಯಶಾಸ್ತ್ರಗಳ ಬೋಧನೆಯನ್ನು ಜಾರಿಗೊಳಿಸುವುದು,
- ಮಾಧ್ಯಮಿಕ(ಮೆಟ್ರಿಕ್-ಹೈಸ್ಕೂಲ್) ಮತ್ತು ಇಂಟರ್‌ಮೀಡಿಯಟ್(ಪಿಯುಸಿ) ಮಂಡಳಿಗಳನ್ನು ರಚಿಸಿ ಪ್ರತ್ಯೇಕವಾಗಿ ಜವಾಬ್ದಾರಿ ವಹಿಸುವುದು. ಇದಕ್ಕಾಗಿ ಈ ಮಂಡಳಿಗಳ ಅಧಿಕಾರೇತರ ಸದಸ್ಯರಲ್ಲಿ ಮೂರು ಜನ ಹಿಂದು, ಮೂರು ಜನ ಮುಸ್ಲಿಮರು ಇರುವಂತೆ ರೂಪಿಸುವುದು,
- ಇಂಟರ್‌ಮೀಡಿಯಟ್ ನಂತರ ಪದವಿ ಕೋರ್ಸ್ ೩ ವರುಶ ಅವಧಿಯದಾಗಿದ್ದು, ಸಾಮಾನ್ಯ ವಿದ್ಯಾರ್ಥಿಗಳಿಗೆ ಪಾಸ್‌ಕೋರ್ಸ್(ನೌಕರಿಯ ಅರ್ಹತೆಯಾಗಿ ಎರಡು ವರುಶಗಳ ಅವಧಿ) ಮತ್ತು ಹೆಚ್ಚಿನ ಯೋಗ್ಯತೆಯ ವಿದ್ಯಾರ್ಥಿಗಳಿಗೆ ಆನರ್ಸ್‌ಕೋರ್ಸ್(ನೌಕರಿ ಮತ್ತು ಮುಂದಿನ ಶೈಕ್ಷಣಿಕ ಅಭ್ಯಾಸಕ್ಕೆ ಅರ್ಹತೆಯಾಗಿ ಮೂರು ವರುಶಗಳ ಅವಧಿ) ಆರಂಭಿಸುವುದು,

ಇದರೊಂದಿಗೆ ಅಕ್ಯಾಡೆಮಿಕ್ ಕೌನ್ಸಿಲ್, ಬೋರ್ಡ್ ಆಫ್ ಸ್ಟಡಿಸ್ ರಚನೆಯಾಗಿ ಪಠ್ಯಕ್ರಮ, ಪರೀಕ್ಷೆಗಳು ಇದರ ವ್ಯಾಪ್ತಿಗೆ ಒಳಪಡಿಸುವುದು ಮೊದಲಾದ ಶಿಫಾರಸುಗಳು ಜಾರಿಗೆ ಬಂದವು. ಇದರಿಂದಾಗಿ ಶಿಕ್ಷಣ 'ಪೂರ್ಣ ಲಾಭ'ದ ಹೆಸರಲ್ಲಿ ಮತ್ತಶ್ಟು ಕ್ರಮಬದ್ಧಗೊಂಡದ್ದನ್ನು, ಈ ನಿಯಮಗಳು ಮುಂದೆ ವಿಶ್ವವಿದ್ಯಾಲಯ ಶಿಕ್ಷಣ ಮತ್ತು ಸಂಶೋಧನೆಗಳಿಗೆ ಕಾರಣವಾಗಿ ಇಡೀ ದೇಶದ ವಿಶ್ವವಿದ್ಯಾಲಯಗಳಿಗೆ ಒಂದು ನಿರ್ಧಿಶ್ಟ ಮಾದರಿ ರೂಪುಗೊಳ್ಳಲು ಕಾರಣವಾದದ್ದನ್ನು ಗಮನಿಸಿಕೊಳ್ಳಬಹುದಾಗಿದೆ.

**೪.೬ ಮೈಸೂರು ವಿಶ್ವ ವಿದ್ಯಾಲಯ ಸ್ಥಾಪನೆ ಮತ್ತು ಕನ್ನಡ ಪಠ್ಯಕ್ರಮದ ಬೆಳವಣಿಗೆ;**

ಕರ್ನಾಟಕದ ಮೊದಲ ವಿಶ್ವವಿದ್ಯಾಲಯವಾದ ಮೈಸೂರು ವಿಶ್ವವಿದ್ಯಾಲಯವು ೧೯೧೬ರಲ್ಲಿ ಶುರುವಾಗುತ್ತದೆ. ೧೯೨೧ರ ಹೊತ್ತಿಗೆ ದೇಶದ ಇತರ ಕಡೆಗಳಲ್ಲಿ ಮತ್ತೂ ಕೆಲವು[೧೬] ವಿಶ್ವವಿದ್ಯಾಲಯಗಳು ಆರಂಭಗೊಂಡು, ಬೋಧನಾ ಕಾರ್ಯಗಳನ್ನು ಕೈಗೊಂಡದ್ದಲ್ಲದೆ ಸ್ನಾತಕೋತ್ತರ ತರಗತಿಗಳನ್ನು ಆರಂಭಿಸುತ್ತವೆ. ೧೯೨೧ರಿಂದ ೧೯೩೬ರವರೆಗೆ ದೇಶದ ಆಡಳಿತದಲ್ಲಿ ಆದ ಬದಲಾವಣೆಗಳಿಂದಾಗಿ[೧೮] ವಿಶ್ವವಿದ್ಯಾಲಯ ಶಿಕ್ಷಣಕ್ಕೆ ಹೆಚ್ಚು ಪ್ರಾಮುಖ್ಯತೆ ದೊರೆತು ದೇಶದಲ್ಲಿ ಮತ್ತೂ ಕೆಲವು ವಿಶ್ವವಿದ್ಯಾಲಯಗಳು ಸ್ಥಾಪನೆಯಾದವು[೧೯]. ಈ ಸಂದರ್ಭದಲ್ಲಿ ಶಿಕ್ಷಣದ ಆಧುನೀಕರಣ ಮತ್ತು ಸಾಹಿತ್ಯದ ಆಧುನಿಕ ಅಧ್ಯಯನ ಒಂದಕ್ಕೊಂದು ಪೂರಕವಾಗಿ ಒಂದು ನಿರ್ದಿಷ್ಟ ಜಾತಿ ಸಮುದಾಯ ಈ ಕಾರ್ಯದೊಳಗೆ ಶೈಕ್ಷಣಿಕವಾಗಿ ಪ್ರವೃತ್ತವಾಗುತ್ತದೆ. ಈ ಕಾರಣದಿಂದಾಗಿ, ಸಂಸ್ಕೃತ ಪರಂಪರೆಯೊಂದು ಇಲ್ಲಿಯವರೆಗೂ ಕನ್ನಡಭಾಶೆ ಮತ್ತು ಸಾಹಿತ್ಯ ಶಿಕ್ಷಣದಲ್ಲಿ ಹೇಗೆ ಮುಖ್ಯಧಾರೆಯಾಗಿ ಪ್ರವಹಿಸುತ್ತಾ ಬಂದಿತು ಎಂಬುದನ್ನು ಆಧುನಿಕ ಪಠ್ಯಕ್ರಮಗಳ ಹಿನ್ನೆಲೆಯಲ್ಲಿ ಗಮನಿಸಿಕೊಳ್ಳುವುದು ಸಾಧ್ಯವಾಗುತ್ತದೆ. ಈ ವಿದ್ಯಮಾನಗಳನ್ನು ಎಚ್.ಎಸ್.ಶ್ರೀಮತಿ[೨೦]ಯವರು ತಮ್ಮ ಹಳಗನ್ನಡ ಸಾಹಿತ್ಯಾಧ್ಯಯನ ಕುರಿತ ಚರ್ಚೆಯಲ್ಲಿ ಹೀಗೆ ಗುರುತಿಸುತ್ತಾರೆ; 'ಮತ-ಧರ್ಮದ ಕಾರಣವಾಗಿ ನಡೆಯುತ್ತಿದ್ದ ಸಾಹಿತ್ಯದ ಓದು ೧೯ನೆ ಶತಮಾನದ ನಡುಭಾಗದ ಹೊತ್ತಿಗೆ ಸಾಹಿತ್ಯಾಧ್ಯಯನದ ಆಧುನಿಕ ಅರ್ಥ ಪಡೆದುಕೊಂಡದ್ದು ಶಿಕ್ಷಣಪದ್ಧತಿಯ ಆಧುನೀಕರಣದ ಭಾಗವಾಗಿ' ಎಂದು. ಜೊತೆಗೆ ಪಾಶ್ಚಾತ್ಯರು ಪ್ರಾದೇಶಿಕ ಭಾಶೆಗಳ ಅಧ್ಯಯನ ಮಾಡಲು ಹೊರಟದ್ದು, ಇದಕ್ಕಾಗಿ ಇಲ್ಲಿನ ಸಾಹಿತ್ಯ ಪ್ರಮುಖ ಎಂದು ಭಾವಿಸಿ ಹಸ್ತಪ್ರತಿಗಳನ್ನು ಒಟ್ಟುಗೂಡಿಸಿದ್ದು, ಇದರೊಂದಿಗೆ ಹಳಗನ್ನಡ ಸಾಹಿತ್ಯಾಧ್ಯಯನ ಆರಂಭವಾದದ್ದನ್ನು ಗುರುತಿಸುತ್ತಾರೆ. 'ಮೊದಲಿಗೆ ಕನ್ನಡ ಕಲಿಯುವ ಅನಿವಾರ್ಯ ಕಾರಣವಾಗಿ ಕನ್ನಡ ವ್ಯಾಕರಣ, ಶಬ್ಧಕೋಶಗಳು ತಯಾರದವು. ಮುಂದೆ ದೇಶೀ ವಿದ್ವಾಂಸರು ಜೊತೆಗೂಡಿ ಈ ಕೆಲಸವನ್ನು ಮುಂದುವರೆಸಿದರು' ಎನ್ನುತ್ತಾರೆ. ಇದರಿಂದಾಗಿ ಹಳೆಯ ಗ್ರಂಥಗಳ ಪರಿಶ್ಕರಣೆಯಾದವು. ಹೊಸ ಶಿಕ್ಷಣ ಕ್ರಮಗಳು ಜಾರಿಗೆ ಬಂದ ಮೇಲೆ ಪಠ್ಯಪುಸ್ತಕಗಳ ರಚನೆಯಾಗಬೇಕಾಗಿದ್ದರಿಂದ ಹಳಗನ್ನಡ ಕಾವ್ಯಗಳ ಪ್ರಕಟಣೆ ಮತ್ತು ಪಠ್ಯಪುಸ್ತಕಗಳಿಗೆ ಪ್ರೋತ್ಸಾಹ ದೊರೆಯಿತು ಎಂದು ಬರೆಯುತ್ತಾರೆ. ಅನಂತರದ ದಿನಗಳಲ್ಲಿ ಇಲ್ಲಿನ ದೇಶೀ ವಿದ್ವಾಂಸರು ಇಲ್ಲಿನ ಸಾಹಿತ್ಯಾಧ್ಯಯನದಲ್ಲಿ ತೊಡಗಿದ್ದು, ಅವರಲ್ಲಿ ಪ್ರಧಾನವಾದ ಒಂದು ಗುಂಪು ಓರಿಯಂಟಲಿಸ್ಟ್ ಧೋರಣೆಯನ್ನೇ ತಾನೂ ಅಷ್ಟಿಷ್ಟು ವ್ಯತ್ಯಾಸಗಳೊಡನೆ

ಮುಂದುವರೆಸಿದ್ದು, ಅಷ್ಟು ಪ್ರಬಲವಲ್ಲದ ಇನ್ನೊಂದು ಗುಂಪು ದೇಶೀಯ ಸಾಹಿತ್ಯದ ಅಧ್ಯಯನ ಮಾಧರಿಗಳನ್ನು ಶೋಧಿಸಲು ತೊಡಗಿದ್ದನ್ನು ದಾಖಲಿಸುತ್ತ 'ಈ ಗುಂಪಿನಲ್ಲಿ ಕೆಲವರು ಆಯ್ಕೆ ಮಾಡಿಕೊಂಡದ್ದು ಸಂಸ್ಕೃತ ಕಾವ್ಯಮೀಮಾಂಸೆಯ ಚೌಕಟ್ಟನ್ನು. ಉಳಿದವರು ದೇಶೀಯ ಸಾಹಿತ್ಯ ತತ್ವದ ಶೋಧನೆಯಲ್ಲಿ ಆಸಕ್ತರಾದರು. ಹೀಗೆ ಓರಿಯಂಟಲಿಸ್ಟ್ ಅಲ್ಲದ ಧೋರಣೆಗಳು ನೇರ ಬ್ರಿಟೀಶ್ ಆಡಳಿತಕ್ಕೆ ಒಳಪಟ್ಟಿದ್ದ ಬೊಂಬಾಯಿ, ಮದರಾಸು ಪ್ರಾಂತಗಳಲ್ಲಿದ್ದ ಕರ್ನಾಟಕದ ಭಾಗಗಳಲ್ಲಿ ಕಂಡುಬಂದರೆ, ಹಳೆಯ ಮೈಸೂರು ಐರೋಪ್ಯ ಮಾದರಿಯೊಡನೆ ಸಹಮತವನ್ನು ಹೊಂದಿತ್ತು[೨೧]' ಎಂದು ಗುರುತಿಸುತ್ತಾರೆ.

೩೦ರ ದಶಕದಲ್ಲಿ ದೇಶದ ರಾಜಕೀಯದಲ್ಲಾಗುತ್ತಿದ್ದ ತೀವ್ರತರವಾದ ಚಟುವಟಿಕೆಗಳ ಕಾರಣವಾಗಿ ನೇಮಕವಾದ ಸೈಮನ್ ಕಮಿಶನ್(೧೯೨೯)ನ ಅಂಗವಾಗಿ ಶಿಕ್ಷಣ ವ್ಯವಸ್ಥೆಯಲ್ಲಾಗುತ್ತಿರುವ ಬದಲಾವಣೆಗಳ ಪರಿಶೀಲನೆಯ ಸಲುವಾಗಿ ಹರ್ಟಾಗ್ ಕಮಿಟಿ[೨೨] ಸ್ಥಾಪನೆಯಾಯಿತು. ಈ ಸಮಿತಿಯು, ವಿಶ್ವವಿದ್ಯಾಲಯಗಳು ಕೇವಲ ಪರೀಕ್ಷೆಗಳನ್ನು ನಡೆಸಿ ಪದವಿಗಳನ್ನು ಕೊಡುವುದರಿಂದ ಅಪವ್ಯಯಕ್ಕೆ ದಾರಿಯಾಗಿದೆ. ಯಾವ ಸರ್ಕಾರಿ ನೌಕರಿಗಳಿಗೆ ವಿಶ್ವವಿದ್ಯಾಲಯದ ಪದವಿ ಅಗತ್ಯವಿಲ್ಲವೊ ಅವುಗಳ ಸಲುವಾಗಿ ಸರ್ಕಾರ ಪ್ರತ್ಯೇಕವಾದ ಪರೀಕ್ಷೆಗಳನ್ನು ನಡೆಸಬೇಕು. ವಿಶ್ವವಿದ್ಯಾಲಯಗಳು ಪ್ರತ್ಯೇಕವಾದ ಎಂಪ್ಲಾಯ್‌ಮೆಂಟ್ ಬ್ಯೂರೋಗಳನ್ನು ತೆರೆದು ನಿರುದ್ಯೋಗಿಗಳಿಗೆ ಸಹಾಯ ಮಾಡಬೇಕು ಎಂಬ ಸಲಹೆಯನ್ನು ಮಾಡಿತು. ಈ ಕಾರಣಕ್ಕಾಗಿ ಮಿಡ್ಲ್‌ಸ್ಕೋಲ್ ಹಂತದಲ್ಲೇ 'ವಿವಿದೋದ್ಯೋಗಿ ಪಠ್ಯಕ್ರಮ'ಗಳಿರಬೇಕೆಂಬ ಶಿಫಾರಸನ್ನು ಮಂಡಿಸಿತು. ೧೯೩೬-೩೭ರ ಅಬಟ್ ಮತ್ತು ವುಡ್ ಕಮಿಟಿ ಸಹ, ಸಾಮಾನ್ಯ ಶಿಕ್ಷಣದ ತಳಹದಿಯ ಮೇಲೆ 'ವೃತ್ತಿ ಶಿಕ್ಷಣ ಕ್ರಮ'ವನ್ನು ಕಟ್ಟಬೇಕೆಂದು ಸಲಹೆ ಮಾಡಿತು. ೧೯೩೭ರಿಂದ ೧೯೪೭ರ ನಡುವೆ ಸ್ವಾಯುತ್ತ ಸರ್ಕಾರಗಳ ಆಡಳಿತವಿದ್ದು ಈ ಅವಧಿಯಲ್ಲಿ ಶೈಕ್ಷಣಿಕವಾಗಿ ಗುರುತಿಸುವಂತಾ ಬದಲಾವಣೆಯೆಂದರೆ, ವಿಶ್ವವಿದ್ಯಾಲಯಗಳಲ್ಲಿ ಸಂಶೋಧನಾ ಪದವಿ(ಪಿಎಚ್‌ಡಿ, ಡಿ.ಲಿಟ್)ಯ ಅಭ್ಯಾಸ ಕ್ರಮಗಳು ಆರಂಭವಾಗಿದ್ದು ಮತ್ತು ಮಾಧ್ಯಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ 'ಭಾರತೀಯ ಭಾಶೆಗಳಲ್ಲಿ ಪಠ್ಯಕ್ರಮ'ಗಳನ್ನು ಈ ಅವಧಿಯಲ್ಲಿ ಸಿದ್ಧಪಡಿಸಲಾಯಿತು ಎನ್ನುವುದು.

**೪.೭ ಕನ್ನಡಸಾಹಿತ್ಯ ಮತ್ತು ಸಂಸ್ಕೃತ ಪರಂಪರೆ ಹಾಗೂ ಕನ್ನಡ ಪಠ್ಯಕ್ರಮ;**

ಆಧುನಿಕದಲ್ಲಿ ಸಾಹಿತ್ಯಕ ಪಠ್ಯಗಳು ಹೇಗೆ ಕನ್ನಡ ಶಿಕ್ಷಣ ಪಠ್ಯಗಳಾಗಿ ಸಮಾವೇಶಗೊಂಡವು ಎಂಬುದರ ತಾತ್ವಿಕತೆಯ ಚಾರಿತ್ರಿಕ ಗ್ರಹಿಕೆಯನ್ನು ಈ ಮೇಲಿನ

ಶೈಕ್ಷಣಿಕವಾದ ಚಾರಿತ್ರಿಕ ವಿದ್ಯಮಾನಗಳು ಕಟ್ಟಿಕೊಡುತ್ತವೆ. ಕನ್ನಡಭಾಶಿಕ ಶಿಕ್ಷಣದ ಮೇಲೆ ಸಾಹಿತ್ಯದ ಸೆಳೆಯೊಂದು ಹೇಗೆ ಆರಂಭವಾಯಿತೆಂಬುದನ್ನು ಇಲ್ಲಿ ಗುರುತಿಸಬಹುದಾಗಿದೆ. ಹಾಗಾಗಿ ಶೈಕ್ಷಣಿಕ ಪದ್ದತಿಯಲ್ಲಿ ಭಾಶಾ ಕಲಿಕೆಯ ಅಂಗವಾಗಿ ಪ್ರವೇಶ ಪಡೆಯತೊಡಗಿದ ಸಾಹಿತ್ಯ ಕೃತಿಗಳನ್ನು ಯಾವ ಎಗ್ಗೂ ಇಲ್ಲದಂತೆ ಅಭ್ಯಾಸಕ್ಕಾಗಿ ನಿಗದಿಪಡಿಸಲಾಗುವ ಪರಿಪಾಠವೊಂದು ಆರಂಭವಾಯಿತು. ಮುಂದಿನ ಹಂತದಲ್ಲಿ ಇದು ಗುಣಾತ್ಮಕವಾಗಿ ಯಾವ ಬದಲಾವಣೆಯನ್ನೂ ಪಡೆಯದೆ ಸಾಹಿತ್ಯ ಕೃತಿಗಳ ಆಯ್ಕೆಯಲ್ಲಿ ವೈವಿಧ್ಯತೆ ಮಾತ್ರ ಕಾಣಿಸಿಕೊಂಡಿತು. ಇದರಿಂದಾಗಿ ಪದವಿ ಹಂತದಲ್ಲಿ ಭಾಶೆಯ ಕಲಿಕೆ ಎನ್ನುವುದು ಅಪ್ರಧಾನವಾಗಿ ಸಾಹಿತ್ಯದ ಅಧ್ಯಯನ ಅಭ್ಯಾಸಗಳೆ ಮುನ್ನೆಲೆಗೆ ಬರುವಂತಾಯಿತು. ಎಚ್.ಎಸ್.ಶ್ರೀಮತಿಯವರು ಹೇಳುವಂತೆ, 'ಈ ಬಗೆಯ ಸಾಹಿತ್ಯಾಧ್ಯಯನದ ಸ್ವರೂಪ, ಉದ್ದೇಶ, ವಿಧಾನ, ಮೌಲ್ಯಮಾಪನ ಮುಂತಾದವುಗಳು ಪ್ರಮಾಣೀಕರಣಗೊಳ್ಳದೆ ಜೀವನಮೌಲ್ಯಗಳ ಬಗೆಗಿನ ಚರ್ಚೆಗೆ ಸಾಧನಗಳಾದವು.' ಸಾಹಿತ್ಯದ ಅಧ್ಯಯನವನ್ನು ವಿಶೇಶವಾಗಿ ಆಯ್ಕೆ ಮಾಡಿಕೊಂಡಾಗಲೂ ಸಹ ಇದಕ್ಕಿಂತ ಹೆಚ್ಚಿನ ಬದಲಾವಣೆಗಳು ಕಂಡುಬರುವುದಿಲ್ಲ. ಇದನ್ನೆ, ಮೈಸೂರು ವಿಶ್ವವಿದ್ಯಾಲಯದಲ್ಲಿ ಸ್ಥಾಪಿಸಿದ 'ಕನ್ನಡ ಪ್ರಕಟಣಾ ಸಮಿತಿ'ಯ ಮೂಲಕ ಮತ್ತಶ್ಟು ಸಾಂಸ್ಥಿಕಗೊಳಿಸಲಾಯಿತು. ಇತರೆ ಸಾಹಿತ್ಯ ಕೃತಿಗಳನ್ನೂ ಸಹ ಜೀವನ ಶಿಕ್ಷಣದ ಸಾಮರ್ಥ್ಯಕ್ಕಾಗಿಯೆ ಶೈಕ್ಷಣಿಕ ಚೌಕಟ್ಟಿನೊಳಗೆ ತರಲಾಯಿತು. ಇದನ್ನು ಶ್ರೀಮತಿಯವರು "ಭಾಶಾ ಶಿಕ್ಷಣಕ್ಕೆ ಸಾಹಿತ್ಯ ಕೃತಿಗಳನ್ನು ಸಾಧನಗಳನ್ನಾಗಿ ಮಾಡುವ ಉದ್ದೇಶ ಇದ್ದಿದ್ದರೂ ಅದು ಕೇವಲ ಅನುಶಂಗಿಕವಾಗಿದ್ದು ಕೃತಿಗಳಲ್ಲಿ ಇರುವ ನೀತಿಪರತೆಯನ್ನು ಬಳಸಿಕೊಳ್ಳಲು ಅಥವಾ ನೀತಿಪರ ವ್ಯಾಖ್ಯಾನಕ್ಕೆ ಗುರಿಪಡಿಸಲು ನಮ್ಮ ಶಿಕ್ಷಣ ತವಕಿಸುತ್ತದೆ" ಎಂದು ವ್ಯಾಖ್ಯಾನಿಸುತ್ತಾರೆ.

ಪಾಶ್ಚಾತ್ಯ ಮಿಶನರಿಗಳು ಪ್ರಾಚೀನ ಕೃತಿಗಳ ಸಂಗ್ರಹ, ಸಂಗೋಪನೆಗೆ ಮುಂದಾದರೆ ಅವರ ಜೊತೆಯಲ್ಲಿ ಕೃತಿಗಳ ಸ್ವರೂಪ ಗ್ರಹಿಕೆಗೆ ನೆರವಾಗಿ ನಿಂತವರು ಸಂಸ್ಕೃತ ಸಾಹಿತ್ಯ ಮತ್ತು ಸಾಹಿತ್ಯ ಚಿಂತನಾ ಪರಂಪರೆಯ ಪರಿಚಯವಿದ್ದ ದೇಶಿ ಪಂಡಿತರು ಎಂದು ಈ ಚರ್ಚೆಯನ್ನು ಬೆಳೆಸುವ ಶ್ರೀಮತಿಯವರು, 'ಈ ಪಂಡಿತವರ್ಗ ತಮ್ಮದೇ ಆದ ಕೃತಿ ವಿವರಣಾ ವಿಧಾನವೊಂದನ್ನು ರೂಪಿಸಲು ಯತ್ನಿಸಿತು' ಎಂದು ವಿಶ್ಲೇಶಿಸುತ್ತಾರೆ[೨೩]. ಟಿ.ಎಸ್. ಎಲಿಯಟ್ಟನ 'ಟ್ರೆಡಿಶನ್ ಅಂಡ್ ಇಂಡುವಿಜ್ಯುಯಲ್ ಟ್ಯಾಲೆಂಟ್' ಲೇಖನವನ್ನು ಇದಕ್ಕೆ ಅನುಗುಣವಾಗಿಯೆ ಇಪ್ಪತ್ತನೆ ಶತಮಾನದ ಉತ್ತರಾರ್ಧದಲ್ಲೂ ಗ್ರಹಿಸಿರುವುದನ್ನು ಚರ್ಚೆಗೆ ಒಳಪಡಿಸುತ್ತಾರೆ. ಹೊಸ

ಆಲೋಚನೆಗಳಿಗೆ ತೆರೆದುಕೊಂಡವರಾದ ಬಿ.ಎಂ.ಶ್ರೀ ಸಹ ಇದರ ಭಾಗವಾಗಿಯೆ ಕನ್ನಡವನ್ನು ಚಿಂತಿಸಿದರು ಎನ್ನುತ್ತ, ಶ್ರೀಯವರು ಇಂಗ್ಲಿಶ್ ಸಾಹಿತ್ಯಾಭ್ಯಾಸದ ಹಿನ್ನೆಲೆಯಿಂದ ಹಳಗನ್ನಡ ಸಾಹಿತ್ಯಾಧ್ಯಯನಕ್ಕೆ ತೊಡಗಿದ ವಿದ್ವಾಂಸರು. ವ್ಯಾಖ್ಯಾನಪರತೆಯಲ್ಲಿ ಶ್ರೀಯವರು ಅಲ್ಲಲ್ಲಿ ಸಂಸ್ಕೃತ ಕಾವ್ಯಮೀಮಾಂಸೆಯ-ಅದರಲ್ಲೂ ರಸಪ್ರಸ್ಥಾನದ-ಪರಿಭಾಷೆಯನ್ನು ಬಳಸುತ್ತಾರೆ. ಈ ಹಿನ್ನೆಲೆಯಲ್ಲಿ ಹಳಗನ್ನಡ ಕಾವ್ಯಗಳ ಅತ್ಯುತ್ತಮ ಭಾಗಗಳೆಂದು ಕನ್ನಡ ವಿಮರ್ಶೆ ಗುರುತಿಸುವುದನ್ನು ಶ್ರೀಯವರ ಆಯ್ಕೆಗಳ ಹಿನ್ನೆಲೆಯಲ್ಲಿ ಗಮನಿಸಬೇಕೆನ್ನುತ್ತಾರೆ(ಎಚ್.ಎಸ್.ಶ್ರೀಮತಿ ೧೯೯೩). ಅಲ್ಲದೆ, ಬೋಧನೆಯಲ್ಲಿ 'ಕೃತಿಯ ಭಾಶಿಕ ಶರೀರವನ್ನು ಸಂಸ್ಕೃತ ಕಾವ್ಯಮೀಮಾಂಸಕರ ಅಲಂಕಾರ, ರೀತಿ ಶೈಲಿ, ಗುಣ ದೋಶ ಹಾಗೂ ಔಚಿತ್ಯ ಪರಿಕಲ್ಪನೆಗಳನ್ನು ಬಳಸಿ ವಿವರಿಸುವುದು. ಸಂಸ್ಕೃತ ವ್ಯಾಖ್ಯಾನ ಪರಂಪರೆಯಿಂದ ಬಂದ ಅನ್ವಯಾರ್ಥ, ತಾತ್ಪರ್ಯಾರ್ಥ ಮಾರ್ಗದ ಅನುಸರಣೆ. ಪಠ್ಯಗಳನ್ನು ಬೋಧಿಸುವಾಗ ಮತ್ತು ಮೌಲ್ಯಮಾಪನ ಹಂತದಲ್ಲಿ ವಿದ್ಯಾರ್ಥಿಗಳಿಂದ ಅಲಂಕಾರಾದಿ ಪರಿಕಲ್ಪನೆಗಳ ಲಕ್ಷ್ಯ-ಲಕ್ಶಣಾದಿ ವಿವರಗಳನ್ನು ಸಮನ್ವಯಗೊಳಿಸಲು ಕೇಳುವುದು, ಸಂಸ್ಕೃತ ಪರಂಪರೆಯಿಂದ ಬಂದ ವಿಚಾರಗಳಾಗಿವೆ. ಹಳಗನ್ನಡ ಸಾಹಿತ್ಯ ಕೃತಿಗಳಿಗೆ ವ್ಯಾಖ್ಯಾನಗಳನ್ನು, ಟೀಕುಗಳನ್ನು ಬರೆಯುವ ಪ್ರವೃತ್ತಿ ಪ್ರಾಚೀನರಲ್ಲಿ ಇದ್ದುದಕ್ಕೆ ಪುರಾವೆಗಳಿಲ್ಲ. ಆದರೆ ಶಿಕ್ಶಣದ ಭಾಗವಾಗಿದ್ದ ವ್ಯಾಕರಣಗಳಿಗೆ ಸಂಸ್ಕೃತ ಟೀಕಾ ಸಾಹಿತ್ಯದ ಮಾದರಿಯನ್ನು ಬಳಸಲಾಗಿದೆ' ಎಂಬುದನ್ನು ತಮ್ಮ ಅಧ್ಯಯನದ ಸಂದರ್ಭದಲ್ಲಿ ಸ್ಪಶ್ಟವಾಗಿ ಗುರುತಿಸಿ ದಾಖಲಿಸುತ್ತಾರೆ. ಪ್ರಸ್ತುತ ಅಧ್ಯಯನ ಸಂದರ್ಭದ ಪಠ್ಯಕ್ರಮ ಕುರಿತಾದ ಚರ್ಚೆಯನ್ನು ಬೆಳೆಸುವಲ್ಲಿ ಇದು ಮಹತ್ವದ ವಿಚಾರವಾಗಿದ್ದು ಈ ಕುರಿತ ಬಿಎಂಶ್ರೀಯ ಚಿಂತನೆಗಳನ್ನು ವಿಶ್ಲೇಶಣೆಗೆ ಒಳಪಡಿಸುತ್ತಲೇ ಇಪ್ಪತ್ತನೇ ಶತಮಾನದ ಕನ್ನಡ ಪಠ್ಯಕ್ರಮದ ವಿದ್ಯಮಾನಗಳ ಬೆಳವಣಿಗೆಯನ್ನು ಇಲ್ಲಿ ಚರ್ಚೆಗೆ ತೆಗೆದುಕೊಳ್ಳಬಹುದಾಗಿದೆ;

ಇಂಗ್ಲಿಶನ್ನು ಪ್ರೀತಿಸುತ್ತಲೇ ಸಂಸ್ಕೃತ ಪರಂಪರೆಯನ್ನು ಕನ್ನಡದ ನೆಪದಲ್ಲಿ ಕಟ್ಟತೊಡಗಿದ ಬಿಎಂಶ್ರೀ ೧೯೧೧ರಲ್ಲಿ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ 'ಕನ್ನಡ ಭಾಶೆಯ ಪ್ರಕೃತ ಸ್ಥಿತಿ ಮತ್ತು ವೃದ್ಧಿಮಾರ್ಗವನ್ನು[vi]'ಕುರಿತು ಹೇಳುವ ಮಾತುಗಳು ಹೀಗಿವೆ;

> ಯಾವ ಯಾವ ಭೇದಗಳಿಂದ ಆರ್ಯಭೂಮಿಯಲ್ಲಿ ಒಗ್ಗಟ್ಟು ಹುಟ್ಟಲಿಲ್ಲವೋ, ಆಯಾ ಭೇದಗಳನ್ನೆಲ್ಲಾ ಸುಟ್ಟು ಬೂದಿಮಾಡಿ ನೀರಿನಲ್ಲಿ ಕಲಸಿಬಿಡಬೇಕು, ಆಚಾರ, ಜಾತಿ, ಮತ, ಎಲ್ಲಾ ಒಂದೇ ಆಗುವಂತೆ ಪ್ರಯತ್ನ ಮಾಡುತ್ತಾ ಹೋಗಬೇಕು. ಇವೆಲ್ಲಕ್ಕೂ ಮೊದಲು ಭಾಶೆ ಒಂದಾಗಬೇಕು.

ಇಡೀ ಇಂಡಿಯಾದ ಜನರನ್ನು ಆರ್ಯರು, ಶೂದ್ರರು ಎಂದು ವಿಭಾಗಿಸಿಕೊಂಡು ನೋಡುವ ಬಿಎಂಶ್ರೀ ಕನ್ನಡ ನೆಲವನ್ನು ಆರ್ಯಭೂಮಿಯಾಗಿಸುವತ್ತ ಯೋಚಿಸುತ್ತಾರೆ. ಆ ಮೂಲಕ ನಾಡು, ನುಡಿಯನ್ನು ಕಟ್ಟುವ ಕಾರ್ಯದಲ್ಲಿ ತೊಡಗಿಸಿಕೊಳ್ಳುತ್ತಾರೆ. ಇದಕ್ಕೆ ಭಾಶೆಯನ್ನು ಮುಖ್ಯ ಅಸ್ತ್ರವನ್ನಾಗಿ ಬಳಸುತ್ತಾ ಹೋಗುತ್ತಾರೆ;

> ಒಂದೇ ಭಾಶೆ ಇರುವುದು ಉತ್ತಮ ಪಕ್ಶವೇ ಸರಿ; ಆ ರೀತಿ ಇರತಕ್ಕ ಜನರು ಪುಣ್ಯವಂತರು, ಆದರೆ ಇದಕ್ಕೆ ಆಯಾ ಜನರ ಚರಿತ್ರೆ ಮೂಲ ಕಾರಣವಾಗಿದೆ. ಯಾವ ದೇಶದಲ್ಲಿ ಒಂದೇ ಜಾತಿಯ ಜನರು ಹೆಚ್ಚುತ್ತಾ ಹೋದರೋ, ಇಲ್ಲವೇ ಕೆಲವರಾದ ಪೂರ್ವನಿವಾಸಿಗಳಿಗೂ ತಮ್ಮ ಭಾಶೆಯನ್ನೇ ಹಿಂದೆಯೇ ಕಲಿಸಿಬಿಟ್ಟರೋ, ಅಲ್ಲಿ ಈಗ ಒಂದೇ ಭಾಶೆ ನಿಂತಿದೆ

ಎಂದು ಒಂದೇ ಜಾತಿ ಮತ್ತು ಒಂದೇ ಭಾಶೆ ಇರಬೇಕು ಎನ್ನುವ ಬಿಎಂಶ್ರೀ, ಈ ಕಾರಣಕ್ಕಾಗಿ ಇಂಗ್ಲಿಶ್ ಮತ್ತು ಸಂಸ್ಕೃತದೊಂದಿಗೆ ಮತ್ತು ಅವುಗಳ ಮೂಲಕ ಕನ್ನಡಭಾಶೆಯನ್ನು **ಪಾಲಿಶ್** ಮಾಡುವ ಗ್ರಹಿಕೆಗಳನ್ನು ಮಂಡಿಸುತ್ತಾ ಹೋಗುತ್ತಾರೆ. ಹೀಗಾಗಿ ಇಂಡಿಯಾದಲ್ಲಿ ವಿದ್ಯಾವಂತನೆನ್ನುವ ಪ್ರತಿಯೊಬ್ಬನೂ 'ಇಂಗ್ಲಿಶ್, ಸಂಸ್ಕೃತ ಮತ್ತು ತನ್ನ ಕಡೆಯ ದೇಶಭಾಶೆ' ಈ ಮೂರನ್ನೂ ಚನ್ನಾಗಿ ತಿಳಿದಿರಬೇಕೆಂದು ಪ್ರತಿಪಾದಿಸುತ್ತಾರೆ. ಈ ಮೂರನ್ನೂ ಕಲಿಸತಕ್ಕ ಭಾರವು ಯೂನಿವರ್ಸಿಟಿಯ ಪಂಡಿತರ ಮೇಲೆಯೂ, ಉಳಿಸಿಕೊಂಡು ತೇಜಸ್ಸನ್ನು ತಂದುಕೊಡುವ ಭಾರವು ವಿದ್ಯಾವಂತರ ಮೇಲೆಯೂ ಇದೆಯೆನ್ನುತ್ತಾರೆ, ಮತ್ತು ಮುಂದುವರಿದು 'ಇಂಗ್ಲಿಶೇನೊ ಪ್ರಬಲವಾಗುತ್ತಿದೆ, ಇಂಗ್ಲಿಶ್ ನಮ್ಮ ಕಾವ್ಯಮಾಲೆಯನ್ನು ಕೈಕೊಟ್ಟು ಎತ್ತಬೇಕು ಮತ್ತು ಸಂಸ್ಕೃತ ಸಾಹಿತ್ಯದಿಂದ ನಮ್ಮ ಕಾವ್ಯಮಾಲೆಗೆ ಇಳಿದಿರುವ ದೋಶಗಳನ್ನು ಪರಿಹರಿಸಬೇಕು' ಎಂದು ವಿವರಿಸುತ್ತಾರೆ. ಆ ಮೂಲಕ ಕನ್ನಡವನ್ನು ಇಂಗ್ಲಿಶ್ ಮತ್ತು ಸಂಸ್ಕೃತಾವಲಂಬಿತ ನೆಲೆಯಲ್ಲಿ ಸಾರ್ವತ್ರಿಕವಾಗಿ ಬಲವಾಗಿಸುವ ಪ್ರಮೇಯಗಳನ್ನು ಕುರಿತು ಮಾತನಾಡುತ್ತಾರೆ;

> ಕನ್ನಡಭಾಶೆ ಪ್ರಬಲವಾಗುವುದಕ್ಕೆ ಸಂಸ್ಕೃತವೇ ಆಧಾರವೆಂದು ಎಲ್ಲರೂ ಬಲ್ಲ ವಿಶಯವಾಗಿದೆ. ಆರ್ಯರು ದಕ್ಶಿಣಕ್ಕೆ ಬಂದು ದ್ರಾವಿಡರಲ್ಲಿ ಉತ್ತಮವಾದ ನಾಗರಿಕತೆಯನ್ನು ಹರಡಿದರು; ಆ ನಾಗರಿಕತೆಗೆ ತಕ್ಕ ಭಾವಗಳಿಗೆ ಶಬ್ಧವನ್ನು ಹೊಂದಿಸಿಕೊಟ್ಟು ಭಾಶೆಯನ್ನು ಪುಶ್ಟಿಮಾಡಿದರು; ಬರಹವನ್ನು ಕಲಿಸಿಕೊಟ್ಟರು; ಕಾವ್ಯಸ್ವರೂಪವನ್ನು ತೋರಿಸಿಕೊಟ್ಟರು; ಆ ಕಾವ್ಯಕ್ಕೆ ಬೇಕಾದ ವೃತ್ತಗಳನ್ನೂ ಅಲಂಕಾರ ವ್ಯಾಕರಣಗಳನ್ನೂ, ಪುರಾಣ ಇತಿಹಾಸಗಳನ್ನೂ ಒದಗಿಸಿಕೊಟ್ಟರು. ಈ ರೀತಿ ಹೊಲದಲ್ಲಿ ಬೆಳೆಮಾಡಿ ನಾಡೆಲ್ಲಾ ಜೀವಕಳೆಯಿಂದ ತುಂಬಿ

> ತುಳುಕಾಡುವಂತೆ ಮಾಡಿಟ್ಟರು. ತಮ್ಮ ಸಂಸ್ಕೃತಭಾಷೆಯ ಮತ್ತು ಕಾವ್ಯದ ಬಲದಿಂದ ದ್ರಾವಿಡ ಜನರಿಗೆ ಲಾಭವನ್ನು ಕಾಣಿಸಿದರೇ ಹೊರತು ನಶ್ಟವೇನೂ ತರಲಿಲ್ಲ. ಅವರ ಭಾಶೆ ಪುಶ್ಟಿಯಾಯಿತು, ಅವರ ಜ್ನಾನ ವೃದ್ಧಿಯಾಯಿತು, ಅವರ ಮತ ಶ್ರೇಶ್ಟವಾಯಿತು.

ಎಂದು ತಮ್ಮ ಪೂರ್ವವನ್ನು, ಕನ್ನಡವನ್ನು ಪೋಶಿಸುವ ದಾತಾರ ನೆಲೆಯಿಂದ ವೈಭವೀಕರಿಸುವ ಶ್ರೀಯು 'ತಾಯಿಬೇರನ್ನು ಕಡಿದು ಮರವನ್ನು ಚಿಗುರಿಸುವುದಕ್ಕೆ ಹೇಗೆ ಆಗಲಾರದೋ ಹಾಗೆಯೇ ನಮ್ಮ ಪೂರ್ವವನ್ನು ಅಳಿಸಿಬಿಟ್ಟು ಭವಿಶ್ಯಕ್ಕೆ ಹಾರುವುದಕ್ಕೆ ಆಗಲಾರದು' ಎಂಬ ನಿರ್ಧಾರವನ್ನು ಮಂಡಿಸುತ್ತಾರೆ. ಇದಕ್ಕಾಗಿ ಹಿಂದಿನ ಸಂಸ್ಕೃತ ಮಾರ್ಗವನ್ನೂ ಮತ್ತು ಈಗಿನ ಇಂಗ್ಲಿಶ್ ಮಾರ್ಗವನ್ನೂ ಗಣನೆಗೆ ತೆಗೆದುಕೊಂಡು 'ಉತ್ತಮ ಪಕ್ಶ'ವನ್ನು ಹಿಡಿಯುವ ಉಪಾಯಗಳನ್ನು ಕಟ್ಟತೊಡಗುತ್ತಾರೆ. ಈ ಹಿನ್ನೆಲೆಯಲ್ಲಿ ಪೂರ್ವ ಕಾವ್ಯಗಳಲ್ಲಿ ಉತ್ತಮ ಭಾಗಗಳನ್ನು 'ಆದುಕೊಂಡು' ಪಠ್ಯಕ್ರಮವಾಗಿಸುವುದನ್ನು ಮಂಡಿಸುತ್ತಾರೆ. ಗ್ರಾಮ್ಯವನ್ನು ಬಿಟ್ಟು 'ವಿದ್ಯಾವಂತ'ರು 'ಉತ್ತಮ ಜಾತಿ'ಯವರೂ ಆಡತಕ್ಕ ಸ್ಪುಟವಾದ ಕನ್ನಡವನ್ನು ಗ್ರಂಥಭಾಶೆಯಾಗಿ ತಿರುಗಿಸುವುದನ್ನು ಪ್ರಸ್ತಾಪಿಸುತ್ತಾರೆ. ಅಲ್ಲದೆ ಇದನ್ನು 'ಅಚ್ಚು ಹಾಕುವುದರಿಂದ'ಲೂ ಮಕ್ಕಳಿಗೆ 'ಕಲಿಸುವುದರಿಂದ'ಲೂ ನೆಲೆಯಾಗಿ ನಿಂತು ಎತ್ತಲೂ ಹರಡುತ್ತದೆ. ಆದ್ದರಿಂದಾಗಿ ಸಂಸ್ಕೃತದಿಂದ ಮತ್ತು ಇಂಗ್ಲಿಶಿನಿಂದ ಗ್ರಹಿಸಿದ ವಿದ್ವಾಂಸರು ಮಿಕ್ಕವರಿಗೆ ಅವರು 'ಆಡುವ ಮಾತಿ'ನಲ್ಲಿ ತಿಳಿಸತಕ್ಕದ್ದೆಂದು ಒತ್ತಾಯಿಸುತ್ತಾರೆ. 'ಭಾವಿಯಲ್ಲಿ ಸೀನೀರು ಸಿಕ್ಕುತ್ತಿರುವಾಗ ಕಡಲಲ್ಲಿ ಹೋಗಿ ಉಪ್ಪುನೀರು ಕುಡಿಯತಕ್ಕದ್ದಲ್ಲ' ಎಂದು 'ಕನ್ನಡ ಮಾತು ತಲೆಯೆತ್ತಬೇಕಾದ ಬಗೆ'ಯನ್ನು ವಿವರಿಸುತ್ತ; ಆದಿಯಿಂದ ಸಂಸ್ಕೃತದ ಶಿಕ್ಶಣದ ಮೂಲಕ ಕಾವ್ಯಮಾಲೆಯನ್ನು ಬೆಳೆಸಿದ ಹಾಗೆ, ದೈವ ಯತ್ನದಿಂದ ಲಭಿಸಿರುವ ಇಂಗ್ಲಿಶಿನ ಶಿಕ್ಶಣದಿಂದ ಈಗ ಬೆಳೆಸಬೇಕು ಎನ್ನುತ್ತಾರೆ. ಈ ಮೂಲಕ ಬಿಎಂಶ್ರೀ ಇಂಗ್ಲಿಶ್ ಮತ್ತು ಸಂಸ್ಕೃತಗಳೆರಡನ್ನೂ ಕನ್ನಡಭಾಶೆಯನ್ನು ಏಕೀಕೃತವನ್ನಾಗಿಸುವ ಅಸ್ತ್ರವನ್ನಾಗಿ ಬಳಸುತ್ತಾ ಹೋಗುತ್ತಾರೆ;

> ಸಂಸ್ಕೃತ ಪಂಡಿತರು ದಾರಾಳವಾಗಿ ಕನ್ನಡಿಗರನ್ನು ಉದ್ಧಾರ ಮಾಡಬಹುದು. ಮತ ವಿಶಯವಾಗೂ, ನೀತಿ ವಿಶಯವಾಗೂ ಈಗ ದೇಶದಲ್ಲಿ ಎಲ್ಲೆಲ್ಲೂ ಚರ್ಚೆ ನಡೆಯುತ್ತಿದೆಯಶ್ಟೆ. ಜೀವಕ್ಕೆ ಹೇಗೆ ಕರ್ಮ ಪಾಶ ಬಿಡುವುದಿಲ್ಲವೊ, ಹಾಗೆ ಏನು ಮಾಡಿದರೂ ಪೂರ್ವದ ಪ್ರಭಾವದಿಂದ ನಾವು ತಪ್ಪಿಸಿಕೊಳ್ಳಲಾರೆವು. ಆದದ್ದರಿಂದ ಏನು ತಿದ್ದುಪಾಟು ಆಗಬೇಕಾದರೂ ಪೂರ್ವ ಪದ್ಧತಿಯನ್ನು ಸಮಗ್ರವಾಗಿ ಪರಿಶೋಧಿಸಿದಲ್ಲದೆ ಯತ್ನವಿಲ್ಲ

ಎಂದು ಸಂಸ್ಕೃತ ಪರಂಪರೆಯ ವಿಧಿಗಳನ್ನು ಕಟ್ಟುತ್ತಾ ಹೋಗುತ್ತಾರೆ. ಇದಕ್ಕಾಗಿ ಒಂದು 'ವಿಹಿತವಾದ ಮಾರ್ಗದಲ್ಲಿ ಒಂದು ಕಟ್ಟು[೨೫]' ಮಾಡಿಕೊಂಡು ವಿದ್ಯಾರ್ಥಿಗಳಿಗೆ ದೇಶಭಾಶೆಯನ್ನು ಕಲಿಸಬೇಕು ಎನ್ನುತ್ತಾರೆ. ಗ್ರಾಮ್ಯ[೨೬]ವನ್ನು ದೂರವೇ ನಿಲ್ಲಿಸಿ, ಭಾಶೆ 'ಶುದ್ಧ'ವಾಗಿ, 'ಬಿಗಿ'ಯೂ 'ಕಟ್ಟೂ' ಇರುವಂತೆ ಜಾಗ್ರತೆಯಿಂದ ನೋಡಿಕೊಳ್ಳಬೇಕೆಂದು  ಬಯಸುತ್ತಾರೆ. ಇದನ್ನು ಅವರು, 'ಒಕ್ಕಲಿಗರನ್ನು ಹೊರಗಿರಿ ಎನ್ನುವವರು ಹೊಲೆಯರನ್ನು ದೇವರ ಮನೆಗೆ ಬಿಡುವುದುಂಟೊ?[೨೭]' ಎಂಬ ಉದಾಹರಣೆಯ ಮೂಲಕ ಮಂಡಿಸುತ್ತಾರೆ. ಈ ಹಿನ್ನೆಲೆಯಲ್ಲಿಯೇ;

> ನಮ್ಮ ಪೂರ್ವ ಸಾಹಿತ್ಯ ರಾಶಿಯಿಂದ ಉತ್ತಮ ಕಾವ್ಯಗಳನ್ನೂ, ಕಾವ್ಯ ಭಾಗಗಳನ್ನೂ ಶೋಧಿಸಿ ತೆಗೆದು, ಕಾವ್ಯ ಕೋಶಗಳನ್ನು ಸಿದ್ಧಪಡಿಸುವುದೇ ನಮ್ಮ ಪ್ರಥಮ ಕರ್ತವ್ಯವೆಂದು ನಾನು ತಿಳಿದಿರುತ್ತೇನೆ. ಈ ಉತ್ತಮ ಕಾವ್ಯಕೋಶಗಳಿಂದ ವಿದ್ಯಾರ್ಥಿಗಳ ಮತ್ತು ಲೇಖಕರ ಮನಸ್ಸನ್ನೂ ಕನ್ನಡದ ಪ್ರೇಮವನ್ನೂ ವಿಶಾಲಪಡಿಸಿ, ಮುಂದೆ ಈ ಕಾಲಕ್ಕೆ  ತಕ್ಕ ನೂತನ ಸಾಹಿತ್ಯವನ್ನು ನಿರ್ಮಾಣ ಮಾಡತಕ್ಕದ್ದು ನಮ್ಮ ಎರಡನೆಯ ಕರ್ತವ್ಯ

ಎನ್ನುತ್ತಾರೆ. ಈ ಹಿನ್ನೆಲೆಯಲ್ಲಿ ಮೈಸೂರು ವಿಶ್ವವಿದ್ಯಾಲಯವನ್ನು ಬಿಎಂಶ್ರೀ ಪ್ರವೇಶಿದ ನಂತರದ ಪಠ್ಯಕ್ರಮದ ವಿದ್ಯಮಾನಗಳನ್ನು ಗಮನಕ್ಕೆ ತೆಗೆದುಕೊಳ್ಳಬೇಕಾಗುತ್ತದೆ. ಕನ್ನಡ ಕಲಿಕೆಯ ಈ ವಿದ್ಯಮಾನಗಳ ಕುರಿತಾಗಿ ೧೯೨೮ರ ಕನ್ನಡ ಸಾಹಿತ್ಯ ಸಮ್ಮೇಳನದ ತಮ್ಮ ಅಧ್ಯಕ್ಷ ಭಾಶಣ[೨೮]ದಲ್ಲಿಯೂ ಪ್ರಸ್ತಾಪಿಸುತ್ತಾರೆ. ಈ ಹಿನ್ನೆಲೆಯಲ್ಲಿ ೧೯೩೮ರಲ್ಲಿ ಕನ್ನಡ ಸಾಹಿತ್ಯ ಪರಿಶತ್ತಿನಿಂದ ಪ್ರಕಟವಾಗಿರುವ ಬಿಎಂಶ್ರೀಯವರ ಸಂಪಾದಕತ್ವದ 'ಕನ್ನಡದ ಬಾವುಟ' ಕೃತಿಯನ್ನು ಉದಾಹರಣೆಗಾಗಿ ಗಮನಿಸಬಹುದಾಗಿದೆ. ಈ ಕೃತಿಯ ಮುನ್ನುಡಿಯಲ್ಲಿ ಬಿಎಂಶ್ರೀ ಹೇಳುವ ಮಾತುಗಳು ಹೀಗಿವೆ, '೭ನೆಯ ಶತಮಾನದಿಂದ ೨೦ನೆಯ ಶತಮಾನದ ಇಂದಿನವರೆಗಿನ ಕನ್ನಡ ಬೆಳೆಯನ್ನು (೧)ಶಾಸನಗಳು (೨) ಪೂರ್ವ ಸಾಹಿತ್ಯ (೩) ನಾಡಪದಗಳು (೪) ಇಂದಿನ ಹೊಸಕವಿತೆ ಈ ನಾಲ್ಕು ತೆನೆಗಳಲ್ಲಿ ತೋರಿಸಿದ್ದೇನೆ. ಕಾಲ ಕಾಲದ ಭಾಶೆಯ ಮಾರ್ಪಾಟುಗಳು, ಛಂಧಸ್ಸಿನ ಬಗೆಬಗೆಯ ಕುಣಿತ, ಕನ್ನಡ ನಾಡಿನ ಸೊಬಗು, ಹೃದಯ, ಧರ್ಮಗಳು, ಮಹಾವ್ಯಕ್ತಿಗಳು, ಜೀವಗುರಿಗಳು, ಬೇರೆ ಬೇರೆ ಪ್ರಾಂತ ಪ್ರೇಮಗಳು–ಒಂದು ಮಾತಿನಲ್ಲಿ, ಹಿಂದಿನ ಮಹತ್ವದ ಸಂಸ್ಕಾರ ಮತ್ತು ಸಂಸ್ಕೃತಿ, ಇಂದಿನ ಮಹತ್ವದ ಧ್ಯೇಯ ಮತ್ತು ಯೋಜನೆಗಳು, ನಾಡ ನಾಡಿಯ ಮಿಡಿತ–ನನಗೆ ತಿಳಿದಂತೆ ಯಾವ ಯಾವುದು ಕನ್ನಡ ಬಾವುಟದಡಿಯಲ್ಲಿ ಹೊಮ್ಮಿದ ಎರಡು ಸಾವಿರ ವರುಶದ ಜೀವಾಳವೋ ಅದನ್ನೇ ತೆನೆಗಳಾಗಿ

ಆಯ್ದು ತೆಕ್ಕೆಮಾಡಿ ಕನ್ನಡಿಗರ ಕೈಗೆ ಒಪ್ಪಿಸಿದ್ದೇನೆ' ಎನ್ನುತ್ತಾರೆ. ತೀನಂಶ್ರೀಯ ಕನ್ನಡ ಮಧ್ಯಮ ವ್ಯಾಕರಣ'ವು ಪ್ರಾಥಮಿಕ ಕನ್ನಡ ತರಗತಿಗಳಲ್ಲಿ ಮುಖ್ಯವಾಗುವುದನ್ನು ಸಂಸ್ಕೃತ ಪರಂಪರೆಯ ಈ ಚಿಂತನೆಯ ಭಾಗವಾಗಿಯೆ ನೋಡಬೇಕಾಗುತ್ತದೆ. ಕನ್ನಡ ಭಾಶೆಯ ಕಲಿಕೆ ಮತ್ತು ಸಾಹಿತ್ಯದ ಕಲಿಕೆಯನ್ನು ಕುರಿತ ಪಠ್ಯಗಳು ಅವುಗಳ ಸ್ವರೂಪದಲ್ಲಿ ಭಿನ್ನವಾಗಿಯೇನೂ ಇಲ್ಲದಿರುವುದು ಇಂಥ ಪಂಡಿತಮಾನ್ಯ ತಿಳುವಳಿಕೆಯ ಕಾರಣವಾಗಿಯೆ ಎನ್ನುವುದನ್ನು ಗ್ರಹಿಸಿಕೊಳ್ಳಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಕನ್ನಡಭಾಶೆ ಮತ್ತು ಸಾಹಿತ್ಯದ ಕಲಿಕೆ ಎನ್ನುವುದು ಬೇರೆಯಾಗಿರದೆ, ಕಾಲಾನುಕ್ರಮಣಿಕೆಯ ಕನ್ನಡ ಸಾಹಿತ್ಯದ ಪರಿಚಯವೇ ಕನ್ನಡಭಾಶೆಯ ಕಲಿಕೆ ಎಂಬ ತಿಳುವಳಿಕೆಗಳು ಪ್ರವೃತ್ತವಾಗುತ್ತಾ ಬಂದಿರುವುದನ್ನು, ಇಂದಿಗೂ ಇಂಥ ಪರಂಪರೆಯೇ ಚಾಲಕ ಶಕ್ತಿಯಾಗುತ್ತಿರುವುದನ್ನು ಕರ್ನಾಟಕದ ಯಾವುದೇ ವಿಶ್ವವಿದ್ಯಾಲಯದ ಕನ್ನಡ ಪಠ್ಯಕ್ರಮಗಳಲ್ಲಿ ನೋಡಬಹುದಾದ ವಿಚಾರವಾಗಿದೆ.

**೪.೮ ಸ್ವತಂತ್ರ ಭಾರತದ ಸಂವಿಧಾನ ಬದ್ಧ ಶಿಕ್ಶಣ ಮತ್ತು ಕನ್ನಡ ಕಲಿಕೆ;**

ಸಂವಿಧಾನದ ಪ್ರಸ್ತಾವನೆಯಲ್ಲಿ ಶಿಕ್ಶಣವನ್ನು ಕುರಿತು ವಿವರಿಸಿಕೊಳ್ಳುವಾಗ ನ್ಯಾಯ, ಸ್ವಾತಂತ್ರ್ಯ, ಸಮಾನತೆ ಮತ್ತು ಬಂಧುತ್ವಗಳ ನೆಲೆಯಲ್ಲಿ ಪ್ರಜಾಪ್ರಭುತ್ವ, ಸಮಾಜವಾದದ ಉದ್ದೇಶಗಳನ್ನು ವ್ಯಕ್ತಪಡಿಸಲಾಗಿದೆ. ಈ ಮೂಲಕ ಪ್ರತಿಯೊಬ್ಬ ವ್ಯಕ್ತಿಯ ಗೌರವವನ್ನು ಕಾಪಾಡುವ ಭರವಸೆಯನ್ನು ಸ್ಪಶ್ಟಪಡಿಸಿಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ೧೯೪೮ರಲ್ಲಿ 'ರಾಧಾಕೃಶ್ಣನ್ ಆಯೋಗ' ಸಲ್ಲಿಸಿದ ವರದಿಯ ಅಂಶಗಳನ್ನು ಇಲ್ಲಿವರೆಗಿನ ಚರ್ಚೆಯ ಭಾಗವಾಗಿಯೇ ಗಮನಿಸಿಕೊಳ್ಳಬಹುದಾಗಿದೆ.

ಉನ್ನತ ಶಿಕ್ಶಣ ಸುಧಾರಣೆಯ ಕಾರಣವಾಗಿಯೇ ರಚಿಸಲಾದ ರಾಧಾಕೃಶ್ಣನ್ ಆಯೋಗವು ಶಿಕ್ಶಣದ ಮೂಲಕ ಪ್ರಜಾತಂತ್ರವನ್ನು ಬಲಿಶ್ಟವಾಗಿಸುವುದನ್ನು ಪ್ರಸ್ತಾಪಿಸುತ್ತದೆ. ಇದಕ್ಕಾಗಿ ಪಠ್ಯಕ್ರಮ, ಬೋಧನೆ ಮತ್ತು ಪರೀಕ್ಶಾ ಪದ್ಧತಿಗಳಲ್ಲಿ ಗುಣಮಟ್ಟವನ್ನು ಇರಬೇಕೆಂದು ಯೋಚಿಸಿತು. ಆಧುನಿಕ ಕಾಲಕ್ಕೆ ಉಪಯುಕ್ತವಾದ ವಿಶಯಗಳನ್ನು ಪಠ್ಯಕ್ರಮಗಳಲ್ಲಿ ಯೋಜಿಸಬೇಕೆಂಬ ಚಿಂತನೆಯನ್ನು ಮುಂದಿರಿಸಿತು. ಇದಕ್ಕಾಗಿ 'ನಿರ್ದಿಶ್ಟವಾದ ಪಠ್ಯ ಪುಸ್ತಕಗಳಿರಕೂಡದು ಕೇವಲ ಪಠ್ಯಕ್ರಮ ಇರಬೇಕು' ಎಂದು ತನ್ನ ವರದಿಯಲ್ಲಿ ಸ್ಪಶ್ಟವಾಗಿ ಗುರುತಿಸಿತು. ಈ ಮೂಲಕ 'ಶಿಕ್ಶಣವು ಸುತ್ತಲಿನ ಭೌತಿಕ, ಸಾಮಾಜಿಕ ಪರಿಸರ ಹಾಗೂ

ಮಾನವೀಯ ಆಸೆ ಆಕಾಂಕ್ಷೆಗಳನ್ನು ಅರಿಯಲು'(ಕರಜಗಿ ೧೯೯೩) ಸಾಧ್ಯವಾಗುತ್ತದೆ ಎಂದು ತಿಳಿಯಲಾಯಿತು. ಜಾರಿಯಲ್ಲಿರುವ ಪರೀಕ್ಷೆಯ ಪರಿಣಾಮಗಳು ಕಲಿಕಾರ್ಥಿಯ ಯೋಗ್ಯತೆಯನ್ನು ನಿರೂಪಿಸಲಾರವು. ಆದ್ದರಿಂದಾಗಿ, ಕಲಿಕಾರ್ಥಿಯ ಪ್ರವೃತ್ತಿಯನ್ನು ಪರೀಕ್ಷಿಸಬೇಕು, ಅಭಿರುಚಿಗಳ ಸ್ವಭಾವ, ಕಾರ್ಯ ದಕ್ಷತೆಯನ್ನು ಪರೀಕ್ಷಿಸುವ ಮಾನದಂಡಗಳಿರಬೇಕು. ಕೇವಲ ಯೋಗ್ಯತೆಯ ಆಧಾರದ ಮೇಲೆ ಎಲ್ಲರಿಗೂ ಸಮಾನ ಅವಕಾಶ ಇರಬೇಕು ಎಂದು ಹೇಳಿತು. ಪಠ್ಯ ಪುಸ್ತಕಗಳಿರಕೂಡದು ಕೇವಲ ಪಠ್ಯಕ್ರಮ ಇರಬೇಕು ಎನ್ನುವುದನ್ನು, ಪದವಿಯ ವಿಶಯಾಧಾರಿತ ಪಠ್ಯಕ್ರಮದಲ್ಲಿ ಬಹುಮಟ್ಟಿಗೆ ಯೋಜಿಸಲಾಯಿತು. ಆದರೆ ಕನ್ನಡ ಪಠ್ಯಕ್ರಮವು ಸಂಸ್ಕೃತದ ವಿದ್ವತ್ ಪರಂಪರೆಯಿಂದ ರೂಢಗೊಂಡಿತ್ತಾದ್ದರಿಂದ, ಅಂಥ ವಿದ್ವತ್ತನ್ನು ಚಾಲನೆಗೊಳಿಸುವ ನಿರ್ಧಿಶ್ಟ ಪಠ್ಯಗಳ ಬೋಧನೆ, ಕಲಿಕೆಗಳನ್ನೇ-ಯೋಗ್ಯತೆಯನ್ನು ಆಧರಿಸಿ-ಕನ್ನಡಭಾಷೆಯ ಕಲಿಕೆಯ ಪರಿಕರವಾಗಿ ಉಳಿಸಿಕೊಂಡಿತು. ವರದಿಯು ಹೇಳಿದಂತೆ '೧ನೇ ವರುಶದ ಪದವೀ ಪರೀಕ್ಷೆಗೆ ಧಾರ್ಮಿಕ ಮುಖಂಡರ ಜೀವನ ಚರಿತ್ರೆಗಳನ್ನು ಅಭ್ಯಾಸ ಮಾಡಬೇಕು. ೨ನೇ ವರುಶದ ಪದವಿ ಪರೀಕ್ಷೆಗೆ ಎಲ್ಲ ಧರ್ಮ ಗ್ರಂಥಗಳಿಂದ ಆಯ್ದ ಪಠ್ಯಗಳಿರಬೇಕು' ಎನ್ನುವುದನ್ನು ವೇದಾಂತ ಪ್ರಣೀತ ಧಾರ್ಮಿಕತೆಯಿಂದಲೇ ಕನ್ನಡ ಕಲಿಕೆಯ ಪಠ್ಯಗಳ ಮೂಲಕವೂ ನೋಡಲಾಯಿತು. ಹೆಂಗಸರ ಶಿಕ್ಶಣವು 'ಸ್ತ್ರೀಯರಾಗಿ ಬೆಳಗಲು ಸಹಕಾರಿಯಾದ ಗೃಹ ಅರ್ಥಶಾಸ್ತ್ರ, ಗೃಹ ನಿರ್ವಹಣೆ ಮುಂತಾದ ವಿಶಯಗಳ ಅಭ್ಯಾಸ' ಆಗಬೇಕು ಎಂದಿರುವುದನ್ನೂ ಸಹ ಈ ಹಿನ್ನೆಲೆಯಲ್ಲಿಯೇ ಗ್ರಹಿಸಬೇಕಾಗುತ್ತದೆ. ಇದು ರಾಶ್ಟ್ರೀಯ ಧೋರಣೆಗಳಲ್ಲಿ ಮಂಡಿಸಲ್ಪಟ್ಟಿದ್ದರಿಂದಾಗಿ **ಭಾರತೀಯ ಸಂಸ್ಕೃತಿ**ಯಾಗಿ ಗುರುತಿಸಿಕೊಂಡಿದ್ದ ಸಂಸ್ಕೃತ ಪರಂಪರೆಯನ್ನು ಪ್ರಜಾಪ್ರಭುತ್ವದ ನೆಲೆಗಳಲ್ಲಿ ಜಾರಿಗೊಳಿಸುವುದಕ್ಕೆ ರಹದಾರಿ ದೊರೆತಂತೆಯೇ ಆಯಿತು.

### ೪.೯ ಸ್ವತಂತ್ರ ಕರ್ನಾಟಕ ಮತ್ತು ಉನ್ನತ ಶಿಕ್ಶಣದಲ್ಲಿ ಕನ್ನಡ;

ಕರ್ನಾಟಕ ಏಕೀಕರಣ ನಂತರದ ಕನ್ನಡ ಮತ್ತು ಶಿಕ್ಶಣ ಸಂಬಂಧಗಳನ್ನು ದಾಖಲಿಸುತ್ತ ಡಾ. ಕೆ.ವಿ. ನಾರಾಯಣ[೨೯] ಅವರು 'ಚಾರಿತ್ರಿಕ ವಿನ್ಯಾಸಗಳಿಂದಾಗಿ ೨೦ನೆ ಶತಮಾನದ ಉತ್ತರಾರ್ಧದಲ್ಲಿ ಕನ್ನಡದ ಸಾಧ್ಯತೆಗಳನ್ನು ವಿಸ್ತರಿಸಿಕೊಳ್ಳಲು ಸಂಸ್ಕೃತದ ನೆರವನ್ನು ಪಡೆಯುತ್ತಾ ಸಂಸ್ಕೃತಭಾಶೆಯ ಮರುಸ್ಥಾಪನೆ ಆಗುವುದನ್ನು ನೋಡುತ್ತೇವೆ. ಇದರಿಂದಾಗಿ ಶುದ್ಧ ಕನ್ನಡವೆಂದರೆ ಸಂಸ್ಕೃತಮಯ ಕನ್ನಡ ಎನ್ನುವ ತರ್ಕ ನೆಲೆಗೊಂಡಿದೆ' ಎನ್ನುತ್ತಾರೆ. ಏಕೀಕರಣ

ಪೂರ್ವದಲ್ಲಿ ಓರಿಯಂಟಲಿಸ್ಟರು 'ಭಾರತ ಶಾಸ್ತ್ರ'ವನ್ನು ಕಟ್ಟುವಾಗ ಮೂಲ ಆಕರವಾಗಿ ಸಂಸ್ಕೃತ ಭಾಶೆಯ ಗ್ರಂಥ ಸಮುದಾಯವನ್ನು ಬಳಸಿಕೊಂಡದ್ದನ್ನು, ಆ ಮೂಲಕ ಭಾರತ ಮತ್ತು ಸಂಸ್ಕೃತ ಎರಡೂ ಸಮಾನವಾಚಿಗಳಾದದ್ದನ್ನು ಪ್ರಸ್ತಾಪಿಸುತ್ತ 'ಕನ್ನಡದಲ್ಲೂ ಈ ಚಿಂತನೆ ಬಲವಾಗಿ ಬೇರೂರಿತ್ತು' ಎನ್ನುತ್ತಾರೆ. ಈ ಹಿನ್ನೆಲೆಯಲ್ಲಿಯೆ, 'ಸಂಸ್ಕೃತ ಕಾವ್ಯಮೀಮಾಂಸೆ'ಯನ್ನು 'ಭಾರತೀಯ ಕಾವ್ಯಮೀಮಾಂಸೆ' ಯಾಗಿ ಭಾವಿಸಿದ್ದನ್ನು, ಸಂಸ್ಕೃತ ಭಾಶೆಯ ವ್ಯಾಕರಣ ಚೌಕಟ್ಟನ್ನು ಕನ್ನಡ ಭಾಶೆಗೆ ಅನ್ವಯಿಸಿದ್ದನ್ನು ಕನ್ನಡಭಾಶೆಯ ಕಲಿಕೆಯಲ್ಲಿನ ಬಹುಮುಖ್ಯವಾದ ತೊಡಕಾಗಿ ಚರ್ಚೆಗೆಳೆಯುತ್ತಾರೆ. ಹೀಗೆ ಸಂಸ್ಕೃತವನ್ನು ದೇಶವ್ಯಾಪೀ ಚಿಂತನೆಗೆ ಸೂಚಕವನ್ನಾಗಿಸಿಕೊಂಡದ್ದರಿಂದ ಮುಂದಿನ ಶಿಕ್ಶಣದ ಸಂದರ್ಭದಲ್ಲಿ ಕನ್ನಡಭಾಶೆ ಎದುರಿಸಬೇಕಾಗಿ ಬಂದ ಇಕ್ಕಟ್ಟುಗಳ ಪ್ರಶ್ನೆಯನ್ನಿಟ್ಟು ನೋಡಬಯಸುತ್ತಾರೆ. ಹೀಗಾಗಿಯೆ, 'ಕನ್ನಡಭಾಶೆ ಕುರಿತ ಚಿಂತನೆಯು ಏಕೀಕರಣದ ಅನಂತರದಲ್ಲಿಯು ಈ ಕಾರಣಗಳಿಂದಾಗಿ ಹೆಚ್ಚು ಸಂಸ್ಕೃತಮಯವಾಯಿತು ಎಂದು ವಿವರಿಸುತ್ತ ಈ ಕಾರಣವಾಗಿ ಸಂಸ್ಕೃತದಿಂದಲೇ ಕನ್ನಡಕ್ಕೆ ಅನುವಾದಗೊಂಡ ಕೃತಿಗಳನ್ನು, ಮಾಧ್ಯಮಗಳ ನವಪದ ಸೃಶ್ಟಿಯ ಸಂದರ್ಭವನ್ನು, ಇಂಗ್ಲಿಶ್ ಭಾಶೆಯಿಂದ ಅನುವಾದಿಸುವಾಗಲೂ ಸಂಸ್ಕೃತದ ಪದಕೋಶದ ಮೊರೆ ಹೋಗಲಾದ ಉದಾಹರಣೆಗಳನ್ನು ಪ್ರಸ್ತಾಪಿಸುತ್ತಾರೆ[೩೦]. ಕರ್ನಾಟಕದ ಸಂದರ್ಭದಲ್ಲಿ ನಿರ್ದಿಶ್ಟ ಭಾಶಾ ನೀತಿಯೊಂದು ಎಲ್ಲೂ ದಾಖಲಾಗಿಲ್ಲ ಎನ್ನುವ ಕೆ.ವಿ.ನಾರಾಯಣ ಅವರು ಇದಕ್ಕೆ, ೧೯೫೬ರ ನವಂಬರ್ ೧ರಂದು ಕರ್ನಾಟಕ ಒಂದು ರಾಜ್ಯವಾಗಿ ರೂಪುಗೊಂಡ ೭ ವರುಶಗಳ ನಂತರ ಕನ್ನಡ ಅಧಿಕೃತ ಭಾಶೆಯಾಗಿ ಸ್ಥಾನ ಪಡೆದದ್ದನ್ನು ಉದಾಹರಿಸುತ್ತಾರೆ. ಶಿಕ್ಶಣ ಸರ್ಕಾರದ ಒಂದು ಕಾರ್ಯಕ್ರಮವಾಗಿ ರೂಪುಗೊಂಡದ್ದರಿಂದ ಪಠ್ಯಗಳಲ್ಲಿ ಬಳಕೆಯಾಗುವ ಕನ್ನಡದಲ್ಲಿ ಒಂದು ಸಾಮಾನ್ಯ ರೂಪವನ್ನು ತರುವುದು ಸರಕಾರದ ನೀತಿಯಾಗಿದ್ದನ್ನು ವಿವರಿಸುತ್ತ, ಆ ಮೂಲಕ ಸಂವಿಧಾನ ರೂಪಿಸಿದ ಭಾಶಾ ನೀತಿ ಮತ್ತು ಜನತೆಯ ಆಶೋತ್ತರಗಳಿಗೆ ಅನುಗುಣವಾಗಿ ರೂಪಿತವಾಗುವ ಭಾಶಾ ನೀತಿಗಳ ನಡುವಿನ ವೈರುಧ್ಯಗಳನ್ನು ಗುರುತಿಸಲು ಪ್ರಯತ್ನಿಸುತ್ತಾರೆ. ಒಂದು ಭಾಶೆಯ ಸ್ಥಾನಮಾನದ ನಿರ್ಧಾರ 'ಆ ಭಾಶೆಯನ್ನು ಯಾವ ಯಾವ ವಲಯಗಳಲ್ಲಿ ಯಾವ ಯಾವ ಬಗೆಯಲ್ಲಿ ಬಳಸುತ್ತೇವೆ' ಎಂಬುದನ್ನು ಅವಲಂಬಿಸಿರುತ್ತದೆ. ರಾಜ್ಯದ ಆಡಳಿತ ಭಾಶೆಯಾಗಿ ತಮ್ಮ ಭಾಶೆಯನ್ನು ಬಳಸಬಹುದು ಎಂಬ ಅವಕಾಶ ರಾಜ್ಯಾಂಗದಲ್ಲಿದ್ದರೂ 'ಸಂಪರ್ಕಭಾಶೆಯಾಗಿ ಇಂಗ್ಲಿಶ್' ಅವಕಾಶ ಪಡೆದದ್ದರಿಂದ 'ಇಂಗ್ಲಿಶ್‌ನ ಜೊತೆಯಲ್ಲಿ ಕನ್ನಡ' ಎಂಬ ಪರಿಸ್ಥಿತಿ

ನಿರ್ಮಾಣವಾಯಿತು ಎಂದು ಏಕೀಕರಣೋತ್ತರ ಕನ್ನಡದ ಹೊಸ ಬಿಕ್ಕಟ್ಟುಗಳ ಕಡೆಗೆ ಗಮನವನ್ನು ಸೆಳೆಯುತ್ತ ಶಿಕ್ಷಣದಲ್ಲಿ ಕನ್ನಡ ಎದುರಿಸುತ್ತಿರುವ ಸಮಸ್ಯೆಗಳನ್ನು ಮುನ್ನೆಲೆಗೆ ತರುವ ಪ್ರಯತ್ನ ಮಾಡುತ್ತಾರೆ. ಇದರಿಂದಾಗಿಯೆ, ಶಾಲೆಗಳ ಹಂತದ ಭಾಷಾ ಕಲಿಕೆಯ ನೆಪದಲ್ಲಿ ನೈತಿಕ ಮೌಲ್ಯಗಳು, ರಾಷ್ಟ್ರಭಕ್ತಿ, ನಾಗರಿಕ ಹಕ್ಕುಗಳ ಪರಿಚಯದಂತಹ ಸಂಹಿತೆಗಳು ಪ್ರವೇಶ ಪಡೆದಿರುವುದನ್ನು ಹಾಗೂ ಪಠ್ಯವಸ್ತುವಿನ ಆಶಯ ಮತ್ತು ಸಾರ ಮುನ್ನೆಲೆಗೆ ಬಂದು ನಿಂತಿರುವುದನ್ನು ಗುರುತಿಸುತ್ತಾರೆ. ಇಂಥ ಚಾರಿತ್ರಿಕ ವಿನ್ಯಾಸಗಳಿಂದಾಗಿ ೨೦ನೆ ಶತಮಾನದ ಉತ್ತರಾರ್ಧದಲ್ಲಿ ಕನ್ನಡದ ಸಾಧ್ಯತೆಗಳನ್ನು ವಿಸ್ತರಿಸಿಕೊಳ್ಳಲು ಸಂಸ್ಕೃತದ ನೆರವನ್ನು ಪಡೆಯುತ್ತಾ 'ಸಂಸ್ಕೃತಭಾಷೆಯ ಮರುಸ್ಥಾಪನೆ' ಆಗುವುದನ್ನು ವಿವರಿಸುತ್ತಾರೆ.

ಈ ಹಿನ್ನೆಲೆಯಲ್ಲಿ ಏಕೀಕೃತ ಕನ್ನಡಭಾಷೆಯ ಕಲಿಕೆಯ ವಿದ್ಯಮಾನಗಳು ಪ್ರವೃತ್ತವಾದವು. 'ಏಕೀಕರಣ ಪೂರ್ವದಲ್ಲಿ ಮೈಸೂರು ವಿಶ್ವವಿದ್ಯಾಲಯದ ವಿದ್ವಾಂಸರು ಬಳಸುತ್ತಿದ್ದ ಕನ್ನಡ ಪ್ರಭೇದವನ್ನು ಪ್ರಮಾಣ ಭಾಷೆಯೆಂದು ಪಠ್ಯಪುಸ್ತಕಗಳಲ್ಲಿ ಕಟ್ಟುನಿಟ್ಟಾಗಿ ಬಳಸುತ್ತಾ ಬರಲಾಯಿತು' ಎನ್ನುವ ಕೆ.ವಿ.ನಾರಾಯಣ ಅವರು, 'ಪ್ರಧಾನ' ಮತ್ತು 'ವಿಕಲ್ಪ' ಎಂಬ ಕಲ್ಪನೆಗಳು ನಮ್ಮ ಶಿಕ್ಷಣಕ್ರಮದಲ್ಲಿ ಆಧಾರಸ್ಥಂಬಗಳಾಗಿದ್ದು, ಪ್ರಧಾನವಾದುದು ವಿಕಲ್ಪವನ್ನು ಯಾವಾಗಲು ಅನುಕಂಪದಿಂದ ನೋಡುತ್ತದೆ ಮತ್ತು ಎಂದಾದರೊಂದು ದಿನ ಈ ವಿಕಲ್ಪವು ನಾಶವಾಗಿ ಅಥವಾ ಪರಿವರ್ತನೆ ಹೊಂದಿ ಪ್ರಧಾನವಾದುದರ ಚಹರೆಯನ್ನು ಮಾತ್ರ ತನ್ನಲ್ಲಿ ಉಳಿಸಿಕೊಳ್ಳುತ್ತದೆ ಎಂದು ಸಂಸ್ಕೃತ ಪರಂಪರೆಯ 'ಆಧುನಿಕ' ವಿದ್ಯಮಾನಗಳನ್ನು ಗುರುತಿಸಿಕೊಳ್ಳುತ್ತಾರೆ. ಇಂಥ ನಂಬಿಕೆ 'ಶಿಕ್ಷಣ ತತ್ವ'ದಲ್ಲಿ ಅಡಕಗೊಂಡಿದೆ ಎನ್ನುತ್ತ 'ಸಂಸ್ಕೃತ ಪರಂಪರೆ'ಯು ನಿರಂತರವಾಗಿ ಕನ್ನಡಭಾಶಿಕ ಕಲಿಕೆಯ ಪಠ್ಯಕ್ರಮಗಳಲ್ಲಿ ನಿರತವಾಗಿರುವ ಸಮಸ್ಯೆಯನ್ನು ಅನಾವರಣ ಮಾಡುತ್ತಾ ಹೋಗುತ್ತಾರೆ. ಇದರಿಂದಾಗಿ ಕನ್ನಡ ಕಲಿಕೆಯಲ್ಲಿ ಕನ್ನಡದ ಬಗೆಗಳನ್ನು ಗ್ರಹಿಸುವ ವಿಧಾನ ಇದು 'ತನ್ನದಲ್ಲದ್ದು', 'ಅನ್ಯವಾದುದು' ಎನ್ನುವುದರ ನೆಲೆಯಲ್ಲೆ ಇರುತ್ತದೆ ಎಂದು ಸ್ಪಷ್ಟವಾಗಿ ವಿವರಿಸುತ್ತಾರೆ. ಆದ್ದರಿಂದಾಗಿ, ಬದಲಾಗುತ್ತಿರುವ ಜಾಗತಿಕ ಪರಿಸ್ಥಿತಿಯಲ್ಲಿನ ತಂತ್ರಜ್ಞಾನದ ಸಂದರ್ಭದಲ್ಲಿ ಭಾಶೆಗಳು ಹೊಸ ವಿನ್ಯಾಸದಲ್ಲಿ ತಮ್ಮ ಸ್ಥಾನವನ್ನು ನಿರ್ದೇಶಿಸಿಕೊಳ್ಳಬೇಕಾಗಿದೆ ಎಂದು ಕನ್ನಡಕ್ಕಿರುವ ಸವಾಲುಗಳ ಕಡೆಗೆ ಬೆರಳು ಮಾಡುತ್ತಾರೆ. ಪ್ರಾಚೀನ ಸಾಹಿತ್ಯ ಸಂಕಲನಗಳು ಇಂದಿಗೂ, ಅಂದರೆ ಏಕೀಕೃತ ಕರ್ನಾಟಕದ ಸ್ವತಂತ್ರ ಆಡಳಿತ ಸಂದರ್ಭದಲ್ಲು ಕನ್ನಡಭಾಶೆ ಪತ್ರಿಕೆಯ ಪಠ್ಯಕ್ರಮವಾಗುತ್ತಿರುವುದನ್ನು ಈ

ಹಿನ್ನೆಲೆಯಲ್ಲಿಯೆ ಗ್ರಹಿಸಿಕೊಳ್ಳಬೇಕಾಗುತ್ತದೆ. ಜೊತೆಗೆ, ಇದೇ ಕ್ರಮವನ್ನು ಅನುಸರಿಸಿದ ಆಧುನಿಕ ಸಾಹಿತ್ಯದ ಕಾವ್ಯಸಂಗ್ರಹ, ಸಂಕಲನಗಳು ಮತ್ತು ಇತರೆ ಸಾಹಿತ್ಯಪ್ರಕಾರದ ಪಠ್ಯಗಳು ಪಠ್ಯಕ್ರಮದೊಳಗೆ ಪ್ರವೇಶ ಪಡೆಯುತ್ತವೆ. ಹೆಚ್ಚೆಂದರೆ, ಎರಡು ಮೂರು ವರುಶಗಳಿಗೊಮ್ಮೆ ವೈವಿಧ್ಯತೆಯ ಹೆಸರಲ್ಲಿ(ಬೊಧಕರಿಗೆ ವೈವಿಧ್ಯತೆಯಾಗಿ, ಲೇಖಕರಿಗೆ ಅವಕಾಶದ ಸರದಿಯಾಗಿ) ಇವು ಪರಿಶ್ಕಾರಗೊಳ್ಳುತ್ತಿರುತ್ತವೆ. ಇದೂ ಸಹ 'ಇದರ ಬದಲಿಗೆ ಇನ್ನೊಂದು' ಎಂದಶ್ಟೇ ಆಗುತ್ತದೆ.

ಕನ್ನಡ ಶಿಕ್ಶಣದ ಭಾಗವಾಗಿ ಸಂಘಟಿತವಾದ ಪಠ್ಯಕ್ರಮ ಕುರಿತಾಗಿ ಇಲ್ಲಿಯವರೆಗೆ ವಿವರಿಸಿಕೊಂಡ ಒಟ್ಟು ಚಾರಿತ್ರಿಕ ವಿದ್ಯಮಾನಗಳ ಈ ಆಧುನಿಕ ವರಸೆಗಳನ್ನು ಹೀಗೆ ಗುರ್ತಿಸಿಕೊಳ್ಳಬಹುದಾಗಿದೆ:

- **ಆಧುನಿಕ ಶಿಕ್ಶಣ ಪದ್ದತಿಯ ಭಾಗವಾಗಿ ಸಾಹಿತ್ಯ ಕೃತಿಗಳನ್ನು ಹುಡುಕಿ ಓರಿಯೆಂಟಲ್ ಮತ್ತು ದೇಶೀ ಸಂಸ್ಕೃತ ಪರಂಪರೆಯ ತಿಳುವಳಿಕೆಗಳಲ್ಲಿ ಕಟ್ಟಲಾಯಿತು.**
- **ಹೀಗೆ ಕಟ್ಟಿಕೊಂಡ ಕೃತಿಗಳನ್ನು ಸ್ಥಳೀಯತೆಯ ನೆಪದಲ್ಲಿ ಪಠ್ಯಕ್ರಮದೊಳಗೆ ತಂದು ನೀತಿಸಹಿತವಾದ ಪಠ್ಯದ ಆಶಯ ಮತ್ತು ಪಾಠಸಾರವನ್ನು ಗ್ರಹಿಸುವುದು ಶಿಕ್ಶಣ ಕಲಿಕೆಯ ತಿಳುವಳಿಕೆಯಾಗಿ ಜಾರಿಗೊಳಿಸಲಾಯಿತು.**
- **ಕನ್ನಡಭಾಶಿಕ ಶಿಕ್ಶಣ ಕನ್ನಡಸಾಹಿತ್ಯ ಪಠ್ಯಗಳ ಸಾರವನ್ನು ಅರಿಯುವುದು ಎಂದಾಗಿ ಸಂಸ್ಕೃತ ಪರಂಪರೆಯ ಸ್ಮೃತಿಯು ಪರೀಕ್ಶೆಯ ಮಾನದಂಡವಾಯಿತು.**
- **ಇಂಥ ಕಲಿಕೆ ಮತ್ತು ಗ್ರಹಿಕೆಯ ಪರೀಕ್ಶೆಗಳಿಗಾಗಿ ಪಂಡಿತಮಾನ್ಯ ವಿಧಾನದ ಅಭ್ಯಾಸಕ್ರಮ ಬೆಳೆದು ಸಂಸ್ಕೃತ ಪರಂಪರೆಯ ವ್ಯಾಕರಣ ಮತ್ತು ನಿಘಂಟುಗಳಿಗೆ ಅನುಗುಣವಾಗಿ ಕನ್ನಡವನ್ನು ಸಂಘಟಿಸಲಾಯಿತು.**
- **ಓರಿಯಂಟಲಿಸ್ಟರ ಅಧ್ಯಯನಗಳ ಪರಿಣಾಮವಾಗಿ ಇಂಗ್ಲಿಶ್ ವ್ಯಾಕರಣವೂ ಸಹ ಕನ್ನಡವನ್ನು ಸಂಘಟಿಸುವಲ್ಲಿ ಪ್ರಭಾವಿಸಿತು.**
- **ಸಂಸ್ಕೃತ ಪರಂಪರೆಯಿಂದ ಬಂದವರೆ ಇಂಗ್ಲಿಶ್ ಅಭ್ಯಾಸವನ್ನು ಮಾಡಿ ಆಧುನಿಕವಾಗಿ ಕನ್ನಡವನ್ನು ಸಂಘಟಿಸುವ ಕೆಲಸದಲ್ಲಿ ತೊಡಗಿಕೊಂಡಿದ್ದರಾದ್ದರಿಂದ ಯಜಮಾನ**

ಭಾಷೆಯಾದ ಇಂಗ್ಲಿಶ್, ಪರಂಪರೆಯ ಭಾಷೆಯಾದ ಸಂಸ್ಕೃತ ತರಗತಿಗಳಲ್ಲಿ ಕನ್ನಡಭಾಶೆಯನ್ನು ಸಂಘಟಿಸುವಲ್ಲಿ ಪ್ರಮುಖ ಪಾತ್ರವನ್ನು ನಿಭಾಯಿಸಿದವು.

- ಈ ಕಾರಣವಾದ ವಿದ್ಯಮಾನಗಳಿಂದಾಗಿ ವಸಾಹತುವನ್ನು ರಾಜಕೀಯವಾಗಿ ಎದುರಿಸಲು ಬೇಕಾದ ಸಾಂಸ್ಕೃತಿಕ ಶಕ್ತಿಯೊಂದು ಸ್ಥಳೀಯ ನೆಲೆಗಳಲ್ಲಿಯೇ ರೂಪುಗೊಳ್ಳತೊಡಗಿತು.
- ಇದರ ಪರಿಣಾಮ ಸಂಸ್ಕೃತ ಪರಂಪರೆಯ ಸಂಪ್ರದಾಯ ಮತ್ತು ಆಧುನಿಕತೆಯ ನಡುವೆ ಸಂಘರ್ಶವೇರ್ಪಟ್ಟು ವಿಚಿತ್ರವಾದ ಶೈಕ್ಶಣಿಕ ಸನ್ನಿವೇಶವೊಂದು ಹುಟ್ಟಿಕೊಂಡಿತು.
- ಇದರಿಂದಾಗಿ ಜಾಗತೀಕೃತವಾದ ಇಂದಿನ ಮಾರುಕಟ್ಟೆ ಮತ್ತು ತಂತ್ರಜ್ನಾನದ ಸಂದರ್ಭಕ್ಕೆ ಬೇಕಾದ ಕನ್ನಡವನ್ನು ಕನ್ನಡಭಾಶೆಯ ಬಳಕೆಯ ನೆಲೆಯಿಂದ ರೂಡಿಸಿಕೊಳ್ಳುವ ಹೊಣೆಗಾರಿಕೆಯಿಂದ ಹಿಂದೆ ಸರಿದಂತಾಯಿತು.

ಇದರಿಂದಾಗಿ, ಇವತ್ತಿನ ಕನ್ನಡಭಾಶೆ ಕಲಿಕೆಯ ಪಟ್ಯಕ್ರಮಗಳು ಈ ಪ್ರಕ್ರಿಯೆಯಲ್ಲಿ ಪ್ರಧಾನ ಪಾತ್ರ ತೆಗೆದುಕೊಂಡಿದ್ದು ಸಂಸ್ಕೃತಿ ಮತ್ತು ಪರಂಪರೆಗಳನ್ನು ಧ್ಯಾನಿಸುತ್ತಿರುವುದರಿಂದ ಈ ಪ್ರಜ್ನೆ ಮತ್ತಶ್ಟು ಸ್ಥಿರೀಕರಣಕ್ಕೆ ಒಳಪಡುವಂತಾಯಿತು ಮತ್ತು ಇಂದಿಗೂ ಸಹ ಇಂಥ ಅಪರಾಧಿ ಪ್ರಜ್ನೆಯಲ್ಲಿಯೇ ಕನ್ನಡಭಾಶೆ, ಕನ್ನಡಭಾಶೆಯ ಕಲಿಕೆ, ಪಟ್ಯಕ್ರಮ ಎಲ್ಲವೂ ಉಳಿಯುವಂತಾಯಿತು. ಇದನ್ನು ಬೆಂಗಳೂರು ವಿಶ್ವವಿದ್ಯಾಲಯದ ಪದವಿ ಪಟ್ಯಕ್ರಮವನ್ನು ಕಾರಣವಾಗಿಸಿಕೊಂಡು ಪ್ರಸ್ತುತ ಅಧ್ಯಯನದಲ್ಲಿ ಪರಿಶೀಲಿಸಲಾಗಿದೆ. ಆ ಮೂಲಕ ಕನ್ನಡಭಾಶಿಕ ಜ್ನಾನವನ್ನು ಮೂಡಿಸುವಲ್ಲಿ, ಕನ್ನಡ ಪಟ್ಯಕ್ರಮಗಳು ನಿರ್ವಹಿಸುವ ಸಾಮಾಜಿಕ ಹೊಣೆಗಾರಿಕೆಯಲ್ಲಿನ ತೊಡಕುಗಳನ್ನು ಸ್ಪಶ್ಟವಾಗಿ ಗುರುತಿಸಿಕೊಳ್ಳುವ ಪ್ರಯತ್ನಗಳನ್ನು ಮುಂದಿನ ಅಧ್ಯಾಯಗಳಲ್ಲಿ ಮಾಡಲಾಗಿದೆ.

**ಅಡಿ ಟಿಪ್ಪಣಿಗಳು**

---

೧. ಮಕ್ಕಳ ಶಿಕ್ಶಣವೆಂಬ ಉಲ್ಲೇಖ ಮೊದಲು ಕಾಣಿಸಿಕೊಳ್ಳುವುದು ೧೪೯೮ರ ಒಂದು ಫ್ರೆಂಚ್ ದಾಖಲೆಯಲ್ಲಿ. ೧೬ನೆಯ ಶತಮಾನದಲ್ಲಿ ಕೂಡ ಮಕ್ಕಳ ಶಿಕ್ಶಣವೆಂಬುದು ತುಂಬ ಹೊಸ ಸಂಗತಿಯೇ ಆಗಿತ್ತು. ಆ ಕಾಲದಲ್ಲೇ ಯೂರೋಪಿನಲ್ಲಿ ಹೊಸದೊಂದು ನಂಬಿಕೆ ಉದ್ಭವಿಸಿತು-ಮನುಶ್ಯ ಹುಟ್ಟುತ್ತಲೇ ಮೂರ್ಖನಾಗಿ ಹುಟ್ಟಿದ್ದಾನೆ; ಮನುಶ್ಯರಿಗೆ ಶಿಕ್ಶಣ ಕೊಡದಿದ್ದರೆ ಅವರಲ್ಲಿ ಅಗತ್ಯ ಸಾಮರ್ಥ್ಯಗಳು ರೂಪುಗೊಳ್ಳುವುದು ಅಸಾಧ್ಯ-ಇದು ಆ ನಂಬಿಕೆ. ಅರ್ಥಾತ್ ಶಿಕ್ಶಣವೆಂಬುದು ಆಗ

ಬದುಕುವ ಅಗತ್ಯಸಾಮರ್ಥ್ಯಕ್ಕೆ ವಿರುದ್ಧಪದವಾಗಿ ವ್ಯಾಖ್ಯಾನಗೊಂಡಿತು; ಕ್ರಿಶ್ಚಿಯನ್ ನಂಬಿಕೆಯಂತೆ ಹುಟ್ಟುತ್ತಲೇ ಮನುಷ್ಯರು ಹೊತ್ತು ತರುವ ಪಾಪಕ್ಕೆ ಅದು ಸಮಾನಾಂತರವಾಗಿ ಕಾಣಿಸಿಕೊಂಡಿತು.

೨. ಅದೇ.

೩. ಆರ್.ಡಿ. ಕರಜಗಿ; ೧೯೯೩, ಭಾರತದ ಶಿಕ್ಷಣದ ಚರಿತ್ರೆ, ಶ್ರೀ ಪ್ರಕಾಶನ, ಧಾರವಾಡ

೪. ಅದೇ.

೫. ಮೆಕಾಲೆ ಹಾಗೂ ಲಾರ್ಡ್ ವಿಲಿಯಂ ಬೆಂಟಿಂಕನ ಕಾಲದಲ್ಲಿ ಅಂದರೆ ೧೮೩೫ ಮತ್ತು ೧೮೫೭ರ ನಡುವೆ ಭಾರತದಲ್ಲಿ ಅನೇಕ ಇಂಗ್ಲಿಶ್ ಶಾಲೆಗಳು ಪ್ರಾರಂಭವಾದವು. ಆಗ ಇಂಗ್ಲಿಶ್ ಕಡ್ಡಾಯ ಭಾಶೆಯಾಯಿತು. ೧೮೫೭ರಲ್ಲಿ ಕಲ್ಕತ್ತ, ಮುಂಬೈ, ಮದ್ರಾಸುಗಳಲ್ಲಿ ಮೂರು ವಿಶ್ವವಿದ್ಯಾಲಯಗಳು ಶುರುವಾದವು. ಇದರಿಂದ ಶೇಕ್ಸ್‌ಪಿಯರ್ ಕೃತಿಗಳು ಇಂಗ್ಲೆಂಡಿನಲ್ಲಿ ಪಠ್ಯವಾಗುವುದಕ್ಕಿಂತ ಮುಂಚೆ ಭಾರತೀಯ ಶಾಲಾ ಕಾಲೇಜುಗಳಲ್ಲಿ ಪಠ್ಯವಾದದ್ದು ಚಾರಿತ್ರಿಕ ಸತ್ಯ. ನಗರದ ಮೇಲುವರ್ಗ ಮತ್ತು ಮಧ್ಯಮವರ್ಗದ ಮೇಲುಜಾತಿಯ ಜನಗಳನ್ನು ಇಂಗ್ಲಿಶ್ ಆವರಿಸಿದೆ. ಇವತ್ತಿಗೂ ಇಂಗ್ಲಿಶ್ ಉನ್ನತವರ್ಗದ ಜನರ ಅಹಂನ ಸಂಕೇತವಾಗಿದೆ.(ಸಾಹಿತ್ಯ ವಿಸ್ತಾರ ೨೦೦೭)

೬. ಶ್ರೀನಿವಾಸ ಹಾವನೂರ: ೨೦೦೦, ಹೊಸಗನ್ನಡ ಅರುಣೋದಯ, ಪುಸ್ತಕ ಪ್ರಾಧಿಕಾರ, ಬೆಂಗಳೂರು.

೭. ಈ ಕಾರಣಕ್ಕಾಗಿ ಎಲ್‌ಫಿನ್‌ಸ್ಟನ್ ಮುಂಬೈ ಪ್ರಾಂತದಲ್ಲಿ 'ಬಾಂಬೆ ಎಜುಕೇಶನ್ ಸೊಸೈಟಿ ಮತ್ತು ನೇಟಿವ್ ಸ್ಕೂಲ್ ಅಂಡ್ ಬುಕ್ ಸೊಸೈಟಿ'ಗಳನ್ನು ಆರಂಭಿಸಿದ.( ಶ್ರೀನಿವಾಸ ಹಾವನೂರ:೨೦೦೦)

೮. ಸಂಸ್ಕೃತದ ಅಭ್ಯಾಸಕ್ಕೆ ಅನುಕೂಲವಾಗುವಂತೆ ಕನ್ನಡ ತರಬೇತಿಯ ಯೋಜನೆಗೆ ೧೮೭೯ರಲ್ಲಿ ಸ್ಥಳೀಯ ಅಧಿಕಾರಿಗೆ ಬರೆದ ಪರಿಪತ್ರವೊಂದು ಹೀಗಿದೆ: 'ದಕ್ಷಿಣ ಭಾಗದೊಳಗಿನ ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರವರಿಗೆ ತಿಳಿಯಪಡಿಸುವುದೇನೆಂದರೆ ಫಸ್ಟ್‌ಗ್ರೇಡ್ ಆಂಗ್ಲೊ ವೆರ್ನಾಕುಲರ್ ಶಾಲೆಗಳಲ್ಲಿ ಸಂಸ್ಕೃತ ಶಿಕ್ಷಕರನ್ನು ನೇಮಿಸಬೇಕಾಗಿದೆ. ಅವರಿಗೆ ತಿಂಗಳಿಗೆ ೩೦ ರುಪಾಯಿಗಳಂತೆ ಕಾಯಂ ಪಗಾರವು ಪಿಫಂಡಿನೊಳಗಿಂದ ಅಥವಾ ಬೇರೆ ಯಾವದೊಂದು ಅನುಕೂಲವಿದ್ದ ಉತ್ಪನ್ನದೊಳಗಿಂದ ಸಿಕ್ಕುವುದು. ಈ ಶಿಕ್ಷಕರನ್ನು ಕೆಲಸದ ಮೇಲೆ ನೇಮಿಸುವುದಕ್ಕೆ ಮುಂಚೆ ಇವರು ಒಂದು ವರುಶ ಟ್ರೇನಿಂಗ್ ಕಾಲೇಜದಲ್ಲಿ ಶಿಕ್ಷಣ ಪದ್ದತಿಯನ್ನು ಕಲಿಯಬೇಕಾಗಿರುವುದಲ್ಲದೆ. ತಮ್ಮ ಸಂಸ್ಕೃತ ಅಭ್ಯಾಸದ ಬಗ್ಗೆ ಪರೀಕ್ಷೆ ಕೊಡಬೇಕಾಗುವುದು. **ಲಿಂಗವಂತರಲ್ಲಿ ಅಯ್ಯಗಳೂ, ಬ್ರಾಹ್ಮಣರಲ್ಲಿ ಆಚಾರ್ಯರೂ** ಈ ಕೆಲಸಕ್ಕೆ ಯೋಗ್ಯರಾಗಿರುವ ಕಾರಣ ಅವರಲ್ಲಿ ಯೋಗ್ಯರಾಗಿರುವವರನ್ನು ಕುರಿತು ಶಿಫಾರಸಿಯನ್ನು ಮಾಡಬಹುದು.(ರಾ. ಯ. ಧಾರವಾಡಕರ ೧೯೭೫)

೯. ಮೊಗ್ಲಿಂಗ್ ಕನ್ನಡ ಕಾವ್ಯ, ವ್ಯಾಕರಣ, ಬೈಬಲ್ಲಿನ ತಾತ್ವಿಕ ತಳಹದಿ ಇವುಗಳನ್ನ ಬೋಧಿಸುತ್ತಿದ್ದನು. ಸಂಸ್ಕೃತ ಭಾಶೆ ಮತ್ತು ಭಾರತೀಯ ತತ್ವಜ್ಞಾನವನ್ನು ಗುಂಡರ್ಟ್ ಕಲಿಸುತ್ತಿದ್ದನು.(ಶ್ರೀನಿವಾಸ ಹಾವನೂರ ೨೦೦೦)

೧೦. ೧೯೬೬ ರಿಂದಲೂ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಕಾವ್ಯ ಹಾಗೂ ಮತಧರ್ಮಗಳ ಶಾಸ್ತ್ರಾಭ್ಯಾಸ ನಡೆಯುತ್ತಿತ್ತು.(ಶ್ರೀನಿವಾಸ ಹಾವನೂರ ೨೦೦೦)

೧೧. ಶ್ರೀನಿವಾಸ ಹಾವನೂರ ೨೦೦೦.

೧೨. ಶಿಕ್ಷಣದ ಕಾರಣವಾಗಿ ತಯಾರಾದ ೧೯ನೇ ಶತಮಾನದ ವ್ಯಾಕರಣಗಳು ಮಿಶನರಿಗಳು ಬರೆದಂತವು. ಇವು ಲ್ಯಾಟಿನ್ ವ್ಯಾಕರಣ ಪ್ರಕ್ರಿಯೆಗಳನ್ನು ಮೂಲ ಮಾಧರಿಯನ್ನಾಗಿ ಬಳಸುತ್ತವೆ. ೧೯೦೩ರಲ್ಲಿ ಪ್ರಕಟವಾದ ಕಿಟೆಲ್ ಇಂಗ್ಲಿಶ್ ಭಾಶೆಯಲ್ಲಿ ಬರೆದ 'ಕನ್ನಡ ವ್ಯಾಕರಣ' ಇದಕ್ಕೊಂದು ಉತ್ತಮ ಉದಾಹರಣೆ. ಇದಕ್ಕೆ ಹಿಂದಿನ ದಶಕಗಳಲ್ಲಿ ಬಂದ ಮಿಶನರಿ ವ್ಯಾಕರಣಗಳು ಇದೇ ಮಾಧರಿಯವು. ದೇಶೀಯ ವಿದ್ವಾಂಸರುಗಳು ಮಾತ್ರ ಸಂಸ್ಕೃತ ಭಾಶೆಯ ವ್ಯಾಕರಣ ಪ್ರಕ್ರಿಯೆಗಳ ಮೂಲಕ ಕನ್ನಡವನ್ನು ವಿವರಿಸುವ ಹಳೆಯ ಪದ್ದತಿಯನ್ನು ಮುಂದುವರೆಸಿದ್ದರು. ಆದರೆ ಮಿಶನರಿ ವ್ಯಾಕರಣಗಳ ಹಿಂದಿನ ತಾತ್ವಿಕತೆಯು ಕನ್ನಡವನ್ನು ಅದರ ಚಾರಿತ್ರಿಕ ಬೆಳವಣಿಗೆಯನ್ನು ಆಧುನಿಕ ಹಾಗೂ ಪ್ರಮಾಣ ಎನಿಸಿದ್ಧ ಮಾಧರಿಗಳಿಗೆ ಅಳವಡಿಸುವುದಾಗಿತ್ತು... ಸಂಸ್ಕೃತದ ಮೂಲಕ ನಡೆಯುತ್ತಿದ್ದ ಕನ್ನಡ ಪದಾರ್ಥ ಪ್ರಮಾಣೀಕರಣ ೧೯ನೆಯ ಶತಮಾನದಿಂದೀಚೆಗೆ ಇಂಗ್ಲಿಶ್ ಭಾಶೆಯ ಮೂಲಕ ನಡೆಯಲುತೊಡಗಿದೆ. ಕಿಟೆಲ್ಲರ ಕನ್ನಡ-ಕನ್ನಡ-ಇಂಗ್ಲಿಶ್ ನಿಘಂಟು ರಚನೆಯು ಕನ್ನಡಕ್ಕೊಂದು ಹೊಸ ದ್ವಿಭಾಶಾ ನಿಘಂಟನ್ನು ನೀಡಿದ ಚಾರಿತ್ರಿಕ ಮಹತ್ವಕ್ಕಶ್ಟೆ ಅಲ್ಲದೆ, ಪ್ರಮಾಣೀಕರಣದ ಮಾಧ್ಯಮವನ್ನು ಪಲ್ಲಟಗೊಳಿಸಿದ್ದಕ್ಕು ಗಮನಾರ್ಹವಾಗಿದೆ.(ಎಚ್.ಎಸ್.ಶ್ರೀಮತಿ ೧೯೯೩:ಪುಟ ೬೨)

೧೩. ದೇಶಭಾಶೆಗಳ ಶಿಕ್ಷಣವು ಕಾಲೇಜು ಮಟ್ಟದಲ್ಲಿ ಅನಗತ್ಯ ಎಂಬ ಧೋರಣೆಯಿಂದಾಗಿ ಮುಂಬೈ ವಿಶ್ವವಿದ್ಯಾಲಯವು ೧೮೬೬ರಿಂದ ಕನ್ನಡವನ್ನು ನಿಲ್ಲಿಸಿಬಿಟ್ಟಿತು. ಮುಂದಿನ ೨೫ ವರುಶಗಳ ಕಾಲ ಇದು ಮುಂದುವರೆಯಿತು. ಮುಂದೆ ಮಹಾದೇವ ಗೋವಿಂದ ರಾನಡೆ ಮತ್ತು ಚಿಮಣಲಾಲ ಸೆಬಲವಾಡ್ ಮತ್ತೆ ಈ ವಿಶಯವನ್ನು ಸೆನೆಟ್‌ನಲ್ಲಿ ಪ್ರಸ್ತಾಪಿಸಿ ದೇಶಭಾಶೆಗಳನ್ನು ಎಂ.ಎದವರೆಗೂ ಕಲಿಸಬೇಕೆಂಬ ಸೂಚನೆಯನ್ನು ತಂದರು. ಈ ನಿಲುವಳಿ ಸೂಚನೆಯಲ್ಲಿ ಮರಾಠಿ, ಗುಜರಾತಿ ಇವೆರಡೆ ಭಾಶೆಗಳಿದ್ದವು. ಆ ಸಂದರ್ಭದಲ್ಲಿ ಸೆನೆಟ್ ಸದಸ್ಯರಾದ ಶಾಮರಾವ್ ವಿಠಲ ಕೈಕಿಣಿ 'ಕನ್ನಡದಲ್ಲಿಯೂ ಪ್ರೌಢ ಸಾಹಿತ್ಯವಿದೆ. ಕಾವ್ಯ, ವ್ಯಾಕರಣ, ಅಲಂಕಾರಾದಿ ಗ್ರಂಥಗಳ ಸಹಸ್ರ ವರುಶದ ಪರಂಪರೆ ಇದೆ' ಎಂದು ಪ್ರತಿಪಾದಿಸಿದ್ದ ಪರಿಣಾಮ ೧೯೦೧ರಿಂದ ಕನ್ನಡವು ಎಂ.ಎ ಮಟ್ಟದಲ್ಲಿ ಅಧ್ಯಯನ ವಿಶಯವಾಯಿತು.(ಶ್ರೀನಿವಾಸ ಹಾವನೂರ ೨೦೦೦)

೧೪. ಕನ್ನಡದಲ್ಲಿ ಮೊದಲು ಮುದ್ರಿತವಾದ ಪುಸ್ತಕ ವಿಲಿಯಮ್ ಕ್ಯಾರೆಯ 'ಗ್ರಾಮರ್ ಆಫ್ ದಿ ಕರ್ನಾಟಕ ಲಾಂಗ್ವೇಜ್ ೧೮೧೭ ರಲ್ಲಿ ಕಲಕತ್ತೆಯ ಶ್ರೀರಾಮ ಪ್ರೆಸ್ಸಿನಲ್ಲಿ. ನಂತರ ೧೯೨೦ ರಲ್ಲಿ 'ಎ ಗ್ರಾಮರ್ ಆಫ್ ದಿ ಕರ್ನಾಟಕ ಲಾಂಗ್ವೇಜ್' ಮದ್ರಾಸಿನ ಪೋರ್ಟ್ ಸೆಂಟ್ ಕಾಲೇಜಿನ ಪ್ರೆಸ್ಸಿನಲ್ಲಿ ಮುದ್ರಣವಾಯಿತು.(ರಾ. ಯ. ಧಾರವಾಡಕರ: ೧೯೭೫,)

೧೫. ಹೊಸ ಕವಿತಾ ರಚನೆಗೆ ಉತ್ತಮ ಅವಕಾಶವನ್ನು ಒದಗಿಸಿದ ಇನ್ನೊಂದು ಸಾಧನವೆಂದರೆ ಪಠ್ಯಪುಸ್ತಕ. ದೊಡ್ಡ ಮಕ್ಕಳಿಗಾಗಿ ನಡುಗನ್ನಡ ಕಾವ್ಯಗಳಿಂದ ಕೆಲವು ಭಾಗಗಳನ್ನು ಆಯ್ದುಕೊಡುವುದು ಸಾಧ್ಯವಿದ್ದಿತು. ಆದರೆ ಎಳೆಯರಿಗಾಗಿ ಅತಿ ಸರಳಭಾವದ ಪದ್ಯಗಳನ್ನು ಪ್ರತ್ಯೇಕವಾಗಿ ರಚಿಸುವುದು ಅಗತ್ಯವೆನಿಸಿತು.(ಶ್ರೀನಿವಾಸ ಹಾವನೂರ ೨೦೦೦)

೧೬. ಆ ಹೊತ್ತಿಗೆ ಭಾರತದಲ್ಲಿ ೫ ವಿಶ್ವವಿದ್ಯಾಲಯಗಳು ಮತ್ತು ೧೮೬ ಕಾಲೇಜುಗಳು ಇದ್ದವು.(ಕರಜಗಿ ೧೯೯೩)

೧೭. ಪಾಟ್ನಾ, ಬನಾರಸ್, ಅಲೀಗಡ, ಲಖನೌ, ಉಸ್ಮಾನಿಯಾ ವಿಶ್ವವಿದ್ಯಾಲಯಗಳು.

೧೮. ಡಯಾರ್ಕಿ ಆಡಳಿತದ ಸಂದರ್ಭ.

೧೯. ದಿಲ್ಲಿ, ನಾಗಪುರ, ಆಂದ್ರ, ಆಗ್ರಾ ಮತ್ತು ಅನ್ನಾಮಲೈ ವಿಶ್ವವಿದ್ಯಾಲಯಗಳ ಸ್ಥಾಪನೆ.

೨೦. ಎಚ್.ಎಸ್.ಶ್ರೀಮತಿ: ೧೯೯೩.

೨೧. ಅದೇ.

೨೨. ೧೯೨೭ರಲ್ಲಿ ಸರ್ ಫಿಲಿಪ್ ಹರ್‍ಟಾಗ್ ಅಧ್ಯಕ್ಷತೆಯಲ್ಲಿ ಭಾರತದಲ್ಲಿ ಶಿಕ್ಷಣಿಕ ಬೆಳವಣಿಗೆಗಳ ಕುರಿತು ಅಧ್ಯಯನ ನಡೆಸಲು ನೇಮಿಸಲಾದ ಸಮಿತಿ.

೨೩. ಮೊದಲ ಹಂತದ ಅಧ್ಯಯನಗಳಲ್ಲಿ ಹಳಗನ್ನಡ ಸಾಹಿತ್ಯವನ್ನು ಸಂಸ್ಕೃತ ಸಾಹಿತ್ಯ ಪರಂಪರೆಯೊಂದಿಗೆ ಇರಿಸಿ ನೋಡಿ ಆ ಪರಂಪರೆಯ ಲಕ್ಷಣಗಳನ್ನು ಈ ಕಾವ್ಯ ಕೃತಿಗಳು ಮುಂದುವರಿಸುತ್ತಿರುವ ಬಗೆಯನ್ನು ಕಾಣುವ ಪರಿಪಾಠವಿತ್ತು. ಇದಕ್ಕೆ ಹಲವು ಕಾರಣಗಳಿವೆ. ಅಧ್ಯಯನಕಾರರು ಸಂಸ್ಕೃತ ಸಾಹಿತ್ಯದ ನಿಕಟ ಪರಿಚಯ ಪಡೆದವರಾಗಿದ್ದು ಹಳಗನ್ನಡ ಸಾಹಿತ್ಯಾಧ್ಯಯನ ಅವರ ವಿಸ್ತೃತ ಆಸಕ್ತಿಗಳಲ್ಲಿ ಒಂದಾಗಿತ್ತು. ಹೀಗಾಗಿ ಅವರು ತಮ್ಮ ಅಧ್ಯಯನವನ್ನು ಸಂಸ್ಕೃತ-ಕನ್ನಡ ಸಂಬಂಧಗಳಲ್ಲಿ ಬೆಳೆಸಿದರು. ಇದರೊಡನೆ ಗಮನಿಸಬೇಕಾದ ಇನ್ನೊಂದು ಕಾರಣವಿದೆ. ಸಂಸ್ಕೃತ ಕಾವ್ಯ ಪರಂಪರೆ ಹಾಗೂ ಅಖಿಲ ಭಾರತ ಸಾಹಿತ್ಯ ಎಂಬ ನಂಬಿಕೆಗಳು ದೃಡವಾಗಿದ್ದು, ದೇಶಿಯ ಸಾಹಿತ್ಯ ಪರಂಪರೆಗಳು ಈ ಮೂಲ ಪರಂಪರೆಯಿಂದ ಟಿಸಿಲೊಡೆದು ಬೆಳೆದವು ಎಂಬುದು ಅವರ ವಿಚಾರವಾಗಿತ್ತು. ಈ ವೃಕ್ಷ ಕಲ್ಪನೆ ೧೮, ೧೯ನೆಯ ಶತಮಾನದ ಯೂರೋಪಿನ ಪೌರಸ್ತ್ಯ ಚಿಂತಕರು ರೂಪಿಸಿಕೊಟ್ಟದ್ದು .(ಎಚ್.ಎಸ್.ಶ್ರೀಮತಿ ೧೯೯೩).

೨೪. ಕನ್ನಡ ಮಾತು ತಲೆಯೆತ್ತುವ ಬಗೆ- ಬಿಎಂಶ್ರೀ: ೧೯೭೦, ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ, ಕಾವ್ಯಾಲಯ, ಮೈಸೂರು.

೨೫. ಕನ್ನಡಕ್ಕೆ ಒಂದು ಕಟ್ಟು-ಅದೇ.

೨೬. ಬಿಎಂಶ್ರೀಯ ಪ್ರಕಾರ ಗ್ರಾಮ್ಯ ಎನ್ನುವುದು, 'ಉತ್ತಮ ಜಾತಿಯವರಲ್ಲಿ ಕೆಲವರು ಮಾತ್ರ, ಕೀಳುಜಾತಿಯವರು ಮಾತ್ರ ಆಡತಕ್ಕದ್ದು'-ಅದೇ.

೨೭. ಅದೇ.

೨೮. ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ-ಅದೇ.

೨೯. ಕೆ.ವಿ. ನಾರಾಯಣ: ೨೦೦೭.

೩೦. ಅದೇ.

೩೧. ತಂತ್ರಜ್ಞಾನ ಮತ್ತು ಕನ್ನಡ–ಕೆ.ವಿ.ನಾರಾಯಣ: ೨೦೦೪, ಕನ್ನಡ ಜಗತ್ತು ಅರ್ಧಶತಮಾನ, ಕನ್ನಡ ವಿ.ವಿ. ಹಂಪಿ.

ಅಧ್ಯಾಯ ೫

# ಆಧ್ಯಯನದ ಸಿದ್ಧಾಂತೀಕರಣ: ಪರಂಪರೆ ಮತ್ತು ಯಜಮಾನಿಕೆಯನ್ನು ಸಂಘಟಿಸುವಿಕೆ

ಪರಂಪರೆಯ ಅಪಕಲ್ಪನೆ: ಕನ್ನಡ ಭಾಶೆ ಮತ್ತು ಸಾಹಿತ್ಯ ಸಂಬಂಧಗಳು

ಯಜಮಾನ ಸಂಬಂಧಗಳ ಸ್ಥಿರೀಕರಿಸುವಿಕೆ: ಪಠ್ಯಕ್ರಮದ ಸಾಂಸ್ಕೃತಿಕ ರಾಜಕಾರಣ

ಯಜಮಾನಿಕೆಯ ಸ್ಥಾಪನೆ: ಪಠ್ಯಗಳ ಸಂವಹನ ಪ್ರಕ್ರಿಯೆ ಮತ್ತು ಕಲಿಕಾರ್ಥಿಯ ಸಾಮರ್ಥ್ಯ ನಿರ್ಧಾರ

ಅಧ್ಯಾಯ ೩

## ಅಧ್ಯಯನದ ಸಿದ್ಧಾಂತೀಕರಣ: ಪರಂಪರೆ ಮತ್ತು ಯಜಮಾನಿಕೆಯನ್ನು ಸಂಘಟಿಸುವಿಕೆ

ಆಧುನಿಕ ಶಿಕ್ಷಣ ವ್ಯವಸ್ಥೆಯಲ್ಲಿ ಕನ್ನಡ ಭಾಷೆಯನ್ನು ಕುರಿತ ಕಲಿಕೆಯ ಪಠ್ಯಕ್ರಮಗಳು ಹೇಗೆ ಪ್ರವೃತ್ತಗೊಂಡವು, ಅವುಗಳ ಹಿಂದಿರುವ ತಾತ್ವಿಕ ಗ್ರಹಿಕೆಗಳು ಏನಾಗಿದ್ದವು, ವಸಾಹತು ಆಧುನಿಕತೆಯೊಂದಿಗೆ ಅವುಗಳ ಮೂಲಕ ಕಟ್ಟಿಕೊಟ್ಟ ಮೌಲ್ಯಗಳೇನು ಎಂಬುದನ್ನು ಹಿಂದಿನ ಅಧ್ಯಾಯದಲ್ಲಿ ಸ್ಥೂಲವಾಗಿ ವಿವರಿಸಿಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಆ ಮೂಲಕ ಪದವಿ ಹಂತದ ಕನ್ನಡಭಾಷಾ ಕಲಿಕೆಯ ಪಠ್ಯಕ್ರಮಗಳು ಕಟ್ಟಿಕೊಡುವ **ಕನ್ನಡ ಭಾಷೆಯ ಐಡೆಂಟಿಟಿಯ ರಾಜಕಾರಣದಲ್ಲಿನ ತಾತ್ವಿಕತೆಯ**ನ್ನು ಗುರುತಿಸಿಕೊಳ್ಳುವ ಕೆಲಸವನ್ನು ಈ ಅಧ್ಯಾಯದಲ್ಲಿ ಮುಖ್ಯಮಾಡಿಕೊಳ್ಳಲಾಗಿದೆ.

ಶಿಕ್ಷಣದ ಸಂದರ್ಭದಲ್ಲಿ ಪಠ್ಯವು ಪೂರ್ವ ನಿರ್ಧರಿತ ವಿಶಯವಾಗಿದ್ದು **ಏನನ್ನು ಕಲಿಯುವುದು**[i] ಎಂಬ ಸೂಚನೆಯೊಂದಿಗೆ **ಇದನ್ನೇ ಕಲಿಯಬೇಕು** ಎಂಬ ನಿರ್ದೇಶಿತ ವಾಸ್ತವವನ್ನೂ ಒಳಗೊಂಡಿರುತ್ತದೆ. ಇದರಿಂದಾಗಿ ಇದೇ ಅದರ ಐಡಿಯಾಲಜಿಕಲ್ ಆದ ನೆಲೆಯೂ ಆಗಿಬಿಡುತ್ತದೆ. ಆದ್ದರಿಂದ, ಪಠ್ಯ ನಿರ್ಮಿತಿಯ ಸಾಂಸ್ಕೃತಿಕ ರಾಜಕಾರಣ ಮತ್ತು ಶಿಕ್ಷಣದ ಮೂಲ ಉದ್ದೇಶಕ್ಕೆ ಸಂಬಂಧಿಸಿದ ಸಮಸ್ಯೆಗಳು ಇಲ್ಲಿ ಮುಖ್ಯವಾಗುತ್ತವೆ.

ಹೀಗಾಗಿ **ಪಠ್ಯ**ವು ಶಿಕ್ಷಣದ ಮೂರ್ತ ಚಟುವಟಿಕೆಗಳೆಂದು ಪರಿಗಣಿಸಿರುವ ಬೋಧನೆ, ಕಲಿಕೆ ಮತ್ತು ಕಲಿಕೆಯ ಸಾಮರ್ಥ್ಯದ ಅಳತೆಗಳನ್ನು ನಿರ್ದೇಶಿಸುವ ಮೂಲಕ ಚಾಲನೆಗೆ ಬರುತ್ತದೆ. ಜೊತೆಗೆ, ಇದರೊಳಗಡೆ ಒಂದು ನಿಶ್ಚಿತ ವಿನಿಮಯ ದರವೂ ಸಹ ಕ್ರಿಯಾಶೀಲವಾಗತೊಡಗುತ್ತದೆ. ಪಠ್ಯದ ಈ ಸ್ವರೂಪವು **ವ್ಯಕ್ತಿ** ಪಡೆಯಬೇಕಾದ ಶಿಕ್ಷಣವನ್ನು ನಿರ್ಧರಿಸುವ ಪ್ರಮುಖ ಮಾನದಂಡವಾಗಿ ಮಾರ್ಪಡುತ್ತದೆ. ಹಾಗಿದ್ದರೆ ಪಠ್ಯ ಎನ್ನುವುದು ಏನು,

ಯಾವುದು, ಯಾಕೆ ಅಥವಾ ಪಠ್ಯ ಎನ್ನುವುದು ಯಾವಾಗ ಮತ್ತು ಹೇಗೆ ಎಂಬ ಪ್ರಶ್ನೆಗಳು ಮುಖ್ಯವಾಗುತ್ತವೆ. ಇಂಥಲ್ಲಿ ಕಲಿಕಾರ್ಥಿಗಳಿಗೆ ಬೇಕಾದ ಪಠ್ಯ **ಇದೇ** ಎಂದು ನಿರ್ಧರಿಸಲಾಗಿರುವ ಏಕರೂಪಿ ನಿರ್ದೇಶನದ ಹಿಂದಿನ ಪೂರ್ವಗ್ರಹಿಕೆಗಳು ಯಾವುವು ಎಂಬುದೂ ಸಹ ಚರ್ಚೆಯನ್ನು ಬಯಸುತ್ತದೆ. ಈ ಪ್ರಕ್ರಿಯೆಯಲ್ಲಿ ಕಲಿಕಾರ್ಥಿಗಳು, ಬೋಧಕರು, ಪಠ್ಯ ನಿರ್ಧಾರಕರು ಸೇರಿದಂತೆ ಒಟ್ಟು ಶಿಕ್ಷಣ ವ್ಯವಸ್ಥೆಗೆ ಯಾವುದೇ ಐಡಿಯಲಾಜಿಕಲ್ ಆದ ಗೊಂದಲಗಳು ಇಲ್ಲವೆಂದೇ ಭಾವಿಸಲಾಗಿದೆ. ಇವುಗಳೊಳಗೆ ಅಧಿಕಾರ ಸಂಬಂಧಗಳು ಅಸ್ತಿತ್ವದಲ್ಲಿದ್ದು, ಅಂತಿಮವಾಗಿ ಈ ಅಧಿಕಾರ ಸಂಬಂಧಗಳೇ ಕಲಿಕೆಯಾಗಿ ಮಾರ್ಪಡುತ್ತದಲ್ಲವೇ ಎಂಬ ಪ್ರಶ್ನೆಯು ಕಲಿಕಾರ್ಥಿಯ ಸಾಮಾಜೀಕರಣದ ಹಿನ್ನೆಲೆಯನ್ನು ಮತ್ತು ಪಠ್ಯದ ಹಿಂದಿನ **ಸಾಮಾಜಿಕ ಪಠ್ಯವನ್ನು** ಶೋಧಿಸುವಂತೆ ಪ್ರೇರೇಪಿಸುತ್ತದೆ. ಹಾಗಾಗಿ ಈ ಸಂಗತಿಯು ಕನ್ನಡ ಭಾಷಾ ಕಲಿಕೆಯ ಮೂಲ ಉದ್ದೇಶವನ್ನು ಈಡೇರಿಸುವಲ್ಲಿ ಎಷ್ಟು ಸಮರ್ಥವಾಗಿದೆ ಎಂಬುದನ್ನು ಪರಂಪರೆಯ ಅಪಕಲ್ಪನೆ ಮತ್ತು ಯಜಮಾನಿಕೆಯ ಪರಿಕಲ್ಪನೆಗಳ ಮೂಲಕ ಈ ಅಧ್ಯಾಯದಲ್ಲಿ ಚರ್ಚೆಗೆ ತೆಗೆದುಕೊಳ್ಳಲಾಗಿದೆ.

ಈ ಹಿನ್ನೆಲೆಯಲ್ಲಿ ಸುಮಾರು, ಕಳೆದ ಒಂದೂವರೆ ಶತಮಾನದ ಆಧುನಿಕ ಶಿಕ್ಷಣ ಕುರಿತ ಮುಖ್ಯ ಸಂಗತಿಗಳನ್ನು ಅದಕ್ಕೆ ಪೂರಕವೆನ್ನುವಂತೆ ಕಟ್ಟಿಕೊಂಡು ಬಂದ ಕನ್ನಡ ಭಾಶೆ ಮತ್ತು ಕನ್ನಡ ಸಾಹಿತ್ಯ ಕುರಿತ ಪ್ರಮುಖ ವಿದ್ಯಮಾನಗಳನ್ನು ಮತ್ತು ಅವುಗಳ ಹಿಂದಿನ ತಾತ್ವಿಕ ತಿಳುವಳಿಕೆಯನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಅಲ್ಲದೆ, ಕನ್ನಡಭಾಶಾ ತಿಳುವಳಿಕೆಯ ಶೈಕ್ಷಣಿಕ ಪಠ್ಯಗಳಲ್ಲಿನ ತೊಡಕುಗಳನ್ನು ಕಂಡುಕೊಳ್ಳಲು ಬರುವುದಿಲ್ಲ. ಯಾಕೆಂದರೆ, ಕನ್ನಡ ಶೈಕ್ಷಣಿಕ ಪಠ್ಯಕ್ರಮದ ಸಂದರ್ಭದಲ್ಲಿ ಕನ್ನಡ ಭಾಶೆ ಮತ್ತು ಸಾಹಿತ್ಯದ ಅಧ್ಯಯನ ಪರಸ್ಪರ ಒಂದು ಮತ್ತೊಂದನ್ನು ಪ್ರೇರೇಪಿಸುತ್ತಾ, ಪೂರಕವಾಗಿ ನಡೆಯುತ್ತ ಬಂದ ಚಟುವಟಿಕೆಗಳಾಗಿವೆ. ೧೯ನೆ ಶತಮಾನದಲ್ಲಿ ಆರಂಭವಾದ ಪ್ರಾಚೀನ ಸಾಹಿತ್ಯದ ಶೋಧನೆ, ಪರಿಶ್ಕರಣೆ, ಸಂಪಾದನೆ ಮತ್ತು ಆಧುನಿಕವಾದ ಕನ್ನಡ ಶಿಕ್ಷಣ ಇವೆರಡೂ ಚಟುವಟಿಕೆಗಳು ಈ ಪರಸ್ಪರಾವಲಂಬನೆಯನ್ನು ಅನಿವಾರ್ಯವೆಂಬಂತೆ ಕಂಡುಕೊಂಡು ಮುಂದುವರಿದ ಸಂಗತಿಗಳೇ ಆಗಿವೆ. ಪ್ರಾಚೀನ ಸಾಹಿತ್ಯದ ಶೋಧನೆ ಮತ್ತು ಪರಿಶ್ಕರಣೆಯ ಕಾರ್ಯದ ಮೂಲಕ ಆಧುನಿಕವಾಗಿ ಕಟ್ಟಿಕೊಂಡ ಕನ್ನಡ ಸಾಹಿತ್ಯ ಪರಂಪರೆ, ಸಾಹಿತ್ಯ ಸಂಸ್ಕೃತಿಯನ್ನು ಕುರಿತ ಅಪಕಲ್ಪಿತ ಗ್ರಹಿಕೆಗಳು[೩]-ಇದನ್ನು ಮುಂದೆ ವಿವರಿಸಿಕೊಳ್ಳಲಾಗುತ್ತದೆ-ನಾಡುನುಡಿಯ ಅಭಿಮಾನ, ಕನ್ನಡ ಭಾಶೆಯನ್ನು ಕುರಿತಂತೆ ಏಕೀಕೃತ ನೆಲೆಗಳನ್ನು(ಕರ್ನಾಟಕದ ಏಕೀಕರಣ ಮತ್ತು ಕನ್ನಡ ಭಾಶೆಯ ಏಕೀಕರಣ)ಬೆಳೆಸುತ್ತಲೇ

ಜಾರಿಗೊಂಡಿವೆ. ಕವಿಚರಿತೆಗಳು ಹುಟ್ಟಿಕೊಂಡದ್ದು, ಈ ಕವಿಚರಿತೆಗಳೆ ಸಾಹಿತ್ಯದ ಚರಿತ್ರೆಗಳಾಗಿ ಇಪ್ಪತ್ತನೆಯ ಶತಮಾನದುದ್ದಕ್ಕೂ ಮರು ನಿರೂಪಣೆಗೆ ಒಳಗಾಗಿ ಕನ್ನಡ ಸಾಹಿತ್ಯದ ಅಧ್ಯಯನವನ್ನು ವ್ಯಾಖ್ಯಾನಿಸುವ ಮುಖ್ಯ ಪರಿಕರವಾಗಿದ್ದನ್ನು ಗಮನಿಸಿಕೊಳ್ಳಬೇಕಾಗುತ್ತದೆ. ಜೈನ, ವೀರಶೈವ, ಬ್ರಾಹ್ಮಣ ಯುಗಗಳನ್ನು ಪ್ರಧಾನವಾಗಿ ಕನ್ನಡ ಸಮಾಜದ ಧಾರ್ಮಿಕ ವಂಶ ಪರಂಪರೆಗಳನ್ನಾಗಿ ಹೆಣೆದುಕೊಂಡು, ಕನ್ನಡ ಸಾಹಿತ್ಯ ಮತ್ತು ಸಮಾಜದ ಸಂಬಂಧಗಳನ್ನು ವಿವರಿಸಿಕೊಂಡಿರುವ **ಕನ್ನಡಿಗರ ಗತವೈಭವ**ವನ್ನು ಗಮನಿಸುತ್ತಲೇ ಇದನ್ನು ವಿವರಿಸಿಕೊಳ್ಳಬೇಕಾಗಿದೆ. ಈ ಕಾರಣವಾಗಿ ಕರ್ನಾಟಕದ ಸಂದರ್ಭದಲ್ಲಿ ಕಾಲೇಜು ಕನ್ನಡ ಭಾಶೆಯ ಪಠ್ಯಗಳ ಸ್ವರೂಪವನ್ನು ನಿರ್ಧರಿಸುವಲ್ಲಿ ಪ್ರವೃತ್ತವಾಗಿರುವ ಇಂಥ ತಾತ್ವಿಕ ತಿಳುವಳಿಕೆಯ ಪ್ರಶ್ನೆಗಳನ್ನು ಮುಂದಿನ ಈ ಮೂರು ಉಪ ಅಧ್ಯಾಯಗಳಲ್ಲಿ ವಿಶ್ಲೇಶಣೆಗೆ ತೆಗೆದುಕೊಳ್ಳಲಾಗಿದೆ.

೫.೧ ಪರಂಪರೆಯ ಅಪಕಲ್ಪನೆ: ಕನ್ನಡ ಭಾಶೆ ಮತ್ತು ಸಾಹಿತ್ಯ ಸಂಬಂಧಗಳು

೫.೨ ಯಜಮಾನ ಸಂಬಂಧಗಳ ಸ್ಥಿರೀಕರಿಸುವಿಕೆ: ಪಠ್ಯಕ್ರಮದ ಸಾಂಸ್ಕೃತಿಕ ರಾಜಕಾರಣ

೫.೩ ಯಜಮಾನಿಕೆಯ ಸ್ಥಾಪನೆ: ಪಠ್ಯಕ್ರಮದ ಸಂವಹನ ಪ್ರಕ್ರಿಯೆ ಮತ್ತು ಕಲಿಕಾರ್ಥಿಯ ಸಾಮರ್ಥ್ಯ ನಿರ್ಧಾರ

**೫.೧ ಪರಂಪರೆಯ ಅಪಕಲ್ಪನೆ: ಕನ್ನಡ ಭಾಶೆ ಮತ್ತು ಸಾಹಿತ್ಯ ಸಂಬಂಧಗಳು**

ಕಳೆದ ಶತಮಾನದುದ್ದಕ್ಕೂ ನಡೆದಿರುವ ಕನ್ನಡ ಭಾಶೆ ಮತ್ತು ಕನ್ನಡಸಾಹಿತ್ಯದ ಅಧ್ಯಯನದ ಹಿಂದಿನ ಬಹುಮುಖ್ಯ ತಾತ್ವಿಕ ತಿಳುವಳಿಕೆಯೆಂದರೆ, ಕನ್ನಡ ಭಾಶೆಗೆ, ಕನ್ನಡ ಸಾಹಿತ್ಯಕ್ಕೆ ಒಂದು **ಪರಂಪರೆ** ಇದೆ, ಈ ಪರಂಪರೆ ಇಡೀ ಬದುಕನ್ನು, ಭಾಶೆಯನ್ನು, ಸಾಹಿತ್ಯವನ್ನು ನಿರಂತರವಾಗಿ ಪ್ರೇರೇಪಿಸುತ್ತಿರುತ್ತದೆ ಮತ್ತು ಪ್ರಭಾವಿಸುತ್ತಿರುತ್ತದೆ ಎನ್ನುವುದು. ಈ ಬಗೆಯ ತಿಳುವಳಿಕೆಯನ್ನು ಪಾಶ್ಚಿಮಾತ್ಯ ಸಾಹಿತ್ಯದ ಪ್ರಭಾವ ಮತ್ತು ಪ್ರೇರಣೆಗಳನ್ನು ವಿವರಿಸಿಕೊಳ್ಳುತ್ತಲೇ ಸಂಸ್ಕೃತ ಪರಂಪರೆಯ ಮೂಲಕ ಕಟ್ಟಿಕೊಳ್ಳುವ ಕೆಲಸವನ್ನು ಕನ್ನಡದ ಸಂದರ್ಭದಲ್ಲಿ ಮಾಡಲಾಗಿದೆ. ಎಚ್.ಎಸ್ ಶ್ರೀಮತಿಯವರು ಗುರುತಿಸುವಂತೆ, ಇಂಥ 'ಪರಂಪರೆ ಎಂಬ ಪರಿಕಲ್ಪನೆ ಮುಖ್ಯವಾಗಿ ಹತ್ತೊಂಬತ್ತನೆಯ ಶತಮಾನದ ಡಾರ್ವಿನ್ **ವಿಕಾಸವಾದ**ದ ಪ್ರಭಾವದಿಂದ ಸಂಸ್ಕೃತಿ, ಸಾಹಿತ್ಯಗಳ ವಲಯಕ್ಕೆ ಪ್ರವೇಶಿಸಿದಂತೆ ತೋರುತ್ತದೆ. 'ವಿಕಾಸವಾದವು ಪ್ರತಿಪಾದಿಸಿದ ಜೈವಿಕ ಆವರ್ತನೆ ಮತ್ತು ನಿರಂತರತೆ ಇವೆರಡು ಗುಣಗಳು ಪರಂಪರೆ ಎಂಬ ಕಲ್ಪನೆಗೆ ಅನುವು ಮಾಡಿಕೊಟ್ಟವು. ಸಂಸ್ಕೃತಿಯನ್ನು ಇಂಥವೇ ಜೈವಿಕ ಪರಿಕಲ್ಪನೆಯ ಮೂಲಕ ಪರಿಶೀಲಿಸುವುದು

ಸಾಧ್ಯವಾಗಿ ಕೊನೆಗೆ ಸಾಹಿತ್ಯ ತತ್ವದ ಭಾಗವಾಗಿದೆ'(ಎಚ್.ಎಸ್.ಶ್ರೀಮತಿ, ೧೯೯೩). ಕನ್ನಡ ಪಠ್ಯಕ್ರಮಗಳ ಪರಂಪರೆಯನ್ನು ಗಮನಿಸಿದರೂ ಇದು ಸ್ಪಷ್ಟವಾಗುತ್ತದೆ. ಇದನ್ನು ಮುಂದಿನ ಅಧ್ಯಾಯದಲ್ಲಿ ಪಠ್ಯಕ್ರಮಗಳ ಸಂದರ್ಭದಲ್ಲಿ ವಿವರವಾಗಿ ಗಮನಿಸಲಾಗುತ್ತದೆ. ಪರಂಪರೆಯನ್ನು ಕುರಿತಂತೆ;

> ಒಂದು ಸಮುದಾಯದ ಪರಂಪರೆ ರೂಪುಗೊಳ್ಳುವುದೇ ಭೂತದಿಂದ ವರ್ತಮಾನಕ್ಕೆ ಹರಿದು ಬಂದ ನಂಬಿಕೆಗಳು, ಸಂಕೇತಗಳು, ಪ್ರತಿಮೆಗಳು, ಆಚರಣೆಗಳು, ಲೋಕದರ್ಶನ, ನೆನಪು, ಹಾಗೂ ಸಂಸ್ಥೆಗಳ ಮೂಲಕ. ಈ ದೃಷ್ಟಿಯಿಂದ, ಪರಂಪರೆಯೆಂದರೆ ಒಂದು ಸಮುದಾಯದ ಭೂತದ ಮುಂದುವರಿಕೆ

ಎನ್ನುವ ಡಾ. ನಟರಾಜ ಹುಳಿಯಾರ್[೪];

> ಸಂಸ್ಕೃತದ **ಪರಂಪರಾ** ಎಂಬ ಶಬ್ದ ಆದಿಯಿಂದ ನಿರಂತರವಾಗಿ ಮುಂದುವರಿಸಿಕೊಂಡು ಬಂದ ಹಾಗೂ ಸಮುದಾಯ ಬದ್ಧವಾಗಿರಬೇಕಾದ ಮೌಲ್ಯಗಳು ಮತ್ತು ಆಚರಣೆಗಳನ್ನು ಸೂಚಿಸುತ್ತದೆ. ಹೀಗೆ ಸಮುದಾಯದ ಬದ್ಧತೆಯನ್ನು ಒತ್ತಾಯಿಸಬಲ್ಲ ಹಕ್ಕು ಪರಂಪರೆಗೆ ಪ್ರಾಪ್ತವಾಗುವುದು ಕೇವಲ ಅದರ ಪ್ರಾಚೀನತೆಯಿಂದಲ್ಲ; ಆ ಹಕ್ಕು ಪರಂಪರೆಗೆ ಪ್ರಾಪ್ತವಾಗುವುದು ಅದು ವ್ಯವಸ್ಥಿತ ಜೀವನಕ್ರಮವೊಂದರ ಅವಿಭಾಜ್ಯ ಅಂಗವಾಗಿ ಪಿತೃಪಿತಾಮಹರಿಂದ, ಹಿರೀಕರಿಂದ ಹಾಗೂ ಒಂದು ಜನಾಂಗದ ತಲೆಮಾರು ಸಾಮೂಹಿಕವಾಗಿ ಪಡೆದುಕೊಂಡು(ಕಲೆಕ್ಟೀವ್ ಇನ್‌ಹೆರಿಟೆನ್ಸ್) ಬಂದಿರುವುದರಿಂದ

ಎಂದು ವಿವರಿಸಿಕೊಳ್ಳುತ್ತಾರೆ. ಆಧುನಿಕತೆ ಮತ್ತು ಪರಂಪರೆ ಕುರಿತ ತಮ್ಮ ಚರ್ಚೆಯನ್ನು ಮುಂದುವರಿಸುತ್ತಾ;

> ತನ್ನ ಮೂಲ ಚೌಕಟ್ಟನ್ನು ಭದ್ರವಾಗಿ ಉಳಿಸಿಕೊಂಡು, ಕಾಲಕಾಲಕ್ಕೆ ಪುನರ್ರಚನೆ ಹಾಗೂ ಹೊಸ ಸಮೀಕರಣಗಳಿಗೆ ಒಳಗಾಗುತ್ತಲೇ ಮುನ್ನಡೆಯುವ ಪರಂಪರೆಯ ಅಧಿಕಾರ ಕೇಂದ್ರಗಳಿಗೆ ಬಹುದೊಡ್ಡ ಸವಾಲು ಎದುರಾಗುವುದು ಆಧುನಿಕತೆಯ ಮೂಲಕ; ಅದರಲ್ಲೂ ಸೆಕ್ಯುಲರ್ ಲೋಕದರ್ಶನ ಹಾಗೂ ವೈಜ್ಞಾನಿಕ ತಳಹದಿಯ ಮೇಲೆ ನಿಂತ ಆಧುನಿಕ ನೋಟಕ್ರಮಗಳ ಮೂಲಕ'

ಎಂದು ಗುರುತಿಸುತ್ತಾರೆ. ಆದ್ದರಿಂದಾಗಿ **ಆಧುನಿಕತೆ** ಎನ್ನುವುದು **ಪರಂಪರೆಗೆ** ವಿರೋಧವಾದುದೆಂದು ಹೊರನೋಟಕ್ಕೆ ಮಾತ್ರ ಕಾಣುವ, ಕಟ್ಟಿಕೊಳ್ಳುವ ಉಪಾಯವಾಗಿದ್ದು

ಅದು ಪರಂಪರೆಯನ್ನು ತನ್ನ ಸೆಕ್ಯುಲರ್ ದರ್ಶನಗಳ ಮೂಲಕ ಮತ್ತಷ್ಟು ಗಟ್ಟಿಯಾಗಿಸಿಕೊಳ್ಳುವ ಪರಿಕ್ರಮಗಳನ್ನು ಒದಗಿಸುವುದಾಗಿ ಚಾಲ್ತಿಗೆ ಬರುತ್ತದೆ. ಡಾ. ನಟರಾಜ್ ಇದನ್ನು;

> ಭೂತದೊಂದಿಗೆ ತಮ್ಮ ಸಂಬಂಧವನ್ನು ಪುನರ್‌ವ್ಯಾಖ್ಯಾನಿಸಿಕೊಂಡಾಗ, ಭೂತದಿಂದ ತಮ್ಮನ್ನು ತಾವು ಕಡಿದುಕೊಂಡಾಗ ಅಥವಾ ಭೂತದಿಂದ ಕಡಿದುಹೋದ ತಮ್ಮ ಸಂಬಂಧವನ್ನು ಪುನರ್‌ಸ್ಥಾಪಿಸಿಕೊಳ್ಳಲೆತ್ನಿಸಿದಾಗ–ಈ ಮೂರೂ ಹಂತಗಳಲ್ಲಿ ಆಧುನಿಕತೆ ಎಂಬ ಪರಿಕಲ್ಪನೆ ಇತಿಹಾಸದಲ್ಲಿ ಹೆಚ್ಚು ಚಾಲ್ತಿಗೆ ಬಂದಂತಿದೆ

ಎಂದು ವಿವರಿಸಿಕೊಳ್ಳುತ್ತಾರೆ. ಅಲ್ಲದೆ ಹೀಗೆ;

> ಸ್ಥಾಪಿತ ಅಧಿಕಾರ ಸಂಬಂಧಗಳನ್ನು ಮುಂದುವರಿಸುವ ಪ್ರಕ್ರಿಯೆಯ ಭಾಗವಾಗಿ ಆಧುನಿಕತೆಯು ಒಂದು ಬಹು ದೊಡ್ಡ ಆಳುವ ಭಾಶೆಯಾಗಿ, ಸಂಕಥನವಾಗಿ, ವ್ಯವಸ್ಥೆಯಾಗಿ, ಧೋರಣೆಯಾಗಿ, ನಿರ್ದೇಶಿಸುವ ಹಾಗೂ ನಿಯಂತ್ರಿಸುವ ಸಾಧನವಾಗಿ ಮಾನವನ ಪ್ರಜ್ಞೆ ಹಾಗೂ ಸಂವೇದನೆಗಳನ್ನು ನಿರ್ಣಯಕವಾಗಿ ಬದಲಿಸುವ ನೋಟಕ್ರಮವಾಗಿ ಪುನರುಜ್ಜೀವನದಿಂದೀಚೆಗೆ ಬೆಳೆದು ಬಂತು ಹಾಗೂ ಇಪ್ಪತ್ತನೇ ಶತಮಾನದ ಮುಖವನ್ನೇ ಬದಲಿಸಿತು

ಎಂದು ಗುರುತಿಸುತ್ತಾರೆ.

ಹೀಗೆ, ಸಂಸ್ಕೃತ ಪರಂಪರೆಯು ಕಟ್ಟಿಕೊಳ್ಳುವ **ಭೂತ**ದ ಮುಂದುವರಿಕೆಯು ಆಧುನಿಕವಾಗಿ ನಡೆಯುವ ಕನ್ನಡ ಭಾಶೆ, ಸಾಹಿತ್ಯ ಪರಂಪರೆಯ ಅಧ್ಯಯನಗಳಲ್ಲಿ **ಸೆಕ್ಯುಲರ್** ಲೋಕ ದರ್ಶನವಾಗಿ ಅಧಿಕೃತವಾಗಿಸುವ ಪ್ರಕ್ರಿಯೆಯನ್ನು ಗಮನಿಸಬಹುದಾಗಿದೆ. ಇದನ್ನು, ಹೊಸಗನ್ನಡ ಅರುಣೋದಯ(ಶ್ರೀನಿವಾಸ ಹಾವನೂರ್), ಹೊಸಗನ್ನಡ ಉದಯಕಾಲ(ರಾಯ ಧಾರವಾಡಕರ), ಕನ್ನಡ ನವೋದಯ ಕಾವ್ಯದ ಮೇಲೆ ಇಂಗ್ಲಿಶ್ ರೊಮ್ಯಾಂಟಿಕ್ ಕಾವ್ಯದ ಪ್ರಭಾವ(ಅನಂತನಾರಾಯಣ), ಹೊಸಗನ್ನಡ ಸಾಹಿತ್ಯ(ಎಲ್.ಎಸ್.ಶೇಶಗಿರಿರಾವ್), ಯುಗಧರ್ಮ ಮತ್ತು ಸಾಹಿತ್ಯ ದರ್ಶನ, ಕನ್ನಡ ಸಾಹಿತ್ಯ ಸಂಗಾತಿ, ನೂರು ಮರ ನೂರು ಸ್ವರ(ಕೆ.ಡಿ. ಕುರ್ತಕೋಟಿ) ಕನ್ನಡ ಸಾಹಿತ್ಯ; ಚಾರಿತ್ರಿಕ ಬೆಳವಣಿಗೆ(ಸಿ.ವೀರಣ್ಣ)ಗಳಲ್ಲಿ ಮತ್ತಶ್ಟು ಸ್ಪಶ್ಟವಾಗಿರುವುದನ್ನು ಕಾಣಬಹುದಾಗಿದೆ. ಇದು ಕನ್ನಡ ನವೋದಯ, ಪ್ರಗತಿಶೀಲ, ನವ್ಯ, ಬಂಡಾಯವೆಂದು ಆಧುನಿಕ ಸಾಹಿತ್ಯವನ್ನು ಚಳುವಳಿಗಳಾಗಿ ವಿಂಗಡಿಸಿ ವಿವರಿಸಿಕೊಳ್ಳುವ ನೆಲೆಗಳಲ್ಲಿಯೂ ಪ್ರಧಾನವಾಗಿ ಕಾಣುವ ಅಂಶವಾಗಿದೆ. ಜಿ.ಎಸ್.ಎಸ್ ಅವರ 'ಕನ್ನಡ ಸಾಹಿತ್ಯ ಸಮೀಕ್ಷೆ', ಅವರ ಸಂಪಾದಕತ್ವದ 'ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ'ಯ ಸಂಪುಟಗಳು ಇಂತಹ ಅಧ್ಯಯನ ಪರಂಪರೆಯ

ಮುಂದುವರಿದ ನೆಲೆಗಳೇ ಆಗಿವೆ. ಅಲ್ಲದೆ ಸ್ತ್ರೀವಾದಿ ಸಾಹಿತ್ಯ, ದಲಿತ ಸಾಹಿತ್ಯ ಎಂಬ ಜಾತಿ, ಲಿಂಗಾಧಾರಿತ ವಿಭಾಗೀಕರಣಗಳಲ್ಲೂ ಇದು ಕಾಣಿಸಿಕೊಳ್ಳುತ್ತದೆ. ಉದಾಹರಣೆಗೆ, ವಚನಕಾರರು ಮತ್ತು ವಚನ ಸಾಹಿತ್ಯದ ಪ್ರೇರಣೆ ಪ್ರಭಾವಗಳನ್ನು ದಾಖಲಿಸುವುದು. ಇದು ಆಧುನಿಕ ಶಿಕ್ಷಣದ ಭಾಗವಾದ ಕನ್ನಡ ಭಾಷಾ ಕಲಿಕೆಯನ್ನೂ ನಿರ್ಧರಿಸುತ್ತದೆ ಎನ್ನುವುದನ್ನು ಶೋಧಿಸಿಕೊಳ್ಳುವುದು ಮುಖ್ಯವಾದುದಾಗಿದೆ.

ಕನ್ನಡ ಕಾವ್ಯ ಪರಂಪರೆ ಮತ್ತು ಬೇಂದ್ರೆ ಪ್ರತಿಭೆಯನ್ನು ಕುರಿತು ಮಾತನಾಡುತ್ತ ಡಾ. ಹೆಚ್. ಎಸ್. ರಾಘವೇಂದ್ರರಾವ್[ii] 'ಒಂದು ಭಾಶೆಯ ಸಾಹಿತ್ಯ ಸಂದರ್ಭದಲ್ಲಿ ಕವಿ ಪರಂಪರೆಯೊಂದು ಇರುವ ಹಾಗೆಯೇ ವಾಚಕ ಪರಂಪರೆಯೂ ಇರುತ್ತದೆ. ಇವೆರಡರ ನಡುವೆ ಸಂಬಂಧಗಳು ಸಂವಹನದ ಸ್ವರೂಪ ಮತ್ತು ತಂತ್ರಜ್ಞಾನಗಳಿಂದ ತೀರ್ಮಾನವಾಗುತ್ತವೆ' ಎನ್ನುತ್ತಾ 'ಪರಂಪರೆ ಎನ್ನುವುದು ಹತ್ತು ಹಲವು ಹೊಳೆಗಳ ಕೂಡು ಹ(ಹಿ)ರಿಯುವಿಕೆ' ಎಂದು ವಿವರಿಸುವಾಗ ಈ ಪಾರಂಪರಿಕ ವಾಚಕರು ಯಾವ ವರ್ಗವಾಗಿತ್ತು? ಅದರ ಭಾಗವಾಗಿ ಬೇಂದ್ರೆ ಹೇಗೆ ಮುನ್ನೆಲೆಯನ್ನು ಪಡೆದುಕೊಂಡರು ಎಂಬುದನ್ನು ಮರೆಯಲ್ಲಿಡುತ್ತಲೇ ತಮ್ಮ ಚರ್ಚೆಯಲ್ಲಿ ಪ್ರಾಚೀನ ಕವಿಗಳಾದ ಪಂಪ, ಬಸವ, ಅಲ್ಲಮ, ಹರಿಹರ, ರಾಘವಾಂಕ, ರತ್ನಾಕರರನ್ನು, ಆಧುನಿಕದ ಬೇಂದ್ರೆ, ಅಡಿಗ, ಸಿದ್ಧಲಿಂಗಯ್ಯ, ಶಿವಪ್ರಕಾಶರನ್ನು ಸಾಲಾಗಿರಿಸಿ ನೋಡಬಯಸುತ್ತಾರೆ. ಹೀಗೆ ಜೋಡಿಸುವುದು ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಿಂದ ಓರಿಯಂಟಲಿಸ್ಟ್ ತಿಳುವಳಿಕೆಗನುಗುಣವಾಗಿ ಚರಿತ್ರೆಯನ್ನು ಗ್ರಹಿಸುತ್ತಾ ಬಂದಿರುವ ಕ್ರಮವೇ ಆಗಿದೆ ಎಂಬುದನ್ನು ಗ್ರಹಿಸಬೇಕಾಗುತ್ತದೆ. ಇದು ಬಹುಮುಖಿಯಾದ ಕನ್ನಡಭಾಶಿಕ ಜಾತಿ, ಕುಲ ಸಮುದಾಯಗಳ ಸಾಮಾಜಿಕ ನ್ಯಾಯವನ್ನು ವಿವರಿಸಿಕೊಳ್ಳುವಲ್ಲಿ ತೊಡಕನ್ನು ಒಡ್ಡುತ್ತದೆ. ಪರಂಪರೆ ಕುರಿತ ಇಂಥ ಅಪಕಲ್ಪನೆಗಳು ಕಳೆದ ನೂರಕ್ಕೂ ಹೆಚ್ಚು ವರುಶಗಳ ಅವಧಿಯಲ್ಲಿ ಎಣಿಕೆಗೆ ಸಿಗದಶ್ಟು ದಾಖಲಾಗಿರುವುದನ್ನು ಕನ್ನಡ ಸಾಹಿತ್ಯ, ಸಂಸ್ಕೃತಿಯ ಕುರಿತ ಚರ್ಚೆಯ ಸಂದರ್ಭದಲ್ಲಿ ಗಮನಿಸಬಹುದಾಗಿದೆ. ಹೆಚ್.ಎಸ್.ಆರ್. ಮತ್ತೂ ಮುಂದುವರಿದು 'ಕನ್ನಡ ಕವಿತೆಯಲ್ಲಿ ಆಶಯಗಳ ಪರಂಪರೆಯೊಂದು ಇರುವಂತೆ, ಆಕೃತಿಗಳ ಪರಂಪರೆಯೊಂದು ಇದೆ' ಎನ್ನುತ್ತಾ 'ಮೌಖಿಕ ಪರಂಪರೆಯ ಕವಿತೆಗಳು ನೀಡುತ್ತಿದ್ದ ಸ್ವಾತಂತ್ರ್ಯವನ್ನು ಬೇಂದ್ರೆ ಕವಿತೆ ಇಪ್ಪತ್ತನೇ ಶತಮಾನದ ಖಾಸಗಿ ಓದಿನಲ್ಲಿಯೂ ನೀಡುತ್ತದೆ' ಎಂಬ ಮಾತುಗಳು ಸಾಮಾಜಿಕವಾಗಿ ಯಾವ ತಿಳುವಳಿಕೆಯನ್ನೂ ವಿಸ್ತರಿಸಲಾರದು. ಈ ಬಗೆಯ ಅರಿವನ್ನು ಕಟ್ಟುವ ಪರಂಪರೆಯ ಬಗೆಗೆ ತಕರಾರನ್ನು(ಮೊಗಳ್ಳಿ ಗಣೇಶ್ ೨೦೦೭) ಎತ್ತುತ್ತ:

ಭಾರತೀಯ ಸೃಜನಶೀಲತೆಗೆ ಜಾತಿಯ ಸೂತಕ ಬೆರೆತು ಹೋಗಿದೆ. ಜಾತಿಯೆ ಅರಿವಿನ ಕೇಂದ್ರವಾಗಿ ಸಂಕೀರ್ಣವಾದ ಸವಾಲುಗಳಿಗೆ ಒಳಪಡಿಸಿದೆ. ಬರಹ ಪರಂಪರೆಯ ಕೇಂದ್ರದಲ್ಲಿ ಜಾತಿಯ ಬೇರುಗಳು ಚಿಗಿಯುತ್ತಲೇ ಇವೆ

ಎನ್ನುವ ಮೊಗಳ್ಳಿ ಗಣೇಶ್[1]

ಶಿಷ್ಟ ಪರಂಪರೆಯ ಜೊತೆಗೆ ಪಶ್ಚಿಮದ ವಿವೇಕವನ್ನು ಜಾಣ್ಮೆಯಿಂದ ಸಂಯೋಗಿಸಿಕೊಂಡು ಅಗತ್ಯ ಬಿದ್ದಾಗಲೆಲ್ಲ ದೇಶೀಯ ಪರಂಪರೆಗಳಿಂದಲೂ ಶಕ್ತಿಯನ್ನು ಧಾರಣ ಮಾಡಿಕೊಂಡು ಸಾಗುವ ಶಿಷ್ಟ ಸಾಹಿತ್ಯವು ಯಾವಾಗಲು ಯಜಮಾನ್ಯ ದರ್ಪದಿಂದ, ಅರಿವಿನ ಮೇಲರಿಮೆಯಿಂದ ಬೀಗುತ್ತಿರುತ್ತದೆ. ಇಂತಹ ಅರಿವಿನ ಅಹಂಕಾರವು ಹಿಂದುತ್ವದ ಗುಣ. ಈ ಗುಣವನ್ನು ಕನ್ನಡದ ಅನೇಕ ಲೇಖಕರು ಸಮರ್ಥವಾಗಿ ರೂಢಿಸಿಕೊಂಡು ಬಂದಿದ್ದಾರೆ. ಆ ಬಗೆಯ ಸಾಹಿತ್ಯ ಚರಿತ್ರೆಯನ್ನು ಮತ್ತು ಈ ಕಾಲದ ಲೇಖಕರನ್ನು ಇವತ್ತಿನ ತಕರಾರುಗಳ ಮೂಲಕ ಪರಿಶೀಲಿಸಬೇಕಾದ್ದಿದೆ

ಎಂದು ಸ್ಪಷ್ಟವಾಗಿ ಹೇಳುತ್ತಾರೆ. ಪರಂಪರೆಯ ಬಗ್ಗೆ ಸಾಹಿತ್ಯದ ಮಾನದಂಡಗಳಿಂದ ಪ್ರವೇಶಿಸಿದರೆ ವಿಶೇಶವಾದ ಬೌದ್ಧಿಕ ರಹದಾರಿಗಳು ತೆರೆದುಕೊಳ್ಳುವುದಿಲ್ಲ. ಸಾಹಿತ್ಯ ಮೀಮಾಂಸೆಯ ಪರಿಕರಗಳು ಸಂಸ್ಕೃತಿಯ ವಿರಾಟ್ ಕಥನವನ್ನು ವಿಸ್ತರಿಸಲಾರವು ಎನ್ನುವ ಮೊಗಳ್ಳಿ ಗಣೇಶ್[1] 'ಪರಂಪರೆಯೆಂದರೆ ಹಳೆಯದು ಎಂಬ ಸಾಮಾನ್ಯ ತಿಳುವಳಿಕೆ ಎಲ್ಲರಲ್ಲೂ ಇದೆ. ಈ ಬಗೆಯ ನಂಬಿಕೆಯನ್ನು ಹುಟ್ಟಿಸಿದ್ದೇ ಸಾಹಿತ್ಯದ ಪರಿಕಲ್ಪನೆಗಳು' ಎಂದು ವಿಶ್ಲೇಶಿಸುತ್ತಾರೆ.

ಪರಂಪರೆಯನ್ನು ನಾವು ನಮ್ಮ ನಮ್ಮ ಜ್ಞಾನಶಾಖೆಗಳ ಅಗತ್ಯಕ್ಕೆ ತಕ್ಕಂತೆ ಲಂಭಿಸುವಾಗ ಸಮಕಾಲೀನತೆಯನ್ನು ಬಿಟ್ಟು ಯೋಚಿಸಲು ಸಾಧ್ಯವಾಗದು. ಪರಂಪರೆ ಹಳೆಯದು ಎಂದು ತೀರ್ಮಾನಿಸಿದ ಕೂಡಲೆ ನಮ್ಮ ಆಲೋಚನೆಗೆ ಚೌಕಟ್ಟುಗಳು ಎದುರಾಗುತ್ತವೆ. ಪರಂಪರೆ ನಿರಂತರವಾಗಿ ಚಲನಶೀಲವಾದ ಸಂವೇದನೆಯ ಪ್ರವೃತ್ತಿ. ಪರಂಪರೆ ಪ್ರವೃತ್ತಿ ಎಂದಾದರೆ ಅದು ಯಾವತ್ತೂ ಹಳೆಯದಾಗದು

ಎಂದು ಪರಂಪರೆಯನ್ನು ವ್ಯಾಖ್ಯಾನಿಸಿಕೊಳ್ಳುತ್ತಾರೆ. ಪರಂಪರೆಯಲ್ಲಿರುವುದೆಲ್ಲಾ ಸುಂದರವಾದದ್ದೇನಲ್ಲ. ಪರಂಪರೆಯ ಬಗ್ಗೆ ನಕಾರಾತ್ಮಕ ಧೋರಣೆಯನ್ನು ಇಟ್ಟುಕೊಂಡು ಕೂಡ ಅದರ ಜೊತೆ ಸಂವಾದವನ್ನು ಮಾಡಬಹುದು ಎನ್ನುವ ಮೊಗಳ್ಳಿಯವರು ಸಾಹಿತ್ಯ, ಸಂಸ್ಕೃತಿಗಳ ಸಂದರ್ಭದಲ್ಲಿ **ಧಾರ್ಮಿಕ ಪ್ರಭುತ್ವ** ಯಜಮಾನ್ಯ ನೆಲೆಯಲ್ಲಿ ನಿಂತಿರುವುದನ್ನು ಗುರುತಿಸುತ್ತಾರೆ. 'ಧಾರ್ಮಿಕ ಪ್ರಭುತ್ವವು ಸಂಸ್ಕೃತಿಗೆ ವಿರುದ್ಧವಾಗಿರುವಂತೆಯೆ ಪರಂಪರೆಯನ್ನು ತನ್ನ

ಹಿಡಿತದಲ್ಲಿಟ್ಟುಕೊಳ್ಳಲು ತಂತ್ರ ರೂಪಿಸುತ್ತಿರುತ್ತದೆ' ಎಂಬುದನ್ನು ಕಾವ್ಯ ಪರಂಪರೆ ಮತ್ತು ಛಂದಸ್ಸಿನ ಸಂಬಂಧಗಳ ಮೂಲಕ ವಿವರಿಸುತ್ತಾರೆ.

ಕನ್ನಡ ಸಾಹಿತ್ಯ ಪಠ್ಯಗಳು ಸಂಘಟಿಸುವ ಭಾಶಿಕ ತಿಳುವಳಿಕೆಯ ಸಾಧ್ಯತೆಗಳನ್ನು ಅರಿಯುವ ಮೊದಲು ಕನ್ನಡ ಭಾಶಾ ತಿಳುವಳಿಕೆಯ ಪಠ್ಯಗಳ ಸಾಮಾಜಿಕ ಪ್ರತಿನಿಧೀಕರಣ ಯಾವ ಬಗೆಯದೆಂಬುದನ್ನು ನಾವು ಗ್ರಹಿಸುವುದು ಮುಖ್ಯವಾಗುತ್ತದೆ. ಇದರ ಮುಂದುವರಿದ ಚಿಂತನೆಯನ್ನು ಡಾಮ್ನಿಕ್ ಅವರಲ್ಲಿ ಕಾಣುತ್ತೇವೆ. ಕನ್ನಡ ಸಾಮಾಜಿಕ ಸಂದರ್ಭದ ಪ್ರಮುಖ ಆಧುನಿಕೋತ್ತರ ಚಿಂತಕರಾದ ಡಾ. ಡಾಮ್ನಿಕ್ ಇದನ್ನು ತೀವ್ರವಾದ ಚರ್ಚೆಗೆ ಒಳಪಡಿಸುತ್ತಾರೆ. ಡಾಮ್ನಿಕ್ ಕನ್ನಡ ಸಾಹಿತ್ಯ ಮೀಮಾಮ್ಸೆಯ ಪ್ರತಿನಿಧೀಕರಣದ ಸ್ವರೂಪವನ್ನು ವಿವರಿಸಿಕೊಳ್ಳುತ್ತಾ 'ಜಾತ್ಯಾತೀತ ಸ್ವರೂಪವೊಂದರ ಬಯಕೆ ಅಲ್ಲಿ ಕಾಣುತ್ತದೆ. ಆದ್ದರಿಂದಲೇ ಅಲ್ಲಿ ಕನ್ನಡ ಐಡೆಂಟಿಟಿ ಯನ್ನು ಸೆಕ್ಯುಲರ್ ನೆಲೆಯಲ್ಲಿ ಪ್ರತಿನಿಧೀಕರಿಸುವ ಆಶಯವನ್ನು ವ್ಯಕ್ತಪಡಿಸಲಾಗುತ್ತದೆ. ಅಂದರೆ, ಈವರೆಗೆ ಆಧುನಿಕ ಕನ್ನಡ ಸಾಹಿತ್ಯ ಜ್ಞಾನ ಮೀಮಾಮ್ಸೆಯನ್ನು ಸಹ ವಿವರಿಸಿಕೊಂಡಿರುವುದು ಈ ಲಿಬರಲ್ ಧೋರಣೆಗಳಲ್ಲೆ. ಈ ಗ್ರಹಿಕೆಯನ್ನು ಹೊರತುಪಡಿಸಿದಲ್ಲಿ ಪ್ರಾಚೀನವೆನ್ನುವ ಕನ್ನಡವನ್ನು ಮತೀಯ ನೆಲೆಯಲ್ಲಿ ಸಂಸ್ಕೃತ ಪರಂಪರೆಗೆ ಜೋತುಹಾಕಲಾಗುತ್ತದೆ'(ಡಾಮ್ನಿಕ್ ೨೦೦೫) ಎನ್ನುತ್ತಾರೆ. ಇದನ್ನು ಕನ್ನಡದ ಸಂದರ್ಭದಲ್ಲಿ ಡಾ. ಡಾಮ್ನಿಕ್ ಅವರು **ಕುಲಮೂಲೀಯ ಅಧ್ಯಯನ ವಿಧಾನ(ಎತ್ನೋ ಮೆಥಡಾಲಜಿ)** ದ ಮೂಲಕ ಚರ್ಚೆಗೆ ತೆಗೆದುಕೊಳ್ಳುತ್ತಾರೆ. ಅಂದರೆ ಒಂದು ನಿರ್ದಿಶ್ಟ ಸಾಮಾಜಿಕ ಪರಿಸರದಲ್ಲಿ ವಿಭಿನ್ನ ಜಾತಿ, ಕುಲ ಪರಂಪರೆಗಳ ಸಮುದಾಯಗಳಿದ್ದು, ಅವು ಪ್ರತಿಯೊಂದೂ ಆ ಪರಿಸರದ ಮಾನವ ಚಟುವಟಿಕೆಗಳಲ್ಲಿ ಸಮಾನ ಹೊಣೆಗಾರರಾಗಿರುತ್ತವೆ. ಅವೆಲ್ಲವುಗಳ ಬಹುಮುಖೀ ಭಾಗವಹಿಸುವಿಕೆಯ ನಿರಂತರತೆಯನ್ನೂ ಕಾಯ್ದುಕೊಳ್ಳಬೇಕಾಗುತ್ತದೆ. ಮತ್ತು ಅವು ಸಾಮಾಜಿಕ ಚಟುವಟಿಕೆಗಳಲ್ಲಿ ಪರಸ್ಪರ ಬೆಂಬಲಿಸುತ್ತವೆ, ಬೆಂಬಲಿಸಬೇಕು ಎಂಬ ತಾತ್ವಿಕ ಗ್ರಹಿಕೆಯನ್ನು ಮುಂದಿಡುತ್ತಾರೆ. ಈ ಮೂಲಕ, ಇಂಥ ಪ್ರಕ್ರಿಯೆಯಲ್ಲಿ ಅದು ಪರಂಪರೆ ಮತ್ತು ಆಧುನಿಕತೆಯ ನಡುವೆ ಅನಗತ್ಯ ಚರ್ಚೆಯನ್ನು ಆರಂಭಿಸಿಬಿಟ್ಟಿದೆ ಎನ್ನುವ ಡಾಮ್ನಿಕ್ 'ಆಧುನಿಕತೆಯ ಕರ್ತೃತ್ವವನ್ನು ಬಹುರೂಪಿ ನೆಲೆಗಳಲ್ಲಿ ವಿವರಿಸಿಕೊಳ್ಳದೆ ಭಾರತೀಯತೆ/ಕನ್ನಡತನವನ್ನು ವಿವರಿಸಿಕೊಳ್ಳಲಾಗದು' ಎನ್ನುತ್ತಾರೆ. 'ಹೀಗಿರುವಲ್ಲಿ ಆಧುನಿಕತೆಯನ್ನು ಸ್ಥಳೀಯವಾಗಿ ಪ್ರತಿನಿಧಿಸಲು, ವರ್ಗೀಕರಿಸಲು ಮತ್ತು ಸ್ವಾಧೀನಪಡಿಸಿಕೊಳ್ಳಲು ಕುಲೀನ ಜಾತಿಗಳು ಸೆಕ್ಯುಲರ್ ಅವಕಾಶಗಳನ್ನು ನಿರ್ದಾಕ್ಶಿಣ್ಯವಾಗಿ ಬಳಸಿಕೊಂಡಿವೆ. ಅಲ್ಲದೆ ಇತರ ಸಮುದಾಯಗಳಿಗೆ ಈ

ಅವಕಾಶವನ್ನು ಹಿಂಸಾತ್ಮಕವಾಗಿ ತಿರಸ್ಕರಿಸಿವೆ ಮತ್ತು ವಂಚಿಸಿವೆ' ಎಂಬುದನ್ನು, ಇಂಗ್ಲಿಶ್ ಭಾಶೆಯನ್ನು ಆಧುನಿಕವಾದ ಸಾಂಕೇತಿಕ ಶಕ್ತಿಯಾಗಿಸಿಕೊಂಡು ಕನ್ನಡ ಸಮಾಜದ ಮೇಲೆ ಹತೋಟಿ ಸಾಧಿಸುವ ಕುಲೀನ ಜಾತಿಗಳ ಸಂಬಂಧಗಳ ಉದಾಹರಣೆಯ ಮೂಲಕ ಚರ್ಚೆಗೆ ತೆಗೆದುಕೊಳ್ಳುತ್ತಾರೆ. (ಮುಂದೆ ಇದನ್ನು ಪಠ್ಯಗಳ ವಿಶ್ಲೇಶಣೆಯ ಸಂದರ್ಭದಲ್ಲಿ ಸ್ಪಶ್ಟವಾಗಿ ಗಮನಿಸಿಕೊಳ್ಳಲಾಗುತ್ತದೆ). ಆ ಮೂಲಕ, ಇವತ್ತಿಗೂ ಇರುವ ಈ ಸಂಘರ್ಶವನ್ನು ಎದುರುಗೊಳ್ಳಲು ಶೋಶಿತ ಸಮುದಾಯಗಳು ಹೊಸ ಸಾಧ್ಯತೆಗಳನ್ನು ಹುಡುಕಿಕೊಳ್ಳುವುದನ್ನು ಶೋಧಿಸುವ ಪ್ರಯತ್ನ ಮಾಡುತ್ತಾರೆ. ಕನ್ನಡಭಾಶಾ ಕಲಿಕೆಯ ಪದವಿ ಪಠ್ಯಕ್ರಮಗಳ ಪ್ರತಿನಿಧೀಕರಣದ ಹಿಂದಿನ ರಾಜಕಾರಣವನ್ನು ವಿವರಿಸಿಕೊಳ್ಳಲು ಡಾಮ್ನಿಕ್ ಅವರ 'ಕರ್ನಾಟಕ ಜಾತಿಗಳ ಸಾಂಸ್ಕೃತಿಕ ಪ್ರತಿನಿಧೀಕರಣ ಮತ್ತು ವಸಾಹತುಶಾಹಿ ಅನುಭವ' ಕುರಿತ ಚಿಂತನೆಯ ಈ ದೃಶ್ಟಿಕೋನವು ಒಂದು ಮುಖ್ಯವಾದ ಒಳನೋಟವನ್ನು ಕೊಡುತ್ತದೆ. ಭಾಶೆ ಮತ್ತು ಸಾಹಿತ್ಯ ಪಠ್ಯಕ್ರಮಗಳ ಮೂಲಕ ಈ ಬಗೆಯ ಯಜಮಾನಿಕೆಯನ್ನು ಹೇಗೆ ಸಾಧಿಸಿಕೊಳ್ಳಲಾಗಿದೆ ಎಂಬುದನ್ನು ಶೋಧಿಸುವುದು, ಆ ಮೂಲಕ ವ್ಯಕ್ತಿಯನ್ನು ಆಧುನಿಕ ಶಿಕ್ಶಣದ ಮೂಲಕ ನಾಗರಿಕರನ್ನಾಗಿಸುವ ಪಠ್ಯಕ್ರಮಗಳಲ್ಲಿ ಪ್ರವೃತ್ತವಾಗಿರುವ ಸಾಮಾಜಿಕ ಹೊಣೆಗಾರಿಕೆಯನ್ನು ವಿಶ್ಲೇಶಿಸಿಕೊಳ್ಳುವಲ್ಲಿ ಮುಖ್ಯವಾದುದಾಗಿ ಕಾಣುತ್ತದೆ.

**೫.೨ ಯಜಮಾನ ಸಂಬಂಧಗಳ ಸ್ಥಿರೀಕರಿಸುವಿಕೆ: ಪಠ್ಯಕ್ರಮಗಳ ಸಾಂಸ್ಕೃತಿಕ ರಾಜಕಾರಣ.**

ಭಾರತದಲ್ಲಿ ೧೯ನೆಯ ಶತಮಾನದಲ್ಲಿ ಪ್ರಾರಂಭವಾದ ಜ್ಞಾನಮೀಮಾಂಸೆ (ಎಪಿಸ್ಟಮಾಲಜಿ)ಯ ನೆಲೆಗಳು ವಸಾಹತು ಸಂಸ್ಕೃತಿಯಿಂದ ನೇರವಾಗಿ ರೂಪುಗೊಂಡಂತವು. ಆದ್ದರಿಂದಾಗಿ, ವಸಾಹತು ವಿದ್ವಾಂಸರಿಂದ ಆರಂಭವಾದ ಜ್ಞಾನಮೀಮಾಂಸೆ ಬ್ರಿಟಿಶ್ ಪ್ರಭುತ್ವದ ಸಶಕ್ತತೆಯ ಭಾಗವಾಗುವುದು ಅನಿವಾರ್ಯವಾಗುತ್ತದೆ. ಭಾರತೀಯ ಸಂಸ್ಕೃತಿ, ಪರಂಪರೆ, ಚರಿತ್ರೆಯನ್ನು ಕಟ್ಟಲು ತೊಡಗಿಕೊಂಡ ಈ ವಿದ್ವಾಂಸರು ಭಾರತೀಯರಿಗೆ ಮಾರ್ಗದರ್ಶಕರಾಗುತ್ತಾರೆ. ಭಾಶೆ, ಸಾಹಿತ್ಯ, ಚರಿತ್ರೆಯನ್ನು ಕುರಿತ ಅನೇಕ ಗ್ರಂಥಗಳನ್ನು ಈ ವಿದ್ವಾಂಸರು ಸಂಪಾದಿಸಿ, ಬರೆದು ಪ್ರಕಟಿಸಿದಾಗ ಭಾರತೀಯ ಸಂಸ್ಕೃತಿಯ ಭವ್ಯ ಪರಂಪರೆಯು ರೋಮಾಂಚನಕಾರಿಯಾಗಿ ಕಾಣುತ್ತದೆ. ಆದರೆ ಅದನ್ನು ತಾವೇ ಕಂಡುಕೊಳ್ಳಲಾಗದ್ದು ಭಾರತೀಯರ ಬೌದ್ಧಿಕ ದಿವಾಳಿತನವಾಗಿಯೂ ಕಾಣುತ್ತದೆ. ಈ ಹಿಂದಿನ ಅಧ್ಯಾಯದಲ್ಲಿ ಗುರುತಿಸಿರುವಂತೆ, ಅಂಥ ಸಂದರ್ಭದಲ್ಲಿ ಅಂಗ್ಲ ವಿದ್ವಾಂಸರು ತೋರಿದ ಹೊಸ ಬೆಳಕಿನಲ್ಲಿ–

ವಸಾಹತುಶಾಹಿ ರೂಪಿಸಿದ ಜ್ಞಾನಮೀಮಾಂಸೆಯ ದಾರಿಯಲ್ಲಿ-ನಮ್ಮದು ಎನ್ನುವುದನ್ನು ಗುರುತಿಸಿಕೊಳ್ಳುವ, ಗುರುತಿಸಿಕೊಂಡದ್ದನ್ನು ಜೋಡಿಸುವ, ಮರುಜೋಡಿಸುವ ಪ್ರಯತ್ನಗಳು ನಿರಂತರವಾಗಿ ಸ್ಥಳೀಯವಾಗಿ ಆರಂಭವಾಗುತ್ತವೆ[೧೧]. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧ ಈ ದೃಷ್ಟಿಯಿಂದ ಸಂಕೀರ್ಣವಾದ ಕಾಲವೆಂದು ಅನೇಕ ಭಾರತೀಯ ವಿದ್ವಾಂಸರು ಗುರುತಿಸುತ್ತಾರೆ. ಇಂಗ್ಲಿಶ್ ವಿದ್ಯಭ್ಯಾಸ ಕ್ರಮದ ಆರಂಭದ ಜೊತೆಯಲ್ಲಿ ಹೊಸ ವಿಶಯಗಳ ಅಧ್ಯಯನ ಸಾಧ್ಯವಾಗುವುದರೊಂದಿಗೆ ಚಾರಿತ್ರಿಕ ಪ್ರಜ್ಞೆಯು ಭಾರತೀಯರಲ್ಲಿ ಜಾಗ್ರತವಾದದ್ದು ಈ ಸಂದರ್ಭದಲ್ಲೆ.

ಹೀಗೆ ಇಂಗ್ಲಿಶ್ ಶಿಕ್ಶಣದ ಮೂಲಕ ಒದಗಿ ಬಂದ **ಅನ್ಯ** ಚಿಂತನೆಗಳನ್ನಿಟ್ಟುಕೊಂಡು ಭಾರತೀಯ ಪರಂಪರೆಯನ್ನು ರೂಪಿಸಲು ಹೊರಟವರು ಇಂಗ್ಲಿಶ್ ಶಿಕ್ಶಣವನ್ನು ಪಡೆದ ಮೇಲ್‌ಮಧ್ಯಮ ವರ್ಗ ಎಂಬುದು ಗಮನಿಸಬೇಕಾದ ಅಂಶ. ಯಾಕೆಂದರೆ ಇಂಗ್ಲಿಶನ್ನು ಕಲಿತು ವಸಾಹತುಶಾಹಿ ಅಧಿಕಾರ ವರ್ಗಕ್ಕೆ, ವಿದ್ವಾಂಸರಿಗೆ ಹತ್ತಿರವಾಗಿದ್ದ ಮತ್ತು ತಮಗಿಂತ ಕೆಳಜಾತಿಗಳ ಪಾಲಿಗೆ **ಪೂಜ್ಯ**ರೆಂಬ ಕಲ್ಪನೆಯಲ್ಲಿದ್ದ ಈ ವರ್ಗ ವಸಾಹತುಶಾಹಿ ಮೂಲಕ ಪಡೆದುಕೊಂಡ ಜ್ಞಾನಮೀಮಾಂಸೆಗೆ, ಅದುವರೆಗೆ ಸಂಸ್ಕೃತ ಭಾಶೆ, ಸಾಹಿತ್ಯ ತಮಗೆ ಕಲಿಸಿಕೊಟ್ಟ **ವರ್ಣಾಶ್ರಮ ಧರ್ಮ**ವನ್ನು ಮೀರದ ಚೌಕಟ್ಟನ್ನು ನಿರ್ಮಿಸುವುದು ಸುಲಭವಾಗುತ್ತದೆ. ಇದನ್ನೆ **ಸ್ವ** ಪ್ರಜ್ಞೆಯಾಗಿ ಭಾವಿಸಲಾಗುತ್ತದಲ್ಲದೆ ಮುಂದಿನ ಕಲಿಕೆಯ ಕ್ರಮವು ಇದನ್ನೇ ಅನುಸರಿಸುವಂತೆಯೂ ಮಾಡಲಾಯಿತು. ಈ ಸಂದರ್ಭದಲ್ಲಿ ಭಾರತ/ಕನ್ನಡ, ಕರ್ನಾಟಕವನ್ನು ಕುರಿತ ಭಾರತೀಯ/ ಕನ್ನಡ ವಿದ್ವಾಂಸರಿಂದ[೧೨] ರಚನೆಯಾದ ಯಾವುದೇ ಬರಹಗಳು ಭಾವನಾತ್ಮಕ ಸಂಬಂಧಗಳನ್ನು ಕಟ್ಟಿಕೊಡುತ್ತ ಅವುಗಳ ಮರೆಯಲ್ಲಿ ಇಂಥ ಚಿಂತನೆಗಳು ಜಾರಿಗೊಳ್ಳುವಂತೆ ಮಾಡುವುದನ್ನು ಗಮನಿಸಬಹುದಾಗಿದೆ. ಡಾ. ಸಿ.ಆರ್. ಗೋವಿಂದರಾಜು[೧೩] ಹೇಳುವಂತೆ 'ನಮ್ಮಲ್ಲಿನ ಕೆಲವು ಬುದ್ಧಿಜೀವಿಗಳು ವಸಾಹತುಶಾಹಿ ನೀತಿಗೆ ಪ್ರತಿಕ್ರಿಯಿಸುವ ತೀವ್ರತೆಯಲ್ಲಿ ಓರಿಯೆಂಟಲಿಸ್ಟರಿಗಿಂತಲೂ ಒಂದು ಹೆಜ್ಜೆ ಮುನ್ನಡೆದರು. ಹಾಗೆ ಮುಂದುವರಿಯುವುದರ ಮೂಲಕ ತಮ್ಮ ವೈಭವೀ ಭೂತದ ಮೊರೆ ಹೊಕ್ಕರು. ಇದರಿಂದ ಎಲ್ಲ ಬಗೆಯ ಸುವರ್ಣಯುಗಗಳ ಸಾಕ್ಶಾತ್ಕಾರದ ದರ್ಶನ ಮಾಡಿಸುವಂತೆ ಆಯಿತು. ಆದ್ದರಿಂದಲೇ ವೈದಿಕ ಹಿನ್ನೆಲೆಯ **ಏಕಮುಖಿ, ಏಕೀಕೃತ, ಏಕೀಕರಣ** ಪರಿಕಲ್ಪನೆಗಳು ಚಾಲನೆಗೆ ಬಂದದ್ದು. ಇದರಿಂದಾಗಿ ಭಾರತೀಯ ಸಮಾಜದ ಬಹುಮುಖೀ ನೆಲೆಗಳು ಅಂಚಿಗೆ ಸರಿದವು. ಆ ಸಂದರ್ಭದಲ್ಲಿ ಉದಿಸಿದ ರಾಶ್ಟ್ರೀಯ ಪ್ರಜ್ಞೆ ಸಹ ಈ ಚಿಂತನಾ ಮೂಲದ್ದೆ ಆಗಿತ್ತು ಎಂಬುದನ್ನು

ಇತಿಹಾಸ ತಜ್ಞ ಡಾ.ಚಂದ್ರಶೇಖರ್[೧೪] ಚರ್ಚಿಸುತ್ತಾರೆ. ಬ್ರಿಟಿಶ್ ಆಡಳಿತ, ವಿದ್ಯೆ ಮತ್ತು ಚಿಂತನಾಕ್ರಮಗಳ ಸಂಪರ್ಕದಿಂದ ಪ್ರೇರಿತರಾದ, ಭಾರತ ರಾಷ್ಟ್ರೀಯತೆಯ ಹೋರಾಟದ ಮುಂದಾಳುಗಳಾದ ಈ ಮೇಲ್ಜಾತಿ ಮಧ್ಯಮವರ್ಗ 'ಇಂಗ್ಲಿಶ್‌ರೊಂದಿಗೆ ಹೊಂದಾಣಿಕೆ ಮಾಡಿಕೊಂಡೇ ವಿದ್ಯಾವಂತರಾಗಿ, ಪಾಶ್ಚಾತ್ಯ ಉದಾರವಾದದಿಂದ ಪ್ರಭಾವಿತರಾಗಿ ರಾಷ್ಟ್ರೀಯ ಪ್ರಜ್ಞೆ ಬೆಳೆಸಿಕೊಂಡರು' ಎಂದು ದಾಖಲಿಸುತ್ತಾರೆ. ಈ ಮೊದಲು ಪ್ರಸ್ತಾಪಿಸಿರುವಂತೆ **ಅನ್ಯವನ್ನು ಸ್ವ** ಪ್ರಜ್ಞೆಯ ಭಾಗವಾಗಿಸಿಕೊಳ್ಳುವ ಪ್ರಕ್ರಿಯೆ ಇದು. ಈ ಸ್ವ ಪ್ರಜ್ಞೆಯು ಸಂಸ್ಕೃತ ಪರಂಪರೆಯ ಗತದ ಕಲ್ಪನೆಗಳಲ್ಲಿ ವೈಭವೀಕರಣಗೊಂಡಿತು. ಆ ಮೂಲಕವೇ ಇತಿಹಾಸ ಪ್ರಜ್ಞೆ ಇಲ್ಲದ ಭಾರತೀಯರಿಗೆ ಇತಿಹಾಸ ಪ್ರಜ್ಞೆಯನ್ನು ಮೂಡಿಸಿತು. ಹೀಗಾಗಿ ಈ ವರ್ಗ ಇಂಥ ಪ್ರಜ್ಞೆಯನ್ನು ತಂದುಕೊಟ್ಟ ಇಂಗ್ಲಿಶ್ ಶಿಕ್ಷಣ ಮತ್ತು ಇಂಗ್ಲಿಶ್ ವಿದ್ವಾಂಸರಿಗೆ ಕೃತಜ್ಞರಾಗಿರುವುದನ್ನು ಗಮನಿಸುತ್ತೇವೆ. ಇದು ಬಿ.ಎಮ್.ಶ್ರೀಯಂತವರಿಂದಲೇ ಕಾಣಿಸಿಕೊಳ್ಳುವ ವಿದ್ಯಮಾನವಾಗಿದೆ. ಹೀಗೆ **ಪ್ರಾಚೀನ** ಎನ್ನುವುದು ಸಮಕಾಲೀನ ವಸಾಹತುವನ್ನು ಎದುರುಗೊಳ್ಳಲು ಈ ವರ್ಗಕ್ಕೆ ಕೀಲಿಕೈ ಆಗಿ ಬಳಕೆಯಾಗುತ್ತದೆ. ಆದ್ದರಿಂದಲೇ ೧೭-೧೮ನೆಯ ಶತಮಾನದವರೆಗೆ ಭಾರತದ ಗತವನ್ನು ಕುರಿತ ಬರಹಗಳು ಅದ್ದೂರಿಯಾಗಿ ಕಾಣುತ್ತವೆ. ಗತ ಹತ್ತಿರವಾದಂತೆಲ್ಲ ಸೊರಗುತ್ತವೆ ಅಥವಾ ಆ ಬಗೆಯ ಚಾರಿತ್ರಿಕ ಮಾನದಂಡಗಳಿಂದ ಪಲಾಯನ ಮಾಡುತ್ತವೆ. ಕನ್ನಡ **ಸಾಹಿತ್ಯ ಚರಿತೆ**ಗಳ ಕಟ್ಟುವಿಕೆಯಲ್ಲೂ ಇದೇ ಸಮಸ್ಯೆಗಳು ಎದುರಾಗುತ್ತವೆ. ಆದರೆ, ಬ್ರಿಟಿಶ್ ಸಾಮ್ರಾಜ್ಯಶಾಹಿಯನ್ನು ನಿಭಾಯಿಸಿಕೊಳ್ಳಲು ಇದು ಅನಿವಾರ್ಯವಾಯಿತು ಎಂಬುದು ಸಕಾರಾತ್ಮಕವಾಗಿ ಕಂಡರೂ ನಂತರದ ನೂರಕ್ಕೂ ಹೆಚ್ಚು ವರುಶಗಳಲ್ಲಿ ಈ ಚಿಂತನೆಗಳ ಮೂಲಕವೆ ಸ್ಥಾಪಿಸಿಕೊಂಡ ಅಧಿಕಾರ ಸಂಬಂಧಗಳು **ಪ್ರಜಾಪ್ರಭುತ್ವದ** ನೆಲೆಗಟ್ಟನ್ನು ಅಣಕಿಸುವಂತಾಗಿರುವುದನ್ನು ಅಲ್ಲಗಳೆಯಲು ಬರುವುದಿಲ್ಲ. ಇವುಗಳ ಮೂಲಕ ಚಾಲನೆಗೊಂಡ ಶೈಕ್ಷಣಿಕ ಪಠ್ಯಕ್ರಮಗಳು, ಈ ಪರಂಪರೆಯ ಹೊರೆಯನ್ನು ನಿರಂತರವಾಗಿ ಹೊರಿಸುತ್ತ ಬಹುಸಮುದಾಯವನ್ನು ಹೆಳವರನ್ನಾಗಿಯೆ ಉಳಿಸುವ ಪ್ರಯತ್ನಗಳನ್ನು ನಿರಂತರವಾಗಿ ಚಾಲನೆಯಲ್ಲಿರಿಸಿವೆ. ಓದಿ ಬ್ರಾಹ್ಮಣನಾಗು ಕಾದಿ ಕ್ಷತ್ರಿಯನಾಗು ಎಂಬುದನ್ನು ಕಟ್ಟಿಕೊಡುತ್ತಲೇ ಬರುತ್ತಿವೆ. ಆದ್ದರಿಂದಾಗಿ ಇಂಥ ಅಧಿಕಾರ ಸಂಬಂಧಗಳನ್ನು ಹೊಡೆದುಕೊಳ್ಳುವುದು ಪಠ್ಯಕ್ರಮಗಳು ನಿರ್ದೇಶಿಸುವ ವಿದ್ಯಾರ್ಥಿಯ ಸಾಮಾರ್ಥ್ಯ ನಿರ್ಧಾರದ ದೃಷ್ಟಿಯಿಂದ ಬಹು ಮುಖ್ಯವಾಗುತ್ತದೆ.

ಇದರಿಂದಾಗಿ, ಭಾಶಿಕ ಹೋರಾಟಗಳು, ಭಾಶೆಯನ್ನು ಮಾನವಾಗಿಸಿಕೊಂಡ ಪ್ರಾಂತೀಯ ಹೋರಾಟಗಳು ಭಾರತ ರಾಶ್ಟ್ರೀಯ ಹೋರಾಟದೊಳಗಿಂದಲೇ ಮೊಳಕೆಯೊಡೆಯುತ್ತವೆ. ಬ್ರಿಟಿಶ್ ವ್ಯವಸ್ಥೆಯನ್ನು ತನ್ನ ಯಜಮಾನಿಕೆಯ ಭಾಗವಾಗಿಸಿಕೊಳ್ಳುತ್ತಲೇ ಅದಕ್ಕೆ ಎದುರಾಗಬೇಕಾದ ಈ ವರ್ಗ ತನ್ನ ಪ್ರಾದೇಶಿಕ ಸಮುದಾಯ, ಸಂಸ್ಕೃತಿಗಳ ವೈಶಿಶ್ಟ್ಯತೆಗಳಿಂದಲೇ ಭೌಗೋಳಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಹೋರಾಟವನ್ನು ಹೆಣೆದುಕೊಳ್ಳುವುದು ಮುಖ್ಯವಾಗುತ್ತದೆ.

ಅಖಂಡತೆಯ ಪ್ರಜ್ನೆಯೊಂದಿಗೆ ಬ್ರಿಟಿಶ್ ಚಕ್ರಾದಿಪತ್ಯದ ವಿರುದ್ಧ ರಾಶ್ಟ್ರೀಯ ಭಾವನೆಯನ್ನು ಹೀಗೆ ಕಟ್ಟಿಕೊಳ್ಳಲಾಗುತ್ತದೆ. ಈ ಕಾರಣವಾಗಿ ಪ್ರಾದೇಶಿಕ ಭಾಶಾ ಸಮುದಾಯದ ಚಟುವಟಿಕೆಗಳ ಗುರುತನ್ನು ಕಟ್ಟಿಕೊಳ್ಳುವುದು ದರ್ದಿನ ವಿಶಯವಾಗುತ್ತದೆ. ಇದು ದಕ್ಶಿಣ ಭಾರತದಲ್ಲಿ ಅತ್ಯಂತ ತೀವ್ರವಾಗಿ ನಡೆದಿರುವುದನ್ನು ಗಮನಿಸಬಹುದಾಗಿದೆ[೧೫]. ಆದ್ದರಿಂದಾಗಿ ಕನ್ನಡ ಮಾತನಾಡುವ ಪ್ರದೇಶಗಳನ್ನು ಬೌಗೋಳಿಕವಾಗಿ ಒಗ್ಗೂಡಿಸುವ ಪ್ರಯತ್ನ ರಾಶ್ಟ್ರೀಯ ಹೋರಾಟದ ಜೊತೆ ಜೊತೆಯಲ್ಲೆ ನಡೆಯುತ್ತಾ ಬರುತ್ತದೆ. ಇಪ್ಪತ್ತಕ್ಕೂ ಹೆಚ್ಚು ಆಡಳಿಗಳಲ್ಲಿ ಹಂಚಿಹೋಗಿದ್ದ ಕನ್ನಡ ಸಮುದಾಯಗಳನ್ನು ಏಕೀಕೃತ ಆಡಳಿತಕ್ಕೆ ತರುವ ಹೋರಾಟಗಳು ಮತ್ತು ಈ ಹೋರಾಟಗಳಿಗಾಗಿ ಏಕೀಕೃತ **ಸಾಂಸ್ಕೃತಿಕ ಯಜಮಾನಿಕೆಗೆ** ಒಳಪಡಿಸುವ ಪ್ರಯತ್ನಗಳು ಆರಂಭವಾಗುತ್ತವೆ. ಈ ಸಂದರ್ಬದಲ್ಲಿ ಕನ್ನಡ ನಾಡಿನ ಭವ್ಯ ಮತ್ತು ಧೀಮಂತ ಚರಿತ್ರೆ ಹಾಗೂ ಪರಂಪರೆಯ ಭಾಗವಾಗಿ ಪ್ರಾಚೀನ ಕನ್ನಡ ಸಾಹಿತ್ಯದ ಚರಿತ್ರೆ, ಕನ್ನಡ ಭಾಶೆಯ ಚರಿತ್ರೆಯನ್ನು ಹೋರಾಟಕ್ಕೆ ಬೇಕಾದ ಭಾವೋದ್ದೀಪನವನ್ನು ಚಿಮ್ಮಿಸುವ ವೈಭವದ ಬೌದ್ಧಿಕ ಶಕ್ತಿಗಳಾಗಿ ಕಟ್ಟಲಾಗುತ್ತದೆ. ಇದರಿಂದಾಗಿ ವಸಾಹತು ಆಧುನಿಕತೆಯ ಆರಂಭಿಕ ಶಿಕ್ಶಣದ ಉತ್ಪನ್ನಗಳಾದ ನಮ್ಮ ವಿದ್ವಾಂಸರಿಗೆ **ಪ್ರಾಚೀನ ಕನ್ನಡ ಸಾಹಿತ್ಯ** ಕನ್ನಡ ನಾಡಿನ ಬೌಗೋಳಿಕ ಕಲ್ಪನೆಯನ್ನು ಚಾರಿತ್ರಿಕವಾಗಿ ಮೂಡಿಸುವುದರೊಂದಿಗೆ ಸತ್ವಯುತವಾದ ಬೌದ್ಧಿಕಶಕ್ತಿಯನ್ನು ದಾರೆಯೆರೆಯುವ ಹೆದ್ದಾರಿಯಾಗಿಯೂ ಕಾಣುತ್ತದೆ[೧೬]. ಕರ್ನಾಟಕ ಏಕೀಕರಣ ಪಿತಾಮಹ ಎಂದೇ ಕರೆಸಿಕೊಳ್ಳುವ ಆಲೂರ ವೆಂಕಟರಾಯರ[೧೭] ಮಾತುಗಳನ್ನು ಗಮನಿಸಿದರೆ ಇದು ಇನ್ನಶ್ಟು ಸ್ಪಶ್ಟವಾಗುತ್ತದೆ;

> ನಮ್ಮ ಭಾರತ ಭೂಮಿಯ ಈಗಿನ ಸ್ಥಿತಿಯನ್ನು ಕಂಡು ತಳಮಳಗೊಂಡು ಅದರ ಉದ್ಧಾರಾರ್ಥವಾಗಿ ಹಲವು ಪುಣ್ಯಾತ್ಮರು ಹಲವು ಬಗೆಯಲ್ಲಿ ಪ್ರಯತ್ನ ಪಡುತ್ತಿರುವರಶ್ಟೆ. ಈ ಬಗೆಯ ಪ್ರಯತ್ನಗಳಲ್ಲಿ ನಮ್ಮ ದೇಶದ ಬುದ್ಧಿ ಸಾಮರ್ಥ್ಯವನ್ನು, ವೈಭವವನ್ನು ಜನರ ನೆನೆಪಿಗೆ ತಂದುಕೊಟ್ಟು ಅವರಲ್ಲಿ ತಮ್ಮ ಪೂರ್ವಜರ ವಿಶಯವಾಗಿಯೂ, ಪೂರ್ವ

ಸಂಸ್ಕೃತಿಯ ವಿಶಯವಾಗಿಯೂ, ಪೂರ್ವದ ಘನತೆಯ ವಿಶಯವಾಗಿಯೂ ಸಾನಂದಾಶ್ಚರ್ಯವಾದ ಅಭಿಮಾನವನ್ನು ಹುಟ್ಟಿಸುವುದು ಒಂದು ಮುಖ್ಯವಾದ ವಿಶಯವಾಗಿದೆ'(ಆಲೂರ ವೆಂಕಟರಾಯ ೧೯೮೨)

ಎಂದು ಬರೆಯುತ್ತಾರೆ. ಆಲೂರರ ಈ ಮಾತುಗಳಲ್ಲಿ ವ್ಯಕ್ತವಾಗಿರುವ ಪೂರ್ವಜರ ವಿಶಯ, ಪೂರ್ವ ಸಂಸ್ಕೃತಿ ವಿಶಯ, ಪೂರ್ವದ ಘನತೆ ಈ ಮಾತುಗಳಲ್ಲಿ ವ್ಯಕ್ತವಾಗಿರುವ ಭೂತದ ಕುರಿತ ತೀವ್ರವಾದ ಕಾಳಜಿಯನ್ನು ಗಮನಿಸಬೇಕಾಗುತ್ತದೆ. ತಮ್ಮ ಸಂಸ್ಕೃತ ಪರಂಪರೆಯ ಮೂಲಕ ಬೆಳೆದು ಬಂದ ಪೂರ್ವಸ್ಮೃತಿ ಕುರಿತ ಪ್ರಜ್ನೆ ನಾಡು ನುಡಿಯ ಈ ಕಾಳಜಿಗಳಲ್ಲಿ ತನ್ನಿಂದ ತಾನೆ ಎಚ್ಚೆತ್ತುಕೊಳ್ಳುತ್ತದೆ. ಇದು ಆ ಕಾಲದಲ್ಲಿ ಕಟ್ಟಲಾದ ಪಠ್ಯಗಳು ಮತ್ತು ಪಠ್ಯಕ್ರಮದ ಭಾಗವೂ ಆಗಿ ಜಾರಿಗೊಳ್ಳುವುದು ಸುಲಭವೂ ಆಗುತ್ತದೆ. ಈ ಹಿನ್ನೆಲೆಯಲ್ಲಿಯೇ ಆರ್.ನರಸಿಂಹಾಚಾರ್ಯರ ಕರ್ನಾಟಕ ಕವಿಚರಿತೆಯ ಸಂಪುಟಗಳು, ಬಿ.ಎಂ.ಶ್ರೀ ರೂಪಿಸಿದ ಕನ್ನಡ ಕೈಪಿಡಿ ಕೃತಿಗಳನ್ನು ಗಮನಿಸಬೇಕಾಗುತ್ತದೆ. ಕಳೆದ ಶತಮಾನದ ೫೦ರ ದಶಕದ ನಂತರ ಪ್ರಕಟವಾದ ರಂ.ಶ್ರೀ. ಮುಗಳಿಯವರ ಹೆರಿಟೇಜ್ ಆಫ್ ಕರ್ನಾಟಕ, ಕನ್ನಡ ಸಾಹಿತ್ಯ ಚರಿತ್ರೆ ಬರಹಗಳೂ ಸಹ ಇದರ ಮುಂದುವರಿದ ರೂಪಗಳೇ ಆಗಿವೆ[೧೮]. ಆಲೂರರು 'ಹಿಂದಿನ ಇತಿಹಾಸದ ಪ್ರಯೋಜನವನ್ನು ಮುಂದಿನ ರಾಶ್ಟ್ರೀಯ ಉನ್ನತಿಗಾಗಿ ಏರ್ಪಡಿಸಿಕೊಳ್ಳುವುದೇ ಜಾಣತನದ ಮಾರ್ಗವಾಯಿತು. ಈ ಜಾಣತನದಿಂದಲೇ ಪಾತಾಳಕ್ಕಿಳಿದ ನಮ್ಮ ಕರ್ನಾಟಕದ ಆರ್ಯ ಸಂಸ್ಕೃತಿಯನ್ನು ನಾವು ಉದ್ದರಿಸಿದೆ ಇನ್ನಾರು ಉದ್ದರಿಸುವವರು' ಎಂದು ತಾವು ಪ್ರಸ್ತಾಪಿಸಿದ ಪೂರ್ವಜರ ವಿಶಯ, ಪೂರ್ವ ಸಂಸ್ಕೃತಿ, ಪೂರ್ವದ ಘನತೆಯ ವಿಶಯ ಕರ್ನಾಟಕದ ಆರ್ಯ ಸಂಸ್ಕೃತಿ ಎಂಬುದನ್ನು ಸ್ಪಶ್ಟಪಡಿಸಿಕೊಳ್ಳುತ್ತಾರೆ. ೧೯೧೧ರಲ್ಲಿ ಬಿಎಂಶ್ರೀ, ಧಾರವಾಡದಲ್ಲಿ ಇಂತಹ ಆರ್ಯರನ್ನು ಮುಖ್ಯವಾಗಿಸಿಕೊಂಡೇ ಕನ್ನಡ ಮಾತು ತಲೆಯೆತ್ತುವ ಬಗೆಯನ್ನು ಪ್ರಸ್ತಾಪಿಸುತ್ತಾರೆ. ಆಧುನಿಕವಾದ ಭಾರತದ ಪರಿಕಲ್ಪನೆಯಾಗಲಿ, ಕರ್ನಾಟಕದ ಪರಿಕಲ್ಪನೆಯಾಗಲಿ ಇಂಥ ಅಭಿಮಾನದ ವೇಶ ಧರಿಸಿದ್ದು ಮತ್ತು ಅದಕ್ಕಾಗಿ ಇತಿಹಾಸವನ್ನು ಗ್ರಹಿಸಿ ಕಟ್ಟಿದ್ದು ಈ ಆರ್ಯ ಸಂಸ್ಕೃತಿಯ ಪರಿಕಲ್ಪನೆಗಳಲ್ಲಿ. ಜಿ.ಎಚ್. ನಾಯಕ್[೧೯] ಹೇಳುವಂತೆ; ಭಾರತೀಯ ಪ್ರಜ್ನೆ ಹಿಂದೂ ಸಾಂಸ್ಕೃತಿಕ, ಧಾರ್ಮಿಕ, ಅಧ್ಯಾತ್ಮಿಕ ತಿಳುವಳಿಕೆಯ ಆರ್ಶೇಯ ಚೌಕಟ್ಟಿನಲ್ಲಿ ರೂಪು ತಳೆದದ್ದಾಗಿದ್ದರಿಂದ, ಬ್ರಾಹ್ಮಣ ಪರಿಸರದಲ್ಲಿ ಬೆಳೆದ ಸಾಹಿತಿಗಳ ಭಾವಕೋಶ ಅಥವಾ ಅನುಭವ ಪ್ರಪಂಚದೊಂದಿಗೆ ಆ ಪ್ರಜ್ನೆಗೆ ಹೆಚ್ಚಿನ ನಿಕಟ ಸಂಬಂಧ' ಏರ್ಪಡುವಂತಾಯಿತು. ಅದೇ ಕನ್ನಡ ಕಲಿಕೆಯನ್ನು ನಿರ್ಧರಿಸಿತು.

ಆರ್. ನರಸಿಂಹಾಚಾರ್ಯರ ಕರ್ನಾಟಕ ಕವಿಚರಿತೆಯ ಮೂರು ಸಂಪುಟಗಳು ೧೯೦೭, ೧೯೧೯ ಮತ್ತು ೧೯೨೯ರಲ್ಲಿ ಪ್ರಕಟವಾಗುತ್ತವೆ. ೧೯೧೬ರಲ್ಲಿ ಕರ್ನಾಟಕದ ಮೊದಲ ವಿಶ್ವವಿದ್ಯಾಲಯವಾಗಿ ಮೈಸೂರು ವಿಶ್ವವಿದ್ಯಾಲಯ ಆರಂಭವಾಗುತ್ತದೆ. ಲೂಯಿ ರೈಸ್‌ನೊಂದಿಗೆ ಕೆಲಸ ನಿರ್ವಹಿಸಿದ ಅನುಭವದಿಂದ ಆರ್. ನರಸಿಂಹಾಚಾರ್ಯ ರಚಿಸಿದ ಕರ್ನಾಟಕ ಕವಿಚರಿತೆಯ ಸಂಪುಟಗಳು ಕನ್ನಡದ **ಸಾಂಸ್ಕೃತಿಕ ಪ್ರತಿನಿಧಿ** ಕೃತಿಗಳಾಗಿ ಕಾಣಿಸುತ್ತವೆ[೨೦]. ಮೂರನೆಯ ಸಂಪುಟ ಪ್ರಕಟವಾದ ಸಂದರ್ಭದಲ್ಲಿ 'ವಿಶ್ವ ಕರ್ನಾಟಕ' ಪತ್ರಿಕೆ ಆಚಾರ್ಯರ ಕವಿಚರಿತ್ರೆಗಳೇ ಮೊಟ್ಟ ಮೊದಲು ಕನ್ನಡಿಗರಲ್ಲಿ ನಿಜವಾದ ಸಾಹಿತ್ಯೇತಿಹಾಸ ಸಂಶೋಧನಾ ಬುದ್ಧಿಯನ್ನು ಹುಟ್ಟಿಸಿದವು. ಅಂದಿನಿಂದ ಸಂಶೋಧನೆ ಮತ್ತು ವಿಮರ್ಶೆಗೆ ಆರಂಭವಾಗಿದೆ[೨೧]' ಎಂದು ಕನ್ನಡ ಸಾಹಿತ್ಯಾಧ್ಯಯನ ಶಿಕ್ಷಣದ ಮುಖ್ಯ ಭಾಗವಾದದ್ದನ್ನು ಸೂಚಿಸುತ್ತದೆ. ಅಂದರೆ, ಕನ್ನಡ ನಾಡು, ನುಡಿ ಕುರಿತ ಹೋರಾಟಗಳು, ಸಾಹಿತ್ಯ, ಸಂಸ್ಕೃತಿ, ಇತಿಹಾಸಗಳ ಮೂಲಕ ಪರಂಪರೆಯನ್ನು ಕಟ್ಟುವ ಕೆಲಸ ಮತ್ತು ಇವುಗಳನ್ನು ಶಿಕ್ಷಣದ ಭಾಗವಾಗಿಸುತ್ತಲೇ ನಾಡಿಗರನ್ನು ಎಚ್ಚರಿಸುವ ಪ್ರಕ್ರಿಯೆ ಒಂದಕ್ಕೊಂದು ಪೂರಕವಾಗಿಯೆ ಈ ಕಾಲದಲ್ಲಿ ಜಾರಿಗೆ ಬರತೊಡಗುತ್ತವೆ ಎಂಬುದನ್ನು ಗಮನಕ್ಕೆ ತಂದುಕೊಳ್ಳಬೇಕಾಗುತ್ತದೆ. ಆ ಮೂಲಕ ಸಂಸ್ಕೃತ ಪರಂಪರೆಯು ತನ್ನ **ಆಧುನಿಕ ಯಜಮಾನಿಕೆ**ಯನ್ನು ಕನ್ನಡ ನಾಡು, ನುಡಿ, ಸಾಹಿತ್ಯ, ಸಂಸ್ಕೃತಿ, ಪರಂಪರೆಯ ಭಾಗವಾಗಿ ರೂಢಿಸಿಕೊಳ್ಳತೊಡಗುತ್ತದೆ. ಅಲ್ಲದೆ ಇದನ್ನು, ವರ್ತಮಾನಕ್ಕೆ ತಾನು ಕಲ್ಪಿಸಿದ ಅಗತ್ಯಕ್ಕೆ ಅನುಗುಣವಾಗಿ ಶಿಕ್ಷಣದ ಹೊಣೆಗಾರಿಕೆಯನ್ನು ನಿರ್ವಹಿಸಿಕೊಳ್ಳುವುದನ್ನು ಗ್ರಹಿಸಬಹುದಾಗಿದೆ. ಬಿ.ಎಂ.ಶ್ರೀಯ ನಿಜವಾದ ಕನ್ನಡ ಕೆಲಸ ಆರಂಭವಾಗುವುದು ಇಲ್ಲಿಂದಲೆ.

ವಸಾಹತು ಕಣ್ಣುಗಳಿಂದ ರೂಢಿಸಿಕೊಂಡ ಸಂಸ್ಕೃತ ಪರಂಪರೆಯ ಮಿದುಳು ಭಾರತ/ಕರ್ನಾಟಕತ್ವಗಳನ್ನು ಪ್ರಾದೇಶಿಕ ಪರಂಪರೆಗಳಲ್ಲಿ ಕಟ್ಟಿಕೊಳ್ಳುವುದು ತೀವ್ರವಾಗಿ ನಡೆಯುತ್ತದೆ. ಅಷ್ಟೇ ತೀವ್ರವಾಗಿ ಈ ಬಗೆಯ ಅಧ್ಯಯನಗಳು ವಿಶ್ವವಿದ್ಯಾಲಯಗಳ ಪಠ್ಯದ ಭಾಗವಾಗಿ ಜಾರಿಗೊಳ್ಳತೊಡಗುತ್ತವೆ. ಕಳೆದ ಶತಮಾನದ ೩೦ರ ದಶಕದ ನಂತರವೂ ಇಂಗ್ಲಿಶ್ ಭಾಶೆ ಮತ್ತು ಸಾಹಿತ್ಯದ ಚಿಂತನೆಗಳ ಮೂಲಕ ಭಾರತದ ಮೇಲ್ಜಾತಿಯ ಮಧ್ಯಮವರ್ಗ ಹೇಗೆ ಯಜಮಾನಿಕೆಯನ್ನು ಆಕ್ರಮಿಸಿಕೊಂಡಿತು ಎಂಬುದನ್ನು ವಿವರಿಸುವ ಆಲೋಕ್ ಮುಖರ್ಜಿ[೨೨]ಯವರ ಮಾತುಗಳನ್ನು ಇಲ್ಲಿ ಪ್ರಸ್ತಾಪಿಸುವುದು ಉಚಿತವೆನಿಸುತ್ತದೆ;

'ನಾವು ಒಂದು ಅಂಶವನ್ನು ಯಾವಾಗಲೂ ಮನಸ್ಸಿನಲ್ಲಿಟ್ಟಿರಬೇಕು. ಅದೆಂದರೆ, ಬೌದ್ಧಿಕ ಪರಿಭಾಷೆಯಲ್ಲಿ ಹೇಳುವುದಾದರೆ, ಸಮಾಜೋ-ಆರ್ಥಿಕವಾದ ಬೇರುಗಳಿಗೆ ಸಂಬಂಧಿಸಿದ

ಪ್ರಜ್ಞೆಯನ್ನು ಕುರಿತದ್ದು. ಮೇಲ್ಜಾತಿಯ ಹಿಂದೂಗಳು ತಮ್ಮ ನಿಯಂತ್ರಣಾಧಿಕಾರವನ್ನು ಎಚ್ಚರದಿಂದ ಗುರುತಿಸಿಕೊಳ್ಳುತ್ತಿರುತ್ತಾರೆ. ಹಾಗೆಯೇ, ಹಿಂದೂಗಳಲ್ಲದ ಹಾಗೂ ಮೇಲ್ಜಾತೀಯ ಹಿಂದೂಗಳಲ್ಲದ ಅಲ್ಪಸಂಖ್ಯೆಯಲ್ಲಿರುವ ಕೆಲವರೂ ಸಹ ನಿಯಂತ್ರಣಾಧಿಕಾರವುಳ್ಳ ಈ ಮೇಲ್ಜಾತಿಯ ಗುಂಪಿನೊಟ್ಟಿಗೆ ತಮ್ಮನ್ನು ಕಂಡುಕೊಳ್ಳುತ್ತಿರುತ್ತಾರೆ. ಹೀಗಾಗಿ ಮೇಲ್ಜಾತಿಯ ಈ ವರ್ಗವು ತನ್ನ ಗೌರವವನ್ನು ಸದಾ ಕಾಪಾಡಿಕೊಳ್ಳುವ ಸಲುವಾಗಿ ಬಹುಮುಖ್ಯ ಪಾತ್ರವನ್ನು ವಹಿಸುತ್ತಿರುತ್ತದೆ. ತನ್ನ ದೊಡ್ಡಮಟ್ಟದ ಭಾಗವಹಿಸುವಿಕೆಯ ಪ್ರಕ್ರಿಯೆಯಿಂದಾಗಿ ಪ್ರಾಮುಖ್ಯತೆಯನ್ನೂ ಪಡುದುಕೊಂಡುಬಿಡುತ್ತದೆ

ಎನ್ನುತ್ತಾರೆ. ಸಮಾಜ ಶಾಸ್ತ್ರಜ್ಞ ಎಂ.ಎನ್. ಶ್ರೀನಿವಾಸ್ 'ಸಂಸ್ಕೃತೀಕರಣ' ಎಂದು ಕರೆಯುವುದು ಇದನ್ನೇ ಎಂದು ಪ್ರಸ್ತಾಪಿಸುತ್ತಾ;

ಹೇಗೆಂದರೆ ಈ ವರ್ಗವು ತನ್ನ ಆಚರಣೆ, ನಂಬಿಕೆ, ನಡಾವಳಿಗಳನ್ನು ವರ್ಗ್ಗಾಯಿಸುವ ಕೆಲಸವನ್ನು ಮಾಡುತ್ತಿರುತ್ತದೆ. ಅಲ್ಪಸಂಖ್ಯೆಯ ಗುಂಪುಗಳು ತಮಗಿಂತ ಮೇಲಿನವರಾದ ಇವರ ಆಚರಣೆ, ನಂಬಿಕೆ, ನಡಾವಳಿಗಳನ್ನು ತನ್ನದನ್ನಾಗಿ ಮಾಡಿಕೊಂಡು ಮೇಲುದರ್ಜೆಗೇರಲು ಅಥವಾ ಅದಕ್ಕೆ ಅರ್ಹವೆನಿಸಿಕೊಳ್ಳಲು ತಹತಹಿಸುತ್ತವೆ. ಆ ಮೂಲಕ ಮೇಲ್ಜಾತಿಗಳ ಪಾರಂಪರಿಕ ಪ್ರಜ್ಞೆಯು ಉತ್ತಮಿಕೆಯ ನೆಪದಿಂದ ಸ್ಥಾಪಿಸಲ್ಪಡುತ್ತದೆ. ಇಂಥ ನಡಾವಳಿ ಮತ್ತು ನಂಬಿಕೆಗಳು ಕೆಲವರಿಗೆ ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಗುರುತಿಸಿಕೊಳ್ಳಲು ಬಂಡವಾಳವೇ ಆಗುತ್ತದೆ. ಆ ಮೂಲಕ ಅಧಿಕಾರ ವಲಯದೊಳಕ್ಕೆ ಪ್ರವೇವನ್ನೂ ಪಡೆದುಬಿಡುತ್ತಾರೆ. ಒಮ್ಮೆ ಇದನ್ನು ಒಪ್ಪಿಕೊಂಡ ಕೂಡಲೇ, ಇಂಗ್ಲಿಶ್ ತಂದುಕೊಡುವ 'ಪ್ರತಿಶ್ಟೆ'ಯ ಒಳಹ(ಐಡಿಯ)ನ್ನು ಹಿಡಿಯುವುದು ಸುಲಭವೂ ಆಗುತ್ತದೆ. ಹಾಗಾಗಿ, ಇಂಗ್ಲಿಶ್ ಚಿಂತನೆ, ಇಂಗ್ಲಿಶ್ ಸಂಸ್ಕೃತಿ, ಇಂಗ್ಲಿಶ್ ಜೀವನ ವಿಧಾನಗಳನ್ನು ಅಳವಡಿಸಿಕೊಳ್ಳಲಾಗುತ್ತದೆ. ಅಲ್ಪ ಸಂಖ್ಯೆಯ ಸಮುದಾಯಗಳಿಂದ ಬಂದ ನಾಯಕರುಗಳು ಆಧುನಿಕತೆಯ ನೆಪದಲ್ಲಿ ಇಂಗ್ಲಿಶ್ ಶಿಕ್ಶಣ ತಂದುಕೊಡುವ ಇಂಥ ಮೌಲ್ಯ ಪ್ರಜ್ಞೆಗೆ ಮೇಲ್ಜಾತಿಯ ಹಿಂದುತ್ವದ ಭಾಗವಾಗಿಯೇ ಒಳಗಾದರು. ಆ ಮೂಲಕ ಉತ್ತಮಿಕೆಯ ಪ್ರಜ್ಞೆಯನ್ನು ಮತ್ತಶ್ಟು ಬಲಪಡಿಸಿದರು'

ಎಂದು ವಿವರಿಸುತ್ತಾರೆ.

ಬಿ.ಎಂ.ಶ್ರೀ ಯನ್ನು ಕನ್ನಡದ ಕಣ್ವ ಎಂದು ಪ್ರತಿನಿಧೀಕರಿಸುವಾಗ ೧೯೧೧ರಲ್ಲಿ ಧಾರವಾಡದ ಕನ್ನಡ ಸಂಘದಲ್ಲಿ ಶ್ರೀಯವರು ಮಾತನಾಡಿದ 'ಕನ್ನಡ ಮಾತು ತಲೆಯೆತ್ತುವ ಬಗೆ' ಘಟನೆಯಿಂದ ಆರಂಭಿಸಿ ೧೯೨೧ ರ ಇಂಗ್ಲಿಷ್ ಗೀತಗಳು ಕೃತಿಯ ಪ್ರಕಟಣೆ, ೧೯೨೬ರಲ್ಲಿ ಮೈಸೂರು ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ ಆಗಿ ನೇಮಕಗೊಂಡ ಮೇಲೆ ಮಹಾರಾಜ ಕಾಲೇಜಿನಲ್ಲಿ ಆರಂಭವಾದ ಸ್ನಾತಕೋತ್ತರ ಕನ್ನಡ ಅಧ್ಯಯನದ ಆರಂಭದ ಘಟನೆ, ಜೊತೆಯಲ್ಲಿಯೇ ಅಧ್ಯಾಪನ ಮತ್ತು ನವೋದಯದ ಆರಂಭದಲ್ಲಿ ಕನ್ನಡ ಬರಹಗಾರರಿಗೆ ನೀಡುತ್ತಿದ್ದ ಪ್ರೋತ್ಸಾಹ ಮೊದಲಾಗಿ ಭಾಶೆ, ಸಾಹಿತ್ಯ, ಶಿಕ್ಶಣ, ಸಂಸ್ಕೃತಿಯನ್ನು ಒಳಗೊಂಡ ಕನ್ನಡದ ಕಾಳಜಿಯುಳ್ಳ ಅನೇಕ ಘಟನೆಗಳು ಮುಖ್ಯವಾಗುತ್ತವೆ. ಈ ಸಂದರ್ಭವನ್ನು ವಿಶ್ಲೇಶಿಸುತ್ತಾ, 'ಕರ್ನಾಟಕದಲ್ಲಿ ವಸಾಹತು ಸಂಸ್ಕೃತಿಗೆ ಪರ್ಯಾಯವಾದ ಸಂಸ್ಕೃತಿ ಬೆಳೆಯಬೇಕಾಗಿತ್ತು. ಈ ಸಂಸ್ಕೃತಿ ಪಾಶ್ಚಾತ್ಯ ಮತ್ತು ಭಾರತೀಯ ಸಂಸ್ಕೃತಿಗಳ ಕಲಸು ಮೇಲೋಗರವಾಯಿತು' ಎಂದು ವಿಶಾದಿಸುವ ಡಾ. ಎಸ್. ಚಂದ್ರಶೇಖರ್[೨೩] 'ನಮ್ಮ ಮೊದಲ ಎರಡು ತಲೆಮಾರಿನ ಬುದ್ಧಿಜೀವಿ ವರ್ಗ ತಮ್ಮ ಬುದ್ಧಿಯನ್ನು ಬೆಳೆಸಿಕೊಂಡದ್ದೇ ಪಾಶ್ಚಾತ್ಯ ಸಂಪರ್ಕ, ವಿದ್ಯೆಗಳಿಂದ. ಈ ವಿದ್ಯೆ, ಸಂಪರ್ಕಗಳು ಅವರಲ್ಲಿ ನಮ್ಮ ಸಂಸ್ಕೃತಿಯ ಬಗ್ಗೆ ಕೀಳರಿಮೆ ಬೆಳೆಸಿದರೆ, ಕ್ರಮೇಣ ಒಣ ಪ್ರತಿಶ್ಟೆಯನ್ನು ಬೆಳೆಸಿತು' ಎಂದು ಚರ್ಚಿಸುತ್ತಾರೆ. ಅಲ್ಲದೆ 'ಈ ಗ್ರಹಿಕೆಯೇನಿದ್ದರೂ ವಿವಿಧ ಹಂತಗಳಲ್ಲಿ ಪಾಶ್ಚಾತ್ಯರು ಮತ್ತು ಅವರಿಂದ ತರಬೇತುಗೊಂಡ ಭಾರತೀಯರು ಸೃಶ್ಟಿಸಿದ ಭಾರತೀಯ ಇತಿಹಾಸದಿಂದ ಬಂದದ್ದು. ಈ ಇತಿಹಾಸ ಸಂಪೂರ್ಣ ವಿಕೃತ ರೂಪದಲ್ಲಿತ್ತು. ವಿದೇಶಿ ಪಂಡಿತರು ನಮ್ಮ ಶಾಲೆ ಕಾಲೇಜುಗಳಲ್ಲಿ ಉಣಬಡಿಸಿದ್ದು ಈ ವಿಕೃತ ಇತಿಹಾಸವೆ. ಮೊದಲ ಹಂತದಲ್ಲಂತೂ ಭಾರತೀಯರಲ್ಲಿ ಬೆಳೆದ ಕೀಳರಿಮೆ ನಮ್ಮವರನ್ನು ಬ್ರಿಟೀಶರ ದಾಸರನ್ನಾಗಿಸಿತು ಎಂದು ವಿಶ್ಲೇಶಿಸುತ್ತಾ ಇದಕ್ಕೆ ಉತ್ತಮ ಉದಾಹರಣೆಯೆಂದು ಬಿ.ಎಂ.ಶ್ರೀ ಯನ್ನು ಪ್ರಸ್ತಾಪಿಸುತ್ತಾರೆ. ಇಂಥ **ಕೀಳರಿಮೆ**ಯೇ ಸ್ವಾತಂತ್ರೋತ್ತರ ಕಾಲದ ಭಾರತ/ಕರ್ನಾಟಕದ **ಸಾಂಸ್ಕೃತಿಕ ಯಜಮಾನಿಕೆ**ಯನ್ನು ಗಟ್ಟಿಗೊಳಿಸಿಕೊಳ್ಳುವ ಅಸ್ತ್ರವೂ ಆಗಿ ಪರಿಣಮಿಸಿತು ಎಂಬುದನ್ನು ಗಮನಿಸಿಕೊಳ್ಳಬೇಕಾಗುತ್ತದೆ.

ಇಂಗ್ಲಿಶ್ ಅಧ್ಯಾಪಕರಾಗಿದ್ದ ಬಿ.ಎಂ.ಶ್ರೀ ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ ಆಗಿದ್ದುಕೊಂಡು ಸ್ನಾತಕೋತ್ತರ ಕನ್ನಡ ಸಾಹಿತ್ಯದ ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಿದ್ದರು. ಆಡಳಿತದ ಅಧಿಕಾರದ ಜೊತೆಯಲ್ಲಿ ಕನ್ನಡ ಸಾಹಿತ್ಯ, ಸಾಹಿತ್ಯ ಚರಿತ್ರೆ, ಛಂದಸ್ಸುಗಳನ್ನು ಅಧ್ಯಾಪನ ಮಾಡುತ್ತಿದ್ದ ಸಂದರ್ಭದಲ್ಲಿ ವಿದ್ಯಾರ್ಥಿಗಳಿಗಾಗಿ ಅವರು ರೂಪಿಸಿದ ಕೃತಿ–ಹಳಗನ್ನಡ ವ್ಯಾಕರಣ, ಕರ್ನಾಟಕ

ಛಂದಸ್ಸು, ಅಲಂಕಾರ, ಕನ್ನಡ ಭಾಷೆಯ ಚರಿತ್ರೆ, ಕನ್ನಡ ಸಾಹಿತ್ಯದ ಚರಿತ್ರೆಯ ಭಾಗಗಳನ್ನು ಒಳಗೊಂಡ ಅಧ್ಯಯನದ ಮಾರ್ಗದರ್ಶಕ ಕೈಪಿಡಿ–**ಕನ್ನಡ ಕೈಪಿಡಿ** ೧೯೨೮ರಲ್ಲಿ ಪ್ರಕಟವಾಯಿತು. ಈ ಮೂಲಕ ಅಧಿಕೃತವಾದ ಅಧ್ಯಯನ ಕ್ರಮವೊಂದು ಜಾರಿಗೆ ಬಂದಿತು. ಮುಂದಿನ ಕನ್ನಡ ಭಾಷೆ, ಸಾಹಿತ್ಯ ಕುರಿತ ಅಧ್ಯಯನಕ್ಕೆ ಬೇಕಾದ ಪದವಿ ಹಂತದ ಶೈಕ್ಷಣಿಕ ಪಠ್ಯಕ್ರಮಗಳನ್ನು ರೂಪಿಸುವಲ್ಲಿ ಇದು ಮಾದರಿಯೂ ಆಯಿತು. ಈ ಹಿನ್ನೆಲೆಯಲ್ಲಿಯೆ ಕನ್ನಡಸಾಹಿತ್ಯ ಮತ್ತು ಕನ್ನಡ ಭಾಷೆಗಳ ಕಲಿಕೆಯನ್ನು ಕುರಿತ ಮುಂದಿನ ಶೈಕ್ಷಣಿಕ ಚಟುವಟಿಕೆಗಳನ್ನು ವಿಶ್ಲೇಶಿಸಿಕೊಳ್ಳಬೇಕಾಗುತ್ತದೆ. ಅಂದರೆ ಕನ್ನಡ ಸಾಹಿತ್ಯ ಮತ್ತು ಭಾಷೆಯನ್ನು ಅಕಾಡೆಮಿಕ್ಕಾಗಿ ಓದಬೇಕಾದ ವಿದ್ಯಾರ್ಥಿಗೆ ಕನ್ನಡ ಸಾಹಿತ್ಯದ ಸುವರ್ಣಯುಗಗಳನ್ನು ಜೈನಸಾಹಿತ್ಯ, ವೀರಶೈವ ಸಾಹಿತ್ಯ, ಬ್ರಾಹ್ಮಣ ಸಾಹಿತ್ಯ ಎಂಬ ಕೋಮುವಾದಿ ನೆಲೆಗಳಲ್ಲಿ ವಿಂಗಡಿಸಿ ದರ್ಶನ ಮಾಡಿಸುವ ಕರಿಕ್ಯುಲಮ್ ಆರಂಭವಾಗುತ್ತದೆ. ಕಿಟೆಲ್, ರೈಸ್‌ರಿಂದ ಆರ್. ನರಸಿಂಹಾಚಾರ್ಯರ ಮೂಲಕ ಹಾದುಬಂದ ಚಿಂತನಾಕ್ರಮಗಳು ಮತ್ತಷ್ಟು ಪರಿಶ್ಕೃತಗೊಂಡು ಮುಂದುವರಿಯುತ್ತವೆ. ಪ್ರಾಚೀನ ಬರಹಗಾರರನ್ನು ಇಂಥ ಚಿಂತನೆಗಳಿಗೆ ಪ್ರತಿನಿಧೀಕರಿಸಿಕೊಳ್ಳಲಾಗುತ್ತದೆ.

ಪ್ರಾಚೀನ ಕನ್ನಡ ಸಾಹಿತ್ಯವನ್ನು ಭಾಶಿಕವಾಗಿ ನೋಡಬಹುದು ಎನಿಸಿದಾಗ ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಎಂದು ವಿಭಾಗೀಕರಿಸಿಕೊಳ್ಳಲಾಗುತ್ತದೆ. ಹೀಗೆ ಗ್ರಹಿಸುವ ಭಾಶೆಯ ಚರಿತ್ರೆಯೂ ಸಹ ಲಿಖಿತ ಆಧಾರಗಳನ್ನು ಅವಲಂಬಿಸಿದ ಮೇಲ್ನೋಟದ ಗ್ರಹಿಕೆಯೇ ಆಗಿದೆ. ಆದರೆ ಯಾವುದೇ ಕಾಲದ ಭಾಶೆ ತನ್ನ ವಿಶಾಲವಾದ ಪ್ರಾದೇಶಿಕ ಪರಿಸರದಲ್ಲಿ **ಏಕೀಕೃತ** ಆಗಿರುವುದಿಲ್ಲ. ಅಲ್ಲದೆ ಮಾತು ಮತ್ತು ಬರವಣಿಗೆ ಕುರಿತಂತೆ ಇದು ಮತ್ತಶ್ಟು ಪ್ರಶ್ನಾರ್ಹ ವಿಚಾರವೆಂಬುದನ್ನು ಭಾಶಾಶಾಸ್ತ್ರದ ಅಧ್ಯಯನಗಳು ಸ್ಪಶ್ಟಪಡಿಸುತ್ತವೆ. ಈ ಹಿನ್ನೆಲೆಯಲ್ಲಿ ಇದನ್ನು ಗ್ರಹಿಸಬೇಕಾಗುತ್ತದೆ. ಡಾ. ಕೆ.ವಿ. ನಾರಾಯಣ 'ಶಿಶ್ಟವಾದದ್ದು ಲಿಖಿತವೂ, ಜಾನಪದವು ತೋಂಡಿಯೂ ಆಗಿರುವುದೆಂಬ ಸಾಮಾನ್ಯ ತಿಳುವಳಿಕೆ ಪ್ರಚಲಿತವಾಗಿದೆ. ತೋಂಡಿ ಇಲ್ಲವೇ ಮೌಖಿಕವು ಲಿಖಿತ ಪರಂಪರೆಗೆ ದಾಟಿ ಬಂದಿತೆಂಬುದು ಈ ತಿಳುವಳಿಕೆಯ ಇನ್ನೊಂದು ತೀರ್ಮಾನ. ಆದರೆ ಮಾತು ಬರಹಗಳ ನಡುವೆ ಖಚಿತ ಅನುಪೂರ್ವಿಯೊಂದು ಇದೆಯೆಂದು ವಾದಿಸುವುದು ಕಶ್ಟ. ಕನ್ನಡ ಕಾವ್ಯ ಪರಂಪರೆಯಂತೂ ಈ ಅನುಪೂರ್ವಿಯನ್ನು ಒಪ್ಪಿಲ್ಲ' ಎಂಬುದನ್ನು ಪಂಪ, ಕುಮಾರವ್ಯಾಸರ ಕಾವ್ಯಗಳಲ್ಲಿನ ಉದಾಹರಣೆಗಳ ಮೂಲಕವೆ ವಿವರಿಸುತ್ತಾರೆ. ಆದ್ದರಿಂದಾಗಿ ಲಿಖಿತವಾದದ್ದು ಅಧಿಕೃತ ಎಂಬ ಚಿಂತನೆಗಳು ಆಧುನಿಕದಲ್ಲಿ ಪ್ರಿಂಟ್ ಕ್ಯಾಪಿಟಲಿಸಂನ ಭಾಗವಾಗಿ ಅತ್ಯಂತ ತೀವ್ರವಾಗಿ

ಚಾಲನೆಗೊಳ್ಳುತ್ತವೆ ಎಂಬುದನ್ನೂ ಗಮನಿಸಬೇಕಾಗುತ್ತದೆ. ಇದು ಶಿಕ್ಷಣದ ಪಠ್ಯಕ್ರಮಗಳ ಮೂಲಕ ಕಲಿಕಾರ್ಥಿಯ ಸಾಮರ್ಥ್ಯ ಮತ್ತು ಪ್ರತಿಭೆಯನ್ನು ನಿರ್ಧರಿಸುವಲ್ಲಿ ಅಧಿಕಾರ ಸಂಬಂಧಗಳನ್ನು ರೂಪಿಸುವ ಮಾನದಂಡವೂ ಆಗಿ ಪರಿಣಮಿತ್ತದೆ. ಇದನ್ನು ಮುಂದೆ ವಿವರಿಸಿಕೊಳ್ಳಲಾಗುತ್ತದೆ.

೧೯೪೭ರಲ್ಲಿ ಹೆರಿಟೇಜ್ ಆಫ್ ಕರ್ನಾಟಕ, ೧೯೫೩ರಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯನ್ನು ಪ್ರಕಟಿಸಿದ ರಂ.ಶ್ರೀ. ಮುಗಳಿ 'ಕನ್ನಡ ಸಾಹಿತ್ಯವನ್ನು ಆಧುನಿಕ ದೃಶ್ಟಿಯಿಂದ ವ್ಯಾಸಂಗ ಮಾಡಬೇಕೆನ್ನುವವರಿಗೆ ಅವಶ್ಯವೆಂದು ತೋರುವ ಚಾರಿತ್ರಿಕ ಮತ್ತು ವಿಮರ್ಶ್ಯಾತ್ಮಕ ವಿವೇಚನೆಯು ಒಂದು ಸಮಗ್ರವಾದ ಗ್ರಂಥ ರೂಪದಲ್ಲಿ ದೊರೆಯಬೇಕಾಗಿತ್ತು. **ಪಾಠ ಹೇಳುವ ಅಧ್ಯಾಪಕರಿಗೂ ಕೇಳುವ ವಿದ್ಯಾರ್ಥಿಗಳಿಗೂ** ಇಂಥ ಗ್ರಂಥದ ಅಗತ್ಯವು ವಿಶೇಶವಾಗಿ ತೋರಿತ್ತು. ಅದನ್ನು ಪೂರೈಸುವ ಮನೀಶೆಯಿಂದ 'ಕನ್ನಡ ಸಾಹಿತ್ಯ ಚರಿತ್ರೆ' ಎಂಬ ಗ್ರಂಥವನ್ನು ಬರೆದು ಕನ್ನಡಿಗರಿಗೆ ಬರೆದು ಅರ್ಪಿಸಿದುದಾಗಿ ಹೇಳುತ್ತಾರೆ. ಇಂಥ ಸಿದ್ಧಾಂತದ ಪ್ರಾತಿನಿಧಿಕ ರೂಪವಾಗಿ ತೀ.ನಂ.ಶ್ರೀಯ 'ಭಾರತೀಯ ಕಾವ್ಯ ಮೀಮಾಂಸೆ' ಕನ್ನಡ ಸಾಹಿತ್ಯ, ಭಾಶೆ ಕುರಿತ ಕಲಿಕೆಗಳನ್ನು ನಿರ್ಧರಿಸುವ **ಆಚಾರ್ಯ ಕೃತಿ**ಯೆನಿಸಿಕೊಳ್ಳುತ್ತದೆ. ಇಂದಿಗೂ ಸಂಸ್ಕೃತ ಪರಂಪರೆಯ ಉತ್ಪನ್ನಗಳಾದ ಈ ಪಠ್ಯಗಳು ಶಿಕ್ಷಣದ ಪಠ್ಯಕ್ರಮ ಮತ್ತು ಬೋಧನೆಗಳ ಮೂಲಕ ಜಾರಿಗೊಳ್ಳುತ್ತ ಅಧಿಕೃತವಾಗುತ್ತಿರುವುದನ್ನು ಕರ್ನಾಟಕದ ಯಾವುದೇ ವಿಶ್ವವಿದ್ಯಾಲಯದ ಸಂದರ್ಭದಲ್ಲೂ ಕಾಣಬಹುದಾದ ವಿಚಾರವಾಗಿದೆ.

ಆಡಳಿತ ವ್ಯವಸ್ಥೆಗಳು ಅಧಿಕೃತವಾಗಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮೂಲಕ ಕನ್ನಡ ಭಾಶೆ ಮತ್ತು ಸಂಸ್ಕೃತಿಯ ಅಭಿವೃದ್ಧಿಯ ಹೆಸರಿನಲ್ಲಿ ಇಂಥ ಪಠ್ಯಗಳ ಪುನರ್ಮುದ್ರಣಗಳನ್ನು ಮಾಡುತ್ತ ಕನ್ನಡ ಜನತೆಯೊಳಗೆ ಚಾಲನೆಯಲ್ಲಿರುವಂತೆ ಸಾಧ್ಯವಾಗಿಸಿಕೊಳ್ಳುತ್ತಿರುತ್ತವೆ. ಆ ಮೂಲಕ ಸಂಸ್ಕೃತ ಪರಂಪರೆಯೇ ಭಾರತ/ಕರ್ನಾಟಕದ ಅಧಿಕೃತ ಪರಂಪರೆ ಎಂಬುದನ್ನು ಅಧಿಕಾರ ಸಂಬಂಧವಾಗಿ ಉಳಿಸಿ ಬೆಳೆಸುವ ರಾಜಕಾರಣವನ್ನು ಜೀವಂತವಾಗಿರಿಸಿಕೊಳ್ಳಲು ಪ್ರಯತ್ನಿಸಲಾಗುತ್ತದೆ. ಹೀಗಾಗಿ ಈ ಹಿನ್ನೆಲೆಯಲ್ಲಿ ಉತ್ಪನ್ನವಾದ ಅಧ್ಯಯನಗಳು ಶೈಕ್ಷಣಿಕ ಶಿಸ್ತಿನ ಪಠ್ಯಗಳನ್ನಾಗಿ ಸಹಜೀಕರಣಗೊಳಿಸಲಾಯಿತು ಎಂಬುದನ್ನು ಗಮನಿಸಬೇಕಾಗುತ್ತದೆ. ಹೀಗೆ, **ವಸಾಹತು ಜ್ಞಾನಮೀಮಾಂಸೆ** ಮತ್ತು ಸಂಸ್ಕೃತ **ಜ್ಞಾನಮೀಮಾಂಸೆ**ಗಳ ಮೂಲಕ ಕನ್ನಡಪ್ರಜ್ಞೆ ಏಕೀಕೃತಗೊಂಡು ಅಧಿಕಾರ ಸಂಬಂಧಗಳನ್ನು ಸಾಧಿಸಿಕೊಳ್ಳುತ್ತಲೇ ಬಂದಿರುವುದನ್ನು ಗಮನಿಸಿಕೊಳ್ಳಬೇಕಾಗುತ್ತದೆ.

ಇಪ್ಪತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಕನ್ನಡ ವಿಮರ್ಶೆ, ಸಾಹಿತ್ಯ ಚರಿತ್ರೆ ಮತ್ತು ಸಾಹಿತ್ಯ ಚಿಂತನ ಮೀಮಾಂಸೆಗಳ ಮೂಲಕ ಜಿ.ಎಸ್.ಶಿವರುದ್ರಪ್ಪ ಬೆಂಗಳೂರು ವಿಶ್ವವಿದ್ಯಾಲಯವನ್ನು ಕೇಂದ್ರವಾಗಿಸಿಕೊಂಡು ಈ ಚಿಂತನೆಗಳನ್ನು ಮತ್ತಷ್ಟು ಪರಿಷ್ಕೃತವಾಗಿ ಕಟ್ಟತೊಡಗುವುದೂ ಸಹ ಈ ಯಜಮಾನ ಪರಂಪರೆಯ ಮುಂದುವರಿದ ರೂಪವೇ ಆಗಿದೆ. **ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ** ಮತ್ತು **ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ** ಯೋಜನೆಗಳ ಮೂಲಕ ಕನ್ನಡ ಸಾಹಿತ್ಯವನ್ನು ಅದರ ಐತಿಹಾಸಿಕ, ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಸಮಾಜದ ಸಮಸ್ತ ಆಯಾಮಗಳಿಂದ ಪರಿಶೀಲಿಸಿ ಪುನರ್ರಚಿಸುವ ಪ್ರಯತ್ನವೂ ಸಹ ಇಂಥ ಚಿಂತನಾ ಮಾದರಿಗಳನ್ನು ಮೀರುವುದಿಲ್ಲ. ‘ಸಾಹಿತ್ಯವೆಂದರೆ ಕೇವಲ ಸೃಜನಾತ್ಮಕ ಕೃತಿಗಳು ಮಾತ್ರವಲ್ಲ. ಕರ್ನಾಟಕದ ಸಾವಿರ ವರುಶಗಳ ಸಮಷ್ಟಿ ಮನಸ್ಸು ಯಾವ ಯಾವ ಅಭಿವ್ಯಕ್ತಿ ಪ್ರಕಾರಗಳಲ್ಲಿ ತನ್ನನ್ನು ತಾನು ಪ್ರಕಟಪಡಿಸಿಕೊಂಡಿದೆಯೊ ಆ ಸಮಸ್ತ ವಾಙ್ಗ್ಮ(ಙ್ಮ)ಯದ ಪರಿಶೀಲನೆ’ ಮತ್ತು ‘ಇದನ್ನು ಭಾರತೀಯ ಮತ್ತು ಜಾಗತಿಕ ಸಾಹಿತ್ಯದ ಹಿನ್ನೆಲೆಯಲ್ಲಿ ನಡೆಯಬೇಕು’ ಎಂದು ವಿವರಿಸಿಕೊಳ್ಳುವಾಗಲೂ **ಪ್ರಾಚೀನ**ವನ್ನು ಕುರಿತ ವೈಭವೀಕೃತ ಚಿಂತನೆಗಳು ಆದರ್ಶಮಯವಾಗಿ ಮುಂದುವರಿಯುವುದೇ ಕಾಣುತ್ತದೆ. ಹಾ.ಮಾ. ನಾಯಕ್ ಸಂಪಾದಕತ್ವದಲ್ಲಿ ನಡೆದ ‘ಮೈಸೂರು ವಿಶ್ವವಿದ್ಯಾಲಯದ ಕನ್ನಡ ಸಾಹಿತ್ಯ ಚರಿತ್ರೆ’ಯ ಸಂಪುಟಗಳೂ ಸಹ ಇಂಥ ಚಟುವಟಿಕೆಯ ಭಾಗವೇ ಆಗಿವೆ. ಪರಸ್ಪರ ಸ್ಪರ್ಧಿಗಿಳಿದಂತೆ ಮೈಸೂರು ಮತ್ತು ಬೆಂಗಳೂರು ವಿಶ್ವವಿದ್ಯಾಲಯಗಳಲ್ಲಿ ಈ ಯೋಜನೆಗಳು ರೂಪುಗೊಳ್ಳುವುದೂ ಸಹ ಕನ್ನಡ **ಬೌದ್ಧಿಕ ಯಜಮಾನಿಕೆ**ಯ ಪರಂಪರೆಗಳಲ್ಲಿ ಇತರೆ ಶಕ್ತ ಸಮುದಾಯಗಳು ತನ್ನ ಗುರುತನ್ನು ದಾಖಲಿಸುವುದೇ ಆಗಿ ಈ ವಿದ್ಯಮಾನವನ್ನು ಗ್ರಹಿಸಬೇಕಾಗುತ್ತದೆ. ಬಹುಮುಖ್ಯವಾಗಿ, ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ನಡೆಯುವ ಲಿಂಗಾಯತ ಕೇಂದ್ರಿತವಾದ ಸಾಹಿತ್ಯದ ಅಧ್ಯಯನಗಳು, ಮೈಸೂರು ವಿಶ್ವವಿದ್ಯಾಲಯದ ವ್ಯಾಪ್ತಿಯ ಒಕ್ಕಲಿಗ ಕೇಂದ್ರಿತ(ಬಹುಮಟ್ಟಿಗೆ ಕುವೆಂಪು) ಅಧ್ಯಯನಗಳು, ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನವನ್ನು ಕೇಂದ್ರವಾಗಿಸಿಕೊಂಡು ಜಿ.ಎಸ್.ಎಸ್. ರೂಪಿಸಿದ ಅಧ್ಯಯನಗಳು ಈ ಹಿನ್ನೆಲೆಯಲ್ಲಿ ಗಮನಿಸಬೇಕಾದ ಸಂಗತಿಗಳಾಗಿವೆ. ಇಲ್ಲಿವರೆಗೆ ಪ್ರವೃತ್ತವಾಗಿದ್ದ ಸಾಹಿತ್ಯ ಪರಂಪರೆಯನ್ನು ಪರಿಷ್ಕರಣಕ್ಕೆ, ಮರುವ್ಯಾಖ್ಯಾನಕ್ಕೆ ಒಳಪಡಿಸುತ್ತಲೇ ಈ ವಿದ್ಯಮಾನಗಳನ್ನು ಕಟ್ಟಲಾಗುತ್ತದೆ. ಇದು ಮತ್ತೊಂದು ಪ್ರತ್ಯೇಕ ಅಧ್ಯಯನದ ವಸ್ತುವೇ ಆಗುತ್ತದೆ.

ಇಪ್ಪತ್ತನೆ ಶತಮಾನದ ಈ ಬಗೆಯ ಉದಾರವಾದಿ ವೈಭವೀಕೃತ ಅಧ್ಯಯನಗಳು ವಿಶ್ವಮಾರುಕಟ್ಟೆ ಕಲ್ಪನೆಯ ತಯಾರಿಯಾಗಿಯೂ ಗೋಚರಿಸುತ್ತವೆ. ಈ ಸಂದರ್ಭದಲ್ಲಿ, ಜಾಗತಿಕ ಶಕ್ತಿಗಳು ಮೂರನೆ ವರ್ಗದ ರಾಷ್ಟ್ರಗಳ ಸಾಹಿತ್ಯ ಮತ್ತು ಸಂಸ್ಕೃತಿಯ ಅಧ್ಯಯನಗಳಲ್ಲಿ ವಹಿಸಿದ ಆಸಕ್ತಿಗಳ ಹಿನ್ನೆಲೆಯಲ್ಲಿ ಜಾಗತೀಕರಣ ಸಂದರ್ಭಗಳಿಗೆ ತಯಾರು ಮಾಡುವ ಉಪಾಯವೊಂದು ತನ್ನಿಂದ ತಾನೆ ಈ ಮೂಲಕ ಚಾಲನೆಗೊಂಡಂತೆ ಕಾಣುತ್ತದೆ. ಆ ಮೂಲಕ ಬದುಕು ಮತ್ತು ಬರಹ ಕುರಿತ ಇಂಥ ಚಿಂತನೆಯು ತನ್ನ ಉದಾರವಾದಿ ನೆಲೆಗಳನ್ನು ಮತ್ತಷ್ಟು ವಿಸ್ತರಿಸಿಕೊಳ್ಳುತ್ತಾ ನವ ವಸಾಹತು ಪ್ರಜ್ಞೆಯನ್ನು ರೂಢಿಸಿಕೊಳ್ಳುವ ಪ್ರಯತ್ನದಲ್ಲಿ ತೊಡಗಿರುವಂತೆ ತೋರುತ್ತದೆ. ಆದ್ದರಿಂದಾಗಿಯೆ ಈ ಬಗೆಯ ಅಧ್ಯಯನಗಳು ಕನ್ನಡ ಸಾಹಿತ್ಯ ಪರಂಪರೆಯ ಬಗ್ಗೆ ಅಧಿಕೃತವಾಗಿ ಮಾತನಾಡುವ ವಿನಯವನ್ನು ಪ್ರಕಟಿಸುತ್ತಲೇ 'ಕನ್ನಡ ಸಾಹಿತ್ಯ ಚರಿತ್ರೆಯನ್ನು ಕುರಿತು ಇನ್ನೂ ಬೇರೆ ಬೇರೆಯ ದೃಷ್ಟಿಗಳಿಂದ ನಡೆಯಬೇಕಾದ ಕೆಲಸ ಸಾಕಷ್ಟಿದೆ. ಒಂದಲ್ಲ ಹತ್ತು ಸಾಹಿತ್ಯ ಚರಿತ್ರೆಗಳು ಬಂದರೂ ನಷ್ಟವಿಲ್ಲ' ಎಂಬ ಚಿಂತನೆಗಳು ಹುಟ್ಟಿಕೊಳ್ಳುತ್ತವೆ. ಇದರಿಂದಾಗಿ, ಸಾಮಾನ್ಯರಿಗೆ, ಪ್ರೌಢರಿಗೆ, ಅಧ್ಯಾಪಕರಿಗೆ ಮತ್ತು ವಿದ್ಯಾರ್ಥಿಗಳಿಗೆ ಭಿನ್ನವಾಗಿ ಸಾಹಿತ್ಯ ಚರಿತ್ರೆಗಳನ್ನು ರಚಿಸುವ ಪ್ರಯತ್ನಗಳಲ್ಲಿ ಹೊಸಹೊಸ ಮಾರ್ಕೆಟಿಂಗ್ ಯೋಜನೆಗಳು ತಾನೇ ತಾನಾಗಿ ಜಾರಿಗೆ ಬರುತ್ತಿರುತ್ತವೆ[೧೪]. ಯಾಕೆಂದರೆ, ಮಾರ್ಕೆಟ್ ಎನ್ನುವುದು ಆರ್ಥಿಕ ಬಂಡವಾಳದ ವಲಯವಾಗಿರುವಂತೆ ಸಾಮಾಜಿಕ ಬಂಡವಾಳವನ್ನು ರೂಢಿಸಿಕೊಳ್ಳುವ ವಿಶಾಲವಾದ ಕ್ಷೇತ್ರವೇ ಆಗಿದೆಯಾದ್ದರಿಂದ.

ಹೀಗೆ ವಸಾಹತು ವಿದ್ವಾಂಸರಿಂದ ಆರಂಭವಾದ ಕನ್ನಡ ಭಾಶೆ ಮತ್ತು ಸಾಹಿತ್ಯಕ್ಕೆ ಚರಿತ್ರೆಯನ್ನು ರೂಪಿಸುವ ಚಿಂತನೆಯನ್ನು ವೈದಿಕ ಪರಂಪರೆಯ ಸಂಸ್ಕೃತ ಜ್ಞಾನದ ಮೂಲಕ **ಸ್ವ** ಆಗಿ ಕಟ್ಟಿಕೊಳ್ಳಲಾಗುತ್ತದೆ. ಈ ಬಗೆಯ **ಸ್ವ** ಜ್ಞಾನದ ಮೂಲಕ ಕಟ್ಟಿಕೊಂಡ ಚರಿತ್ರೆ ಮತ್ತು ಪರಂಪರೆ ಕುರಿತ ಚಿಂತನೆಯು ವಸಾಹತು ಬೌದ್ಧಿಕತೆಯನ್ನು ಎದುರಿಸಲು ರೂಪಿಸಿಕೊಂಡ **ಭಾರತೀಯ ಸಂಸ್ಕೃತಿ**ಯ ಸಾಂಸ್ಕೃತಿಕ ಪ್ರತಿನಿಧೀಕರಣಗಳೆನಿಸಿ ಕನ್ನಡ ಭಾಶೆ ಮತ್ತು ಸಾಹಿತ್ಯ ಪರಂಪರೆಯ ವೈಭವವನ್ನು ಕಲ್ಪಿಸುತ್ತದೆ. ಈ ಮೂಲಕ ಭಾರತ ರಾಷ್ಟ್ರೀಯ ಹೋರಾಟ ಮತ್ತು ಏಕೀಕೃತ ಕರ್ನಾಟಕದ ಹೋರಾಟಗಳು ಒಂದೇ ಆಗುತ್ತವೆ. ಇದನ್ನು ಕೀರ್ತಿನಾಥ ಕುರ್ತಕೋಟಿಯು[೧೫]ವರು 'ಕರ್ನಾಟಕದ ಏಕೀಕರಣ, ಕನ್ನಡ ಭಾಶೆಯ ಅಭ್ಯುದಯ ಮೊದಲಾದ ಪ್ರಶ್ನೆಗಳು ರಾಜಕೀಯವಾಗಿದ್ದವು. ಕರ್ನಾಟಕದ ಏಕೀಕರಣ ಭಾರತದ ಸ್ವಾತಂತ್ರ್ಯದಶ್ಟೇ ಮಹತ್ವದ ಪ್ರಶ್ನೆಯಾಗಿತ್ತು' ಎಂದು ದಾಖಲಿಸುತ್ತಾರೆ.

ಏಕಕಾಲದಲ್ಲಿ ನಾಡು ನುಡಿಯ ಕುರಿತ ಹೋರಾಟಗಳು ಮತ್ತು ಅಧ್ಯಯನ ಕ್ರಮಗಳು ಇವೆರಡೂ ಪರಸ್ಪರ ಈ ಉದಾರವಾದಿ ಚಿಂತನೆಯನ್ನು ಅವಲಂಬಿಸಿ ನಡೆಯುತ್ತವೆ. ಹೀಗಾಗಿ ವಸಾಹತು ಕಾಲದ, ಸಂಸ್ಕೃತ ಪರಂಪರೆಯಿಂದ ಬಂದ ಕನ್ನಡ ವಿದ್ವಾಂಸರಿಗೆ ಕನ್ನಡ ಸಾಹಿತ್ಯದ ಪ್ರಾತಿನಿಧಿಕ ಸಂಪತ್ತನ್ನು ಶೋಧಿಸುವುದು, ಸಂಪಾದಿಸುವುದು, ಜೋಡಿಸುವುದು ಅತ್ಯಂತ ಉತ್ಸಾಹದ ವಿದ್ವತ್ತಿನ ಕೆಲಸವಾಗುತ್ತದೆ. ವಿಶ್ವವಿದ್ಯಾಲಯಗಳ ಕನ್ನಡ ಅಧ್ಯಯನ ಕೇಂದ್ರಗಳು ಮತ್ತು ಕನ್ನಡ ಸಾಹಿತ್ಯ ಪರಿಶತ್ತಿನಂತಹ ಸಂಸ್ಥೆಗಳು ಇದನ್ನು ಸಂಘಟಿಸುವ ಕಾರ್ಯದಲ್ಲಿ ನಾಯಕ ಪಾತ್ರ ವಹಿಸುತ್ತವೆ. ಕುರ್ತಕೋಟಿ[೮೧]ಯವರು ಬಿ.ಎಂ.ಶ್ರೀ ಆರಂಭಿಸಿದ ಇಂಥ ಪ್ರಯತ್ನಗಳನ್ನು ಚರ್ಚಿಸುತ್ತ 'ಕನ್ನಡ ಕೈಪಿಡಿಯನ್ನು ಅವರು ರಚಿಸಿದ್ದು ಕನ್ನಡ ಸಾಹಿತ್ಯದ ಅಭ್ಯಾಸ ಕ್ರಮವನ್ನು ಸೃಷ್ಟಿಸುವುದಕ್ಕಾಗಿ. ಭಾಶಾಶಾಸ್ತ್ರ, ಅಲಂಕಾರ, ಛಂದಸ್ಸು ಮತ್ತು ಸಾಹಿತ್ಯ ಚರಿತ್ರೆಯಂಥ ವಿಶಯಗಳನ್ನು ಈ ಗ್ರಂಥ ಒಳಗೊಂಡಿದ್ದು ಇಂದಿಗೂ ನಮ್ಮ ವಿಶ್ವವಿದ್ಯಾಲಯಗಳ ಸಾಹಿತ್ಯದ ಅಭ್ಯಾಸದಲ್ಲಿ ಇದು ಅನಿವಾರ್ಯವಾಗಿದೆ' ಎನ್ನುತ್ತಾರೆ. ತರಗತಿಯ ಬೋಧನೆ ಮತ್ತು ಪರೀಕ್ಶೆಗಳ ಮೂಲಕ ಕನ್ನಡ ಭಾಶೆ, ಸಾಹಿತ್ಯ, ಚರಿತ್ರೆ, ಪರಂಪರೆ, ಸಂಸ್ಕೃತಿ ಚಿಂತನೆ ಕುರಿತ **ಸಾಂಪ್ರದಾಯಿಕ ಯಜಮಾನಿಕೆ**ಯ ಮತ್ತು ಇದರ ನಿರಂತರ **ಕಾವಲುಗಾರ**(ಕನ್ನಡ ಪಂಡಿತ)ರ ಉತ್ಪಾದನಾ ಕಾರ್ಯವೊಂದು ಹೀಗೆ ನಡೆಯತೊಡಗುತ್ತದೆ. ಆದ್ದರಿಂದಾಗಿ, ಒಂದು ಶತಮಾನಕ್ಕೂ ಹೆಚ್ಚು ಕಾಲ ಕನ್ನಡ ಭಾಶೆ ಮತ್ತು ಸಾಹಿತ್ಯವನ್ನು ಶೈಕ್ಶಣಿಕ ಶಿಸ್ತುಗಳ ಹೆಸರಲ್ಲಿ ಸಂಸ್ಕೃತ ಪರಂಪರೆಯು ಆಳುವುದು ಸಾಧ್ಯವಾಗುತ್ತದೆ. ಇದನ್ನೆ ಇವತ್ತಿಗೂ ಮೌಲ್ಯವಾಗಿಸಲು ಪ್ರಯತ್ನಿಸುತ್ತದೆ. ಇದನ್ನು ಮುಂದೆ ಪಠ್ಯಕ್ರಮಗಳ ವಿಶ್ಲೇಶಣೆಯಲ್ಲಿ ಮತ್ತಶ್ಟು ಸ್ಪಶ್ಟವಾಗಿ ವಿಶ್ಲೇಶಿಸಿಕೊಳ್ಳಲಾಗುತ್ತದೆ.

### ೫.೩ ಯಜಮಾನಿಕೆಯ ಸ್ಥಾಪನೆ: ಪಠ್ಯಗಳ ಸಂವಹನ ಪ್ರಕ್ರಿಯೆ ಮತ್ತು ಕಲಿಕಾರ್ಥಿಯ ಸಾಮರ್ಥ್ಯ ನಿರ್ಧಾರ

ಈವರೆಗಿನ ಒಟ್ಟು ಚರ್ಚೆಯ ಹಿನ್ನೆಲೆಯಲ್ಲಿ ಕನ್ನಡ ಭಾಶೆ, ಸಾಹಿತ್ಯದ ಕಲಿಕೆಯಲ್ಲಿ ಪ್ರವೃತ್ತವಾಗಿರುವ ಅಧಿಕಾರ ಸಂಬಂಧಗಳನ್ನು ಅರ್ಥೈಸಿಕೊಳ್ಳುವ ದೃಶ್ಟಿಯಿಂದ **ಯಜಮಾನಿಕೆ**ಯನ್ನು ಪರಿಕಲ್ಪಿಸಿಕೊಳ್ಳುವುದು ಸದ್ಯದ ಅಧ್ಯಯನಕ್ಕೆ ಸಂಬಂಧಿಸಿದಂತೆ ಮುಖ್ಯವಾಗುತ್ತದೆ.

**ಯಜಮಾನಿಕೆ**[೮೨] ಈ ಪರಿಕಲ್ಪನೆಯನ್ನು ಇಂಗ್ಲಿಶ್‌ನ hegemony ಗೆ ಪರ್ಯಾಯವಾಗಿ ಇಲ್ಲಿ ಬಳಸಲಾಗಿದೆ. ಅಧಿನಾಯಕತ್ವ, ಅಧಿಪತ್ಯ, ಪ್ರಮುಖತೆ, ಪ್ರಾಬಲ್ಯ, ಮುಖಂಡತ್ವ ಎಂಬ ಅರ್ಥಗಳನ್ನು ನಿಘಂಟುಗಳು ಒಳಗೊಂಡಿವೆ. ಒಂದು ನಿರ್ದಿಶ್ಟ ವ್ಯವಸ್ಥೆ–ಕುಟುಂಬ, ಊರು, ಜಾತಿ,

ಕುಲ, ವ್ಯಕ್ತಿ, ಸಮುದಾಯ, ಸಮಾಜ-ದ ಮೇಲೆ ನಿಯಂತ್ರಣವನ್ನು ಸಾಧಿಸುವ **ಶಕ್ತಿ**ಯನ್ನು ಯಜಮಾನಿಕೆ ಅಥವಾ ಯಜಮಾನ್ಯ ಎಂದು, ನಿಯಂತ್ರಣ ಸಾಧಿಸುವ **ವ್ಯಕ್ತಿ**ಯನ್ನು ಯಜಮಾನ ಎಂದು ಇಲ್ಲಿ ವಿವರಿಸಿಕೊಳ್ಳಬಹುದಾಗಿದೆ. ಇವುಗಳ ವೈಯುಕ್ತಿಕ ನೆಲೆಯ ನೇತೃತ್ವವವನ್ನು ಗುರುತಿಸಿ ಹೇಳುವಾಗ ಕುಟುಂಬ ಅಥವಾ ಮನೆ ಯಜಮಾನ, ಮನೆಯೊಳಗಿನ ಹೆಂಗಸಿಗೆ ಯಜಮಾನ(ಗಂಡ/ಅಪ್ಪ), ಊರಿನ ಯಜಮಾನ, ಜಾತಿ ಮುಖಂಡ, ಕುಲದ ಯಜಮಾನ, ಸಮುದಾಯದ ಮುಖಂಡ, ಸಮಾಜದ ಮುಖಂಡ ಎನ್ನುವ ರೂಡಿಗಳು ಚಾಲ್ತಿಯಲ್ಲಿವೆ. ನಿಯಂತ್ರಣ ಮೂಲವಾದ ಅಧಿಕಾರ ಸಂಬಂಧವು ಸಾಮಾಜಿಕ ಸಂದರ್ಭಗಳಲ್ಲಿ ಚಾಲನೆಗೊಳ್ಳುವುದನ್ನು ಈ ಪರಿಕಲ್ಪನೆ ವಿವರಿಸುತ್ತದೆ. ಅಂದರೆ ಆಳುವ ವ್ಯವಸ್ಥೆ ಮತ್ತು ಆಳಿಸಿಕೊಳ್ಳುವ ವ್ಯವಸ್ಥೆಗಳ ನಡುವಿನ ಸಂಬಂಧವೊಂದು ಈ ಮೂಲಕ ಅನಾವರಣಗೊಳ್ಳುತ್ತದೆ. ಇದನ್ನು ಭಾರತ/ಕನ್ನಡದ ಸಂದರ್ಭದಲ್ಲಿ ಆರ್ಯ-ದ್ರಾವಿಡ, ಬ್ರಾಹ್ಮಣ-ದಲಿತ, ಸಂಸ್ಕೃತಿ-ಉಪ ಸಂಸ್ಕೃತಿ, ಪ್ರಧಾನ ಸಂಸ್ಕೃತಿ-ಅಧೀನ ಸಂಸ್ಕೃತಿ, ಸಂಸ್ಕೃತಿ-ಪ್ರತಿ ಸಂಸ್ಕೃತಿ, ಶಿಷ್ಟ-ಪರಿಶಿಷ್ಟ, ಶಿಷ್ಟ-ದೇಸಿ, ಮೇಲು-ಕೀಳು, ಶ್ರೇಷ್ಟ-ಕನಿಷ್ಟ, ಸ್ಪೃಶ್ಯ-ಅಸ್ಪೃಶ್ಯ, ಶೋಶಿತ-ದಮನಿತ, ಸಂಸ್ಕೃತ ಪರಂಪರೆ-ದೇಸಿ ಪರಂಪರೆ ಮೊದಲಾಗಿ ಪರಿಕಲ್ಪಿಸಲಾಗಿದೆ. ಈ ಹಿನ್ನೆಲೆಯಲ್ಲಿ ದಮನಿತ ದನಿಗಳ ಚಿಂತನವನ್ನು ಕುರಿತು ಚರ್ಚಿಸುತ್ತ ಡಾ.ಡಾಮ್ನಿಕ್[೨೮] ಹೀಗೆ ವಿವರಿಸಿಕೊಳ್ಳುತ್ತಾರೆ: ಇಂದು ಜನಾಂಗ ಮತ್ತು ಅವರ ಸುತ್ತಲಿನ ಬೌತಿಕ ಪ್ರಪಂಚದ ಬಗ್ಗೆ ಕೂಡಿಹಾಕುವ ಮಾಹಿತಿಯನ್ನು 'ಜ್ಞಾನ-ವಿಜ್ಞಾನವೆಂದು, ಜ್ಞಾನಸಂಪತ್ತೆಂದು ಪರಿಗಣಿಸಲಾಗುತ್ತದೆ. ಹೀಗೆ ಪರಿಗಣಿತವಾಗಲು ರಾಜಕೀಯಾಧಿಕಾರ ಮತ್ತು ಪ್ರಭುತ್ವಗಳು ಕಾರಣಗಳಾಗುತ್ತವೆ. ಇವು ಮಾನವ ಹಕ್ಕುಗಳ ಬಗ್ಗೆ ಮಾತನಾಡುತ್ತವೆ. ಅಂದರೆ ಕೇವಲ ಮಾಹಿತಿಯನ್ನು ಪಡೆದುಕೊಂಡವರ ಹಕ್ಕುಗಳನ್ನಷ್ಟೆ ಇಲ್ಲಿ ಮಾತನಾಡುವುದು. ಆದರೆ ವಾಸ್ತವದಲ್ಲಿ ಇದನ್ನು ಎಲ್ಲರಿಗೂ ಅನ್ವಯಿಸಿ ಎಲ್ಲರ ಮೇಲೆ ಸರ್ವಾಧಿಕಾರ ನೆಲೆಯನ್ನು ಸ್ಥಾಪಿಸುತ್ತವೆ. ಇದನ್ನೇ ಯಜಮಾನ್ಯ ಅಥವಾ ಯಜಮಾನಿಕೆ ಎನ್ನುವುದು. ಇದನ್ನು ಪೋಶಿಸುವುದೇ ಜ್ಞಾನ, ವಿಜ್ಞಾನವಾಗುತ್ತದೆ(ಡಾಮ್ನಿಕ್ ೨೦೦೭) ಎಂದು ದಮನಿತರ ನೆಲೆಯಲ್ಲಿ ನಿಂತು ಸಿದ್ಧ ಸಮಾಜದ ಅಧಿಕಾರ ಸಂಬಂಧಗಳನ್ನು ವಿಶ್ಲೇಶಿಸುವ ಡಾಮ್ನಿಕ್, ಶೋಶಣೆ, ದಮನ ಎನ್ನುವುದನ್ನು ಕೇಂದ್ರವನ್ನಾಗಿ ಇಟ್ಟುಕೊಂಡು ಹೊರಡುವ ಯಾವುದೇ ಚಿಂತನೆಯನ್ನು ಅಧಿಕಾರವೆಂದು ವಿವರಿಸಿಕೊಳ್ಳಬೇಕಾಗುತ್ತದೆ ಎನ್ನುತ್ತಾರೆ. ಆಧುನಿಕತೆಯ ಸಂದರ್ಭದಲ್ಲಿ 'ಜ್ಞಾನವೆಂದರೆ ಮಾಹಿತಿ ಮಾತ್ರ, ಒಂದು ವಸ್ತುವಿನ ಬಗ್ಗೆ ಎಲ್ಲಾ ರೀತಿಯ ಮಾಹಿತಿಯನ್ನು ಪಡೆಯುವುದು ಮತ್ತು ಆ ಮಾಹಿತಿಯ ಮೂಲಕವೇ ವಸ್ತುವನ್ನು

ಪರಿವರ್ತನೆಗೆ ಒಳಪಡಿಸುವುದೇ ವಿಜ್ಞಾನ. ಈ ಮಾಹಿತಿಗೆ ಬುದ್ಧಿಯ ಇಚ್ಛಾಶಕ್ತಿ ಕೂಡಿ, ಕಸರತ್ತು ಮಾಡಿ ವಸ್ತುವಿನ ಮೂಲ ಸ್ವಭಾವವನ್ನೇ ನಿಯಂತ್ರಣಕ್ಕೆ ತೆಗೆದುಕೊಳ್ಳಲಾಗುತ್ತದೆ. ಆದ್ದರಿಂದ ಜ್ಞಾನಿ-ವಿಜ್ಞಾನಿಯೆಂದರೆ ಈ ಪ್ರಕ್ರಿಯೆಯಲ್ಲಿ ತೊಡಗಿರುವವನೇ ಆಗಿರುತ್ತಾನೆ. ಈ ಪ್ರಕ್ರಿಯೆಯೊಳಗೆ ಅಧಿಕಾರವೆನ್ನುವುದು ರೂಪುಗೊಳ್ಳುತ್ತದೆ ಎಂದು ವಿವರಿಸುತ್ತಾರೆ. ಹೀಗಾಗಿ ಅಧಿಕಾರ ಹಾಗೂ ಮಾಹಿತಿ ಪ್ರಧಾನ ವಿಜ್ಞಾನಗಳೆರಡೂ ಸೇರಿ **ಐಡಿಯಾಲಜಿ**ಯನ್ನು ನಿರ್ಮಿಸುತ್ತವೆ. ಆ ಮೂಲಕ ಮಾಹಿತಿಯನ್ನು ಅಧಿಕಾರಕ್ಕೆ ಪೂರಕವಾಗಿ ಕೇಂದ್ರೀಕರಣ ಮಾಡಲಾಗುತ್ತದೆ ಎಂದು ಸ್ಪಷ್ಟೀಕರಿಸುತ್ತಾರೆ. ಇಂಥ ಸಾಮಾಜಿಕ ಆವರಣದಲ್ಲಿ **ನಾವು** ಅಂದಾಗ ಭಾರತೀಯ ಪ್ರಜೆಗಳು, ನಾಗರೀಕರು ಎಂಬ ಗ್ರಹೀತ ಸಾಮಾನ್ಯವಾಗುತ್ತದೆ. ಇಂಥ ನೆಲೆಯಿಂದಲೆ ಕರ್ನಾಟಕ, ಕನ್ನಡ ಭಾಶೆ ನಮ್ಮದು ಎಂದೂ ಯೋಚಿಸುತ್ತಿರುತ್ತೇವೆ. ಯಾರು ಇವುಗಳನ್ನು ಒಪ್ಪಿಕೊಳ್ಳುತ್ತಾರೊ ಅವರೆ ಆ **ನಾವು** ಎಂದಾಗುತ್ತದೆ ಎಂದು **ಯಜಮಾನಿಕೆ**ಯ ಪ್ರಕ್ರಿಯೆಯನ್ನು ಅರ್ಥೈಸುತ್ತಾರೆ.

ಬುದ್ಧಿಜೀವಿಗಳು ಎಂಬ ಲೇಖನದಲ್ಲಿ ಗ್ರಾಂಶಿ ಬೌದ್ಧಿಕವಾಗಿ ಯಜಮಾನ್ಯ ಹೇಗೆ ರೂಪುಗೊಳ್ಳುತ್ತದೆ ಎಂಬುದನ್ನು ವಿವರಿಸುತ್ತಾನೆ. ಕೆ.ಫಣಿರಾಜ್ ದಾಖಲಿಸುವಂತೆ, ಎಲ್ಲ ಮನುಶ್ಯರೂ ಬುದ್ಧಿಜೀವಿಗಳೆ ಆದರೆ ಸಮಾಜದಲ್ಲಿ ಎಲ್ಲರೂ ಬುದ್ಧಿಜೀವಿಗಳ ಕಾರ್ಯ ನಿರ್ವಹಿಸುವುದಿಲ್ಲ ಎನ್ನುವ ಗ್ರಾಮ್ಷಿ 'ಬುದ್ಧಿಯೇ ಬಂಡವಾಳ ಆಗಿರುವಂತಹ ವೃತ್ತಿಯನ್ನು ನಿರ್ವಹಿಸುತ್ತಿರುವವರು ಸಮಾಜದಲ್ಲಿ ಬುದ್ಧಿಜೀವಿ ಎನಿಸಿಕೊಳ್ಳುತ್ತಾರೆ' ಎಂದು ವ್ಯಾಖ್ಯಾನಿಸುತ್ತಾನೆ. ಬುದ್ದಿಜೀವಿಗಳನ್ನು **ಜೀವಂತ ಬುದ್ಧಿಜೀವಿಗಳು** ಮತ್ತು **ಪರಂಪರಾನುಗತ ಬುದ್ಧಿಜೀವಿಗಳು** ಎಂದು ವಿಭಾಗಿಸಿಕೊಂಡು ವಿವರಿಸುತ್ತಾನೆ. ಗ್ರಾಮ್ಷಿಯ ಪ್ರಕಾರ ಜೀವಂತ ಬುದ್ಧಿಜೀವಿಗಳು ಎಂದರೆ, 'ಆರ್ಥಿಕ ಸ್ವರೂಪದ ಉತ್ಪಾದನಾ ಚಟುವಟಿಕೆಗಳ ಮೂಲನೆಲೆಯಿಂದ ಅಸ್ತಿತ್ವಕ್ಕೆ ಬರುವ ಪ್ರತಿಯೊಂದು ವರ್ಗವು ರಾಜಕೀಯ ಮತ್ತು ಸಾಮಾಜಿಕ ವಲಯಗಳಲ್ಲಿ ತನ್ನ ಪ್ರಭಾವವನ್ನು ರೂಢಿಸಲು,ಅದನ್ನು ಜಾಗೃತವಾಗಿಡಲು ಆ ಮೂಲಕ ತನ್ನ ವರ್ಗಕ್ಕೆ ಒಂದು ಸಾಮಾನ್ಯ ಸ್ವರೂಪ ದಕ್ಕಿಸಿಕೊಳ್ಳಲು ತನ್ನ ವರ್ಗದ ಜೀವತಂತುಗಳಿಂದಲೇ ರೂಪಿಸುವ ಹಲವಾರು ಸ್ಥರದ ಬುದ್ಧಿಜೀವಿಗಳು'(ಫಣಿರಾಜ್ ಕೆ. ೨೦೦೩) ಎಂದು ಅರ್ಥೈಸುತ್ತಾನೆ.

ಗ್ರಾಮ್ಷಿಯು, ಪುರೋಹಿತ ವರ್ಗವನ್ನು ಪರಂಪರಾನುಗತ ಬುದ್ದಿಜೀವಿಗಳು ಎಂದು ಕರೆಯುತ್ತಾನೆ; ಇಂದಿನವರೆಗಿನ ಚರಿತ್ರೆಯನ್ನು ಗಮನಿಸಿದರೆ, ಇವರು ಹಳೆಯ ಸಮಾಜದ ಅಸ್ತಿತ್ವದಲ್ಲಿದ್ದ ಆರ್ಥಿಕ ರಚನೆಯ ವಿಕಾಸದ ಫಲವಾಗಿ ಅವತರಿಸಿದವರು. ಹೊಸ ವರ್ಗದ ಸಮ್ಮುಖದಲ್ಲಿಯೂ ತಮ್ಮ ಹಳೆಯ ಸಾಮಾಜಿಕ ಸಂಬಂಧಗಳ ಫಲವಾದ ಅಸ್ತಿತ್ವವನ್ನು

ಉಳಿಸಿಕೊಂಡಿರುವವರು. ತಮ್ಮನ್ನು ರೂಪಿಸಿದ ಸಾಮಾಜಿಕ ಮತ್ತು ರಾಜಕೀಯ ಸಂಬಂಧಗಳು ಬೇರುಸಹಿತ ಬದಲಾಗಿದ್ದರೂ ತಮ್ಮ ಅಸ್ತಿತ್ವ ಮಾಸಿಹೋಗದಂತೆ ಕಾಪಾಡಿಕೊಂಡು ಬಂದಿರುವ ಚರಿತ್ರೆಯ ತಡೆಯಿಲ್ಲದ ಹರಿತದ ಪ್ರತಿನಿಧಿಗಳು ಎಂಬಂತೆ ಕಾಣಿಸಲ್ಪಡುವವರು. ಚರಿತ್ರೆಯ ಉದ್ದಕ್ಕೂ ಇವರು ನಿರ್ವಹಿಸುವ ಪಾತ್ರಗಳ ಗುಣ ಬದಲಾಗದೆ ಇರುವುದರಿಂದಾಗಿ ತಾವೇ ಸ್ವಯಂತಂತ್ರ ಸ್ವತಂತ್ರರು ಮತ್ತು ಪ್ರಬಲ ವರ್ಗಗಳ ಹಿಡಿತದ ಆಚೆಗಿರುವವರೆಂದು ಭಾವಿಸಿಕೊಂಡವರು. ಸ್ವಕಲ್ಪನೆಯ ವ್ಯಾಪಕವಾದ ರಾಜಕೀಯ ಮತ್ತು ಮತೀಯ ಪರಿಣಾಮಗಳುಳ್ಳವರು. ವಿಶಿಷ್ಟವಾದ ನಿರ್ಲಿಪ್ತ ಜ್ಞಾನದ ಅನುಗ್ರಹಕ್ಕೆ ಪಾತ್ರರಾದವರು, ಮೊದಲಾದ ವಿಪರೀತ ಆದರ್ಶಗಳ ಮೂಲಕ ಸಾಮಾಜಿಕ ಸ್ಥಾನಮಾನ ರೂಢಿಸಿಕೊಂಡವರು ಎಂದು ವ್ಯಾಖ್ಯಾನಿಸುತ್ತಾನೆ.

ಆಧುನಿಕವಾಗಿ ಭಾರತ ಪ್ರಜಾಪ್ರಭುತ್ವ ಮಾದರಿಯನ್ನು ಆಯ್ಕೆಮಾಡಿಕೊಂಡದ್ದರ ಹಿನ್ನೆಲೆಯಲ್ಲಿ ಸಂಸ್ಕೃತ ಪರಂಪರೆಯು ಜೀವಂತವಾಗಿ ಮತ್ತು ಪರಂಪರಾನುಗತವಾಗಿಯೂ ವಸಾಹತು ಸೃಷ್ಟಿಸಿದ ಜ್ಞಾನವನ್ನು ತನ್ನದನ್ನಾಗಿ ಮಾಡಿಕೊಳ್ಳುತ್ತದೆ ಎನ್ನುವುದನ್ನು, ತನ್ನ ಜಾತಿ/ಸಮುದಾಯದ ಸಂಪ್ರದಾಯದಿಂದ ಪ್ರವೃತ್ತವಾದ ಕುಲೀನ ಪ್ರಜ್ಞೆಯನ್ನು ಉದಾರವಾದಿ ಸೆಕ್ಯುಲರ್ ನೆಲೆಗಳಲ್ಲಿ ಜಾರಿಗೊಳಿಸುತ್ತಲೇ ಅಧಿಕಾರ ಸಂಬಂಧಗಳನ್ನು ಗಟ್ಟಿಗೊಳಿಸಿಕೊಳ್ಳುತ್ತಾ ಹೋಗುವುದನ್ನು ಈ ಹಿನ್ನೆಲೆಯಲ್ಲಿ ಪರಿಶೀಲಿಸಿಕೊಳ್ಳಬೇಕಾಗುತ್ತದೆ. ಕನ್ನಡ ಸಾಹಿತ್ಯದ ಬೇರು ಕಾಂಡ ಚಿಗುರು ಕುರಿತು ಚರ್ಚಿಸುತ್ತಾ ಕೆ.ವಿ.ನಾರಾಯಣ[೩೦] ಅವರು, ಪ್ರಜಾಪ್ರಭುತ್ವ ನಮ್ಮ ಚಿಂತನೆಯ, ಲೋಕಗ್ರಹಿಕೆಯ ಭಾಗವಾಗದಿರುವುದನ್ನು, ಆಶಯದ ನೆಲೆಯಲ್ಲಿ ಸರ್ವಸಮಾನತೆಯನ್ನು ಒಪ್ಪಿದ ನಾವು ಆಚರಣೆಯಲ್ಲಿ ಅದಕ್ಕಿಂತ ಭಿನ್ನವಾಗಿದ್ದನ್ನು, ನಮ್ಮ ಕಲೆ, ಸಾಹಿತ್ಯಗಳಂತೂ ಪ್ರಜಾಪ್ರಭುತ್ವವನ್ನು ಅರಗಿಸಿಕೊಳ್ಳದ್ದನ್ನು ವಿಶ್ಲೇಶಣೆಗೆ ಒಳಪಡಿಸುತ್ತಾರೆ. 'ಕನ್ನಡದ ಮಟ್ಟಿಗಂತೂ ಸಾಹಿತ್ಯ ಜಗತ್ತು ಉತ್ಕೃಶ್ಟತೆಯ ಆರಾಧನೆಯನ್ನು ಮಾಡತೊಡಗಿತ್ತು. ಶ್ರೇಶ್ಟವಾದದ್ದು ಮಾತ್ರ ಗೌರವಕ್ಕೆ ಅರ್ಹವಾದದ್ದು ಎಂಬ ತಿಳುವಳಿಕೆ ಗಾಢವಾಗಿತ್ತು' ಎನ್ನುತ್ತಾ, ಈ ಹಿನ್ನೆಲೆಯಲ್ಲಿ 'ಆಧುನಿಕ ಕನ್ನಡ ಸಾಹಿತ್ಯದ ಪ್ರಧಾನ ನೆಲೆಯಾಗಿ ಮಂಡಿತವಾಗುವ ಮಾನವತಾವಾದದ ಮೂಲಗಳನ್ನು ನಾವು ಪರಿಶೀಲಿಸಬೇಕೆನ್ನುತ್ತಾರೆ. ಈ ಕಾರಣವಾಗಿ ಶಿವರಾಮ ಕಾರಂತ, ಮಾಸ್ತಿಯವರ ಸಾಹಿತ್ಯವನ್ನು ಉದಾಹರಿಸುತ್ತ, ಇದನ್ನು ಪರಿಸರದಿಂದ ಅನ್ಯವಾದ ಮಾನವ ಜಗತ್ತನ್ನು ಅಧಿಕೃತವಾಗಿಸುವ ವಿಧಾನಗಳು ಎಂದು ಗುರುತಿಸುತ್ತಾರೆ. ಮನುಶ್ಯನ ಘನತೆಯನ್ನು ಎತ್ತಿ ಹಿಡಿಯುವ ಈ ಸಾಹಿತ್ಯದ ಹಿಂದಿರುವ ಮನುಶ್ಯನ ಪರಿಕಲ್ಪನೆ

ಜೀವಸಂಕುಲದ ಅಂಗವಾಗಿರುವ ಮಾನವನನ್ನು ಕುರಿತಿಲ್ಲ ಎಂದು ವಿಶಾದಿಸುವ ಕೆ.ವಿ.ಎನ್ 'ಅತ್ಯುನ್ನತ ಮೌಲ್ಯಗಳನ್ನು ಸಾಧಿಸಲು ಹವಣಿಸುತ್ತಿರುವ ಮಾನವನನ್ನು ಕುರಿತಿದೆ ಎಂದು ವಿಶ್ಲೇಶಿಸುತ್ತಾರೆ. ಅಂದರೆ ಕೆ.ವಿ.ಎನ್ ಇಲ್ಲಿ ಬಳಸುತ್ತಿರುವ ಪ್ರಜಾಪ್ರಭುತ್ವ, ಪರಿಸರ, ಜೀವಸಂಕುಲ ಮತ್ತು ಉತ್ಕೃಶ್ಟ, ಮಾನವಕೇಂದ್ರಿತ, ಅತ್ಯುನ್ನತಮೌಲ್ಯಗಳ ಬಾದಿತ ಸಂಬಂಧಗಳನ್ನು ವ್ಯಕ್ತಪಡಿಸುವ ಪದಗುಚ್ಚಗಳ ಮೂಲಕ ಅನಾವರಣಗೊಳಿಸುತ್ತಿರುವುದು ಸಂಸ್ಕೃತ ಪರಂಪರೆಯ ಮೂಲಕ ಆಧುನಿಕದಲ್ಲಿ ಕನ್ನಡ ಜಗತ್ತು ಕಟ್ಟಿಕೊಂಡ ಯಜಮಾನ್ಯ ಮೌಲ್ಯಗಳನ್ನೇ ಅಥವಾ ಸಂಸ್ಕೃತ ಪರಂಪರೆಯನ್ನು ಮೀರುವ ನೆಲೆಯಲ್ಲಿ ಉದಾರವಾದಿ ಸೆಕ್ಯುಲರ್ ಚಿಂತನೆಗಳ ಮೂಲಕವೂ ಕಟ್ಟಿಕೊಟ್ಟ ಯಜಮಾನಿಕೆಯನ್ನೆ[೩೧]. ಅವರೇ ಹೇಳುವಂತೆ 'ಪ್ರಜಾಪ್ರಭುತ್ವ ನಿರೀಕ್ಶಿಸುವುದು ಕೊಟ್ಟುಕೊಳ್ಳುವ ಮಾನವರನ್ನು, ಕಟ್ಟಿಕೊಳ್ಳುವ ಮಾನವರನ್ನಲ್ಲ'. ಈ ಹಿನ್ನೆಲೆಯಲ್ಲಿ ಪ್ರಾಚೀನ ಮತ್ತು ಆಧುನಿಕ ಕನ್ನಡ ಸಾಹಿತ್ಯ ಪಠ್ಯಕ್ರಮಗಳ(ಭಾಶೆ ಅಥವಾ ಸಾಹಿತ್ಯ ಅಧ್ಯಯನದ ಕ್ರಮದಲ್ಲಿ) ಮೂಲಕ ಸಂವಹನಗೊಳ್ಳುವ ಅಧಿಕಾರ ಪ್ರಕ್ರಿಯೆಯ ವರಸೆಗಳನ್ನು ಗ್ರಹಿಸಬೇಕಾಗುತ್ತದೆ. ಯಾಕೆಂದರೆ, ಯಾವಾಗಲೂ ಸಹ 'ಸಾಹಿತ್ಯ ಕೃತಿಗಳು ಭಾಶಿಕ ಸಮುದಾಯದ ಎಲ್ಲರನ್ನೂ ತಮ್ಮ ಸಂವಹನದ ಜಾಲದೊಳಕ್ಕೆ ತೆಗೆದುಕೊಳ್ಳುವುದಿಲ್ಲ. ಆದ್ದರಿಂದಾಗಿಯೆ **ಮಾತು** ಅನಧಿಕೃತವೆನಿಸಿ **ಬರೆಹ** ಹಕ್ಕಾಗುತ್ತದೆ. ಈ ಪರಿಸ್ಥಿತಿಯಿಂದಾಗಿ ಬರೆಹಗಳನ್ನು ಓದಲಾಗದ, ಅರಿಯಲಾಗದ ಸಮಾಜವನ್ನು ಊನಗೊಂಡ ಭಾಗ'(ಕೆ.ವಿ.ನಾರಾಯಣ ೧೯೯೭)ವೆಂದು ತಿಳಿಯಲಾಗುತ್ತದೆ. ಹೀಗಾಗಿ, ಸಂಪರ್ಕದ, ಸಂವಹನದ ಆಕರಗಳಾಗಿ ಶಿಕ್ಶಣದ ಭಾಗವಾದ ಪಠ್ಯಕ್ರಮಗಳನ್ನು ಬೋಧನೆ ಮತ್ತು ಕಲಿಕೆಯ ಸಂಬಂಧಗಳಲ್ಲಿ ಸ್ಥಿರೀಕರಿಸಲಾಗುತ್ತದೆ.

ಜಗತ್ತಿನ ಬೇರೆ ಬೇರೆ ಭಾಶೆಗಳ ನಡುವಿನ ಸಾಮ್ಯ ಮತ್ತು ವ್ಯತ್ಯಾಸಗಳನ್ನು ಕುರಿತು ಸುಮಾರು ನಲವತ್ತಕ್ಕೂ ಹೆಚ್ಚು ವರುಶಗಳ ಕಾಲ ಸಂಶೋಧನೆ ನಡೆಸಿರುವ ಡಿ.ಎನ್. ಶಂಕರಬಟ್ಟರು ಕನ್ನಡ ಭಾಶೆಯ ಕುರಿತ ಶಿಕ್ಶಣವನ್ನು ಆಧುನಿಕದಲ್ಲಿ ಹೇಗೆ ಕಟ್ಟಲಾಗಿದೆ ಎಂಬುದನ್ನು ಪರಿಶೀಲನೆಗೆ ಒಳಪಡಿಸುತ್ತಾರೆ. ಈ ಹಿನ್ನೆಲೆಯಲ್ಲಿ, ೧೯ ಮತ್ತು ೨೦ನೆಯ ಶತಮಾನದಲ್ಲಿ ಕಟ್ಟಲ್ಪಟ್ಟ ಕನ್ನಡ ಭಾಶೆಯ ಕಲಿಕೆಯನ್ನು ಕುರಿತ ಪಠ್ಯಗಳು ಕನ್ನಡದ ಸಂವಹನ ಸಾಧ್ಯತೆಗಳನ್ನು ವಿಸ್ತರಿಸುವ ಬದಲು ಸಂಕುಚಿತಗೊಳಿಸುತ್ತಿವೆ ಎಂಬುದನ್ನು ತಮ್ಮ ನಿರಂತರ ಸಂಶೋಧನೆಯ ಮೂಲಕ ತೋರಿಸಿಕೊಡುತ್ತಾರೆ. ಇದಕ್ಕಾಗಿ ಸಂಸ್ಕೃತ ಪರಂಪರೆಯ ಪಠ್ಯಗಳು ಹೇಗೆ ಯಜಮಾನ್ಯವನ್ನು ಸ್ಥಾಪಿಸಿವೆ ಮತ್ತು ಇದರಿಂದಾಗಿ ಆಧುನಿಕೋತ್ತರ ಸಂದರ್ಭವನ್ನು

ಭಾಶಿಕವಾಗಿ ಎದುರಿಸುವಲ್ಲಿ ತೊಡಕಿನದಾಗಿದೆ ಎಂಬುದನ್ನು ಸಂಸ್ಕೃತ ಮತ್ತು ಇಂಗ್ಲಿಶ್ ಭಾಶಾ ಪರಂಪರೆಯಿಂದ ಪ್ರವೃತ್ತವಾದ ಭಾಶೆ, ವ್ಯಾಕರಣ ಕುರಿತ ಆಧುನಿಕ ಸಂರಚನೆಗಳ ಸಮಸ್ಯೆಗಳನ್ನು ತೀವ್ರವಾಗಿ ಚರ್ಚೆಗೆ ತೆಗೆದುಕೊಳ್ಳುತ್ತಾರೆ. ಭಾಶೆಯ ಬಗೆಗೆ ನೀವೇನು ಬಲ್ಲಿರಿ, ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ, ನಿಜಕ್ಕೂ ಹಳಗನ್ನಡ ವ್ಯಾಕರಣ ಎಂತಹುದು, ಕನ್ನಡ ನುಡಿ ನಡೆದು ಬಂದ ದಾರಿ, ಕನ್ನಡ ಪದಗಳ ಒಳರಚನೆ, ಕನ್ನಡ ವಾಕ್ಯಗಳ ಒಳರಚನೆ, ಮಾತಿನ ಒಳಗುಟ್ಟು, ಕನ್ನಡದ್ದೇ ವ್ಯಾಕರಣ ಯಾಕೆ ಬೇಕು ಮೊದಲಾದ ಕೃತಿಗಳ ಮೂಲಕ ಕನ್ನಡವನ್ನು ಆಕ್ರಮಿಸಿರುವ ಸಂಸ್ಕೃತ ಭಾಶೆಯ ಪ್ರಾಬಲ್ಯವನ್ನು ಬಿಡಿಸಿ ಅನಾವರಣಗೊಳಿಸುತ್ತಾ ಹೋಗುತ್ತಾರೆ. ಇದು ಕೇವಲ ಸಂಸ್ಕೃತ ಭಾಶೆಯ ಸಂಪರ್ಕದಿಂದ ಮಾತ್ರವೇ ಆಗಿರದೆ ಆಧುನಿಕದಲ್ಲಿ ನೂರಕ್ಕೂ ಹೆಚ್ಚು ವರುಶಗಳ ಕಾಲ ಹೇಗೆ ಸಂಸ್ಕೃತ ಸಂಬಂಧಿಯಾಗಿ ಸಂಕಥಿಸಿಕೊಳ್ಳಲಾಗಿದೆ ಎಂಬುದನ್ನು ಬಿಡಿಸಿ ತಿಳಿಯುವ ಕ್ರಾಂತಿಕಾರಿ ಕೆಲಸವೂ ಇದಾಗಿ ಕಾಣುತ್ತದೆ. ಇದು ಕನ್ನಡ ಭಾಶೆಗೆ ತನ್ನದೇ ಆದ ಸಂಕಥನವನ್ನು ಆಧುನಿಕೋತ್ತರದ ಈ ಸಂದರ್ಭದಲ್ಲಿ ಕಟ್ಟಿಕೊಳ್ಳುವುದೂ, ಆ ಮೂಲಕ ಕನ್ನಡ ಜನಸಮುದಾಯದೊಂದಿಗೆ ನಡೆಯುವ ಕನ್ನಡ ಭಾಶೆಯ ನಡೆಯನ್ನು ವರ್ತಮಾನದೊಂದಿಗೆ ಗುರುತಿಸಿಕೊಳ್ಳುವುದೂ ಆಗಿ ಇದು ಮಹತ್ವವನ್ನು ಪಡೆದುಕೊಳ್ಳುತ್ತದೆ. ಆದ್ದರಿಂದಾಗಿ, ಪ್ರಸ್ತುತ ಅಧ್ಯಯನದಲ್ಲಿ ಪ್ರವೃತ್ತವಾಗಿರುವ ಸಂಸ್ಕೃತ ಪರಂಪರೆಯ ಯಜಮಾನಿಕೆ ಕುರಿತ ತಿಳುವಳಿಕೆಯನ್ನು ಸಮರ್ಥಿಸುತ್ತದೆ.

ಭಾಶೆಗಳ ವ್ಯಾಕರಣಗಳು ಹಲವಾರು ರೀತಿಯಲ್ಲಿ ಭಿನ್ನವಾಗಿರಲು ಸಾಧ್ಯ ಮತ್ತು ವ್ಯಾಕರಣದ ಮೂಲ ತತ್ವಗಳೂ ಇದಕ್ಕೆ ಹೊರತಲ್ಲ ಎಂಬ ಸ್ಪಶ್ಟ ನಿಲುವಿನಿಂದ ಶೋಧನೆಗೆ ತೊಡಗುವ ಶಂಕರಬಟ್ಟರು 'ಈ ತಿಳುವಳಿಕೆಯ ಆಧಾರದ ಮೇಲೆ ಕನ್ನಡ ವ್ಯಾಕರಣ ಕುರಿತಾಗಿ ಅದುವರೆಗೆ ಪ್ರಕಟವಾಗಿದ್ದ ಗ್ರಂಥಗಳನ್ನು ಮತ್ತು ಲೇಖನಗಳನ್ನು ಪರಿಶೀಲಿಸಿದಾಗ ಅವು ನಿಜಕ್ಕೂ ಕನ್ನಡ ವ್ಯಾಕರಣ ಎಂಥಹುದು ಎಂಬುದನ್ನು ವಿವರಿಸುವಲ್ಲಿ ದಾರಿ ತಪ್ಪಿವೆ ಎಂಬುದು ನನ್ನ ಗಮನಕ್ಕೆ ಬಂತು. ಇದಲ್ಲದೆ, ಹೀಗೆ ದಾರಿ ತಪ್ಪಿರುವಲ್ಲೆಲ್ಲ ಅವುಗಳ ಮೇಲೆ ಸಂಸ್ಕೃತ ವ್ಯಾಕರಣಕ್ಕಿದ್ದ ಪ್ರಭಾವವೇ ಮುಖ್ಯ ಕಾರಣ' ಎಂದು ಭಾಶಿಕ ನೆಲೆಯಲ್ಲಿ(ಶಂಕರ ಬಟ್ಟ ಡಿ.ಎನ್ ೨೦೦೬) ವಿವರಿಸುತ್ತಾರೆ. ಬಳಕೆಯಲ್ಲಿರುವ ಕನ್ನಡ ವ್ಯಾಕರಣ ಪಠ್ಯಗಳು ಮತ್ತು ಅವಕ್ಕೆ ಆಕರಗಳಾಗಿರುವ ವ್ಯಾಕರಣ ಗ್ರಂಥಗಳು ಕನ್ನಡ ವ್ಯಾಕರಣವನ್ನು ನೇರವಾಗಿ ವಿವರಿಸುವ ಬದಲು ಸಂಸ್ಕೃತ ವ್ಯಾಕರಣ ನಿಯಮಗಳನ್ನು ಕನ್ನಡಕ್ಕೆ ಅಳವಡಿಸಲು ಪ್ರಯತ್ನಿಸಿರುವುದನ್ನು, ಕನ್ನಡದ ವ್ಯಾಕರಣವನ್ನು ತಪ್ಪು ತಪ್ಪಾಗಿ ಚಿತ್ರಿಸುವುದನ್ನು ಗುರುತಿಸುತ್ತಾ 'ಇದರಿಂದಾಗಿ ಅವನ್ನು

ಕಲಿಯುವುದು ಮತ್ತು ಕಲಿಸುವುದು ಬಹಳ ಕಷ್ಟ' ಎಂದು ಅಭಿಪ್ರಾಯ ಪಡುತ್ತಾರೆ. ಆದ್ದರಿಂದಾಗಿ **ಕನ್ನಡದ ಬರಹ ಬರಿಯ ಮೇಲ್ವರ್ಗದವರ ಸೊತ್ತಾಗಿ ಉಳಿಯದೆ ಎಲ್ಲರ ಸೊತ್ತಾಗುವ ಹಾಗೆ ಮಾಡಲು** ಪ್ರಾಯೋಗಿಕವಾಗಿ ಏನು ಮಾಡಬೇಕಾಗಿದೆ ಎಂಬುದರತ್ತ ತೊಡಗಿಕೊಳ್ಳುತ್ತಾರೆ. ಕನ್ನಡದಲ್ಲಿ ಹೊಸ ಪದಗಳನ್ನು ತಯಾರಿಸಬೇಕಾದಾಗಲೆಲ್ಲ ಸಂಸ್ಕೃತ ಪದಗಳ ಮೊರೆಹೋಗುವ ಪ್ರವೃತ್ತಿಯನ್ನು, ಇದಲ್ಲದೆ ಅವಶ್ಯವಿಲ್ಲದಲ್ಲೂ ಸಂಸ್ಕೃತ ಪದಗಳನ್ನು ಬಳಸುವುದರ ಮೂಲಕ ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸುವ ಪ್ರವೃತ್ತಿಯನ್ನು ಪ್ರಸ್ತಾಪಿಸುತ್ತ, **ಕನ್ನಡ ಬರಹ ಕೃತಕವಾಗುತ್ತಿದೆ ಮತ್ತು ಸಾಮಾನ್ಯ ಜನರಿಂದ ದೂರವಾಗುತ್ತಿದೆ** ಎನ್ನುತ್ತಾರೆ. ಇಲ್ಲಿಯವರೆಗಿನ ಚರ್ಚೆಯ ಹಿನ್ನೆಲೆಯಲ್ಲಿ ಇದನ್ನು ಗಮನಿಸಿಕೊಂಡಾಗ, ವಸಾಹತು ಪ್ರಜ್ಞೆಯ ಮೂಲಕ ಸಂಸ್ಕೃತ ಪರಂಪರೆಯನ್ನು ಅಧಿಕೃತವಾಗಿಸುವುದರಲ್ಲಿನ (ಡಾ. ಚಂದ್ರಶೇಖರ್ ಹೇಳುವಂತೆ ಇವೆರಡರ ಕಲಸುಮೇಲೋಗರದಿಂದ) ಭಾಶಿಕವಾದ ತೊಡಕುಗಳು ಬೇರೊಂದು ಬಗೆಯಲ್ಲಿ ಅನಾವರಣಗೊಳ್ಳತೊಡಗುತ್ತವೆ. ಶಂಕರ ಬಟ್ ಮೂರು ನೆಲೆಯಲ್ಲಿ ಇದನ್ನು ಗುರುತಿಸಿಕೊಳ್ಳುತ್ತಾರೆ. ಒಂದು: ಸಂಸ್ಕೃತದ ವ್ಯಾಕರಣ ಪರಂಪರೆಯಲ್ಲಿ ತಯಾರಾಗಿರುವ ಕೇಶಿರಾಜನ ಶಬ್ದಮಣಿದರ್ಪಣ, ಭಟ್ಟಾಕಳಂಕನ ಶಬ್ದಾನುಶಾಸನಗಳ ಮೂಲಕ ಪ್ರವೃತ್ತವಾಗಿ ಶಾಲಾ ಕಾಲೇಜುಗಳಲ್ಲಿ ಪಠ್ಯವಾಗಿ ಬಳಕೆಯಾಗುತ್ತಿರುವ ಹಳಗನ್ನಡ ವ್ಯಾಕರಣಗಳು. ಎರಡು: ಹತ್ತೊಂಬತ್ತನೆ ಶತಮಾನದಿಂದೀಚೆಗೆ ಮುಖ್ಯವಾಗಿ ಕ್ರಿಶ್ಚಿಯನ್ ಮಿಶನರಿಗಳು ಯೂರೋಪಿನ ವ್ಯಾಕರಣ ಪರಂಪರೆಯಲ್ಲಿ ರಚಿಸಲಾದ ಇಂಗ್ಲೀಶ್‌ನಲ್ಲಿ ಬರೆದಿರುವ ಹೊಸಗನ್ನಡ ವ್ಯಾಕರಣಗಳು. ಮೂರು: ಆಧುನಿಕ ಭಾಶಾವಿಜ್ಞಾನಿಗಳು ಅಮೆರಿಕದ ಇಂಗ್ಲಿಶ್ ವ್ಯಾಕರಣ ಪರಂಪರೆಯಲ್ಲಿ ತಯಾರಿಸಲಾದ ವ್ಯಾಕರಣ ಗ್ರಂಥಗಳು. ಅಂದರೆ, ಈ ಮೂಲಕ ಇವು ಬೇರಾವುದೊ ಒಂದು ಭಾಶೆಯ–ಸಂಸ್ಕೃತ, ಲ್ಯಾಟಿನ್ ಇಲ್ಲವೆ ಇಂಗ್ಲಿಶ್–ವ್ಯಾಕರಣ ಪರಂಪರೆಯನ್ನು ಅನುಸರಿಸಲು ಪ್ರಯತ್ನಿಸಿವೆ. ಇದರಿಂದಾಗಿ ಕನ್ನಡಕ್ಕೆ ಅದರದೇ ಆದ ಒಂದು ವ್ಯಾಕರಣ ಪರಂಪರೆಯನ್ನು ಬೆಳೆಸಿಕೊಡಲು ಪ್ರಯತ್ನಿಸಿಲ್ಲ ಎಂಬುದನ್ನು ವಿಶ್ಲೇಶಿಸುತ್ತಾರೆ. ಇದಕ್ಕೆ ಉದಾಹರಣೆಯಾಗಿ ೧೯೧೮ರಲ್ಲಿ ಸಾಹಿತ್ಯ ಪರಿಶತ್ಪತ್ರಿಕೆಯಲ್ಲಿ  ಮಾತನಾಡುವ ಭಾಶೆಗೆ ವ್ಯಾಕರಣವನ್ನು ಹೇಗೆ ರಚಿಸಬೇಕು ಎಂಬುದನ್ನು ಬರೆಯುತ್ತ ನಾ. ಶ್ರೀ. ರಾಜಪುರೋಹಿತ[೩೩] ಹೇಳಿರುವ ಮಾತುಗಳನ್ನು ಗಮನಿಸಬಹುದಾಗಿದೆ. ಈ ಮಾತುಗಳ ಆ ಸಂದರ್ಭದ ಇಂಥ ಗೊಂದಲವನ್ನು ಸ್ಪಶ್ಟವಾಗಿ ನಿರೂಪಿಸುತ್ತವೆ. 'ವ್ಯಾಕರಣವನ್ನು ರಚಿಸುವಾಗ್ಗೆ ತುಲನಾಪದ್ಧತಿಯನ್ನು ಸ್ವೀಕರಿಸಬೇಕು. ಅದೇನೆಂದರೆ ಕನ್ನಡಕ್ಕೂ ಇಂಗ್ಲೀಶ ಮುಂತಾದ ಪಾಶ್ಚಾತ್ಯಭಾಶೆಗಳಿಗೂ ರಚನಾಬೇದವಿದ್ದರೂ,

ಭಾಶೆಯ ಪ್ರಗತಿಯ ತತ್ವಗಳು ಎಲ್ಲಾ ಭಾಶೆಗಳಿಗೂ ಸರಿಯಾಗಿ ಅನ್ವಯಿಸುತ್ತವೆ. ಆದುದರಿಂದ ಕನ್ನಡ ಭಾಶೆಯ ವ್ಯಾಕರಣಕ್ಕೂ ಅರ್ವಾಚೀನಕಾಲದಲ್ಲಿ ಅತ್ಯಂತ ಪ್ರಗತಿಯನ್ನು ಹೊಂದಿದ ಇಂಗ್ಲಿಶ, ಫ್ರೆಂಚ, ಜರ್ಮನ್ನಭಾಶೆಗಳ ವ್ಯಾಕರಣಕ್ಕೂ ತುಲನೆಯನ್ನು ಮಾಡಿ, ನಮ್ಮ ಭಾಶೆಯ ವ್ಯಾಕರಣದಲ್ಲಿ ಯಾವ ಕುಂದು ಕೊರತೆಗಳಿರುತ್ತವೆಂಬುದನ್ನು ಶೋಧಿಸಿ ಅವುಗಳನ್ನು ಸುಧಾರಿಸಬೇಕು' ಎನ್ನುತ್ತಾರೆ. ಈ ಕಾರಣವಾಗಿ ಪಠ್ಯಪುಸ್ತಕಗಳಲ್ಲಿ ಭಾಶೆಯನ್ನು ಏಕೀಕೃತಗೊಳಿಸುವುದರ ಬಗ್ಗೆ ಪ್ರಸ್ತಾಪಿಸುತ್ತಾ; ಮೈಸೂರು, ಮುಂಬಯಿ, ಮದ್ರಾಸ ಸರಕಾರದವರು, **ತಮ್ಮ ತಮ್ಮ ಕನ್ನಡನಾಡು**ಗಳಲ್ಲಿ ಪ್ರಾಥಮಿಕ ಶಿಕ್ಷಣದ ಪುಸ್ತಕಗಳನ್ನು ಬೇರೆ ಬೇರೆಯಾಗಿ ರಚಿಸಿಕೊಂಡಿದ್ದರ ಕುರಿತು 'ಈ ಪದ್ಧತಿಯು ಕನ್ನಡ ಭಾಶೆಯ ಏಕೀಕರಣಕ್ಕೆ ಶತ್ರುವಾಗಿದೆ' ಎನ್ನುತ್ತಾರೆ. ಇದನ್ನು 'ಸಮೂಲವಾಗಿ ನಾಶಮಾಡುವ' ಕುರಿತು ಮಾತನಾಡುತ್ತಾರೆ. ಕರ್ನಾಟಕ ಸಾಹಿತ್ಯ ಪರಿಶತ್ತಿನವರು ಈ ವಿಶಯವಾಗಿ ಪ್ರಯತ್ನ ಮಾಡುವುದು ಅವರ ಆದ್ಯ ಕರ್ತವ್ಯ ಎಂದು ರಾಜಪುರೋಹಿತ ಆಗ್ರಹಿಸುತ್ತಾರೆ. ಮುಂದುವರಿದು, 'ಭಾಶೆಯೊಂದು ಮಹಾನದಿಯಾಗಿದೆ. ಇದರ ಪ್ರವಾಹವು ವೇಗದಿಂದಲೂ ಅತ್ಯಂತ ಉಚ್ಛೃಂಕಲ ವೃತ್ತಿಯಿಂದಲು ಹರಿಯುತ್ತಿರುತ್ತದೆ. ಆದುದರಿಂದ ಅದಕ್ಕೆ ಸೇತುವೆಯನ್ನು ಕಟ್ಟಬೇಕಾದರೆ, ಅದರ ಸ್ವೇಚ್ಚಾವೃತ್ತಿಗೆ ಪ್ರತಿಬಂಧಕವಾದಂತೆ ಪ್ರಚುರವಾಗಿರುವ ಕನ್ನಡ ಭಾಶೆಗೆ ಉದಾರ ದೃಶ್ಟಿಯಿಂದ ವ್ಯಾಕರಣವನ್ನು ರಚಿಸಬೇಕು. ಒಳ್ಳೇ ಜಾಣತನದಿಂದ ತಯಾರಮಾಡತಕ್ಕದ್ದು. ಇಲ್ಲದಿದ್ದರೆ ಆ ಸೇತುವೆಯು ಎಂದಾದರೂ ಒಂದುದಿನ ಕೊಚ್ಚಿಕೊಂಡು ಹೋಗುವುದೇ ಸರಿ' ಎಂದು ಎಚ್ಚರಿಸುತ್ತಾರೆ.

ಹೊಸಗನ್ನಡ ಭಾಶೆಯನ್ನು ಸರಿಯಾಗಿ ಬಳಸಬಲ್ಲವರು ಹಳಗನ್ನಡ ಭಾಶೆಯನ್ನಾಗಲಿ ಇಲ್ಲವೆ ಸಂಸ್ಕೃತ, ಇಂಗ್ಲಿಶ್ ಭಾಶೆಗಳನ್ನಾಗಲಿ ಅವನ್ನು ಪ್ರತ್ಯೇಕವಾಗಿ ಕಲಿಯದೆ ಬಳಸಲಾರರು. ಇದೇ ರೀತಿಯಲ್ಲಿ ಸಂಸ್ಕೃತ, ಇಂಗ್ಲಿಶ್ ಮೊದಲಾದ ಭಾಶೆಗಳನ್ನು ಬಳಸಬಲ್ಲವರು ಪ್ರತ್ಯೇಕವಾಗಿ ಕಲಿಯದೆ ಹೊಸಗನ್ನಡ ಭಾಶೆಯನ್ನು ಬಳಸಲಾರರು ಇಲ್ಲವೆ ಅರ್ಥಮಾಡಿಕೊಳ್ಳಲಾರರು ಎನ್ನುವ ಕನ್ನಡ ನುಡಿ ನಿಪುಣರಾದ ಶಂಕರಭಟ್ಟರ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಕರ್ನಾಟಕ ಏಕೀಕರಣ ಮತ್ತು ಕನ್ನಡ ಭಾಶೆಯ ಏಕೀಕರಣಗಳೊಳಗೇ ಅಡಗಿದ್ದ ಸಮಸ್ಯೆಗಳನ್ನು, ಸಂಸ್ಕೃತ ಪರಂಪರೆಯ ವೈಭವೀಕರಣದಿಂದಾದ ಸಮಸ್ಯೆಗಳನ್ನು ಗಮನಿಸಿಕೊಳ್ಳಬೇಕಾಗುತ್ತದೆ. ಕನ್ನಡ, ತಮಿಳು, ತೆಲುಗು ಮೊದಲಾದ ದ್ರಾವಿಡ ಭಾಶಾ ಕುಟುಂಬಕ್ಕೆ ಸೇರಿರುವ ಭಾಶೆಗಳು ಸಂಸ್ಕೃತಕ್ಕಿಂತ ತೀರ ಭಿನ್ನವಾಗಿರುವ ಭಾಶೆಗಳು. ಅವುಗಳ ವ್ಯಾಕರಣ ನಿಯಮಗಳು ಸಂಸ್ಕೃತದ ವ್ಯಾಕರಣ ನಿಯಮಗಳಿಗಿಂತ ತೀರ ಭಿನ್ನವಾದವುಗಳು ಎನ್ನುವ ಶಂಕರಬಟ್ ಸಂಸ್ಕೃತಕ್ಕೂ ಅವಕ್ಕೂ

ನಡುವಿರುವ ಸಂಬಂಧವನ್ನು **ದೇವಸ್ಥಾನಕ್ಕೂ ಮತ್ತು ಊರಿನ ಬೇರೆಯೇ ಒಂದು ದಿಕ್ಕಿನಲ್ಲಿರುವ ಮನೆಗಳಿಗೂ ನಡುವಿರುವ ಸಂಬಂಧದ ಹಾಗೆ** ಎಂದು ಅವುಗಳ ನಡುವಿರುವ ಅಧಿಕಾರ ಸಂಬಂಧಗಳನ್ನು ದಾಖಲಿಸುತ್ತಾರೆ.

ಬೋಧನೆ ಮತ್ತು ಮೌಲ್ಯಮಾಪನ ಎನ್ನುವ ಎರಡು ಅಧಿಕಾರ ಬಿಂದುಗಳ ನಡುವಿನ ಆವರಣದಲ್ಲಿ ಕಲಿಕಾರ್ಥಿಯನ್ನು ಪರಿಕಲ್ಪಿಸಿಕೊಳ್ಳಲಾಗುತ್ತದೆ. ಇಲ್ಲಿ ನಡೆಯುವ ಪಠ್ಯ ಕೇಂದ್ರಿತ ಚಟುವಟಿಕೆಯನ್ನು ಕಲಿಕೆ ಎಂದು ಔಪಚಾರಿಕ ಶಿಕ್ಷಣದ ಸಂದರ್ಭದಲ್ಲಿ ಭಾವಿಸಲಾಗುತ್ತದೆ. ಪಠ್ಯದಲ್ಲಿರುವುದನ್ನೇ ಕಲಿಸಲಾಗುತ್ತದೆ ಮತ್ತು ಅದನ್ನೇ ಕಲಿಯಬೇಕು ಎಂಬುದು ನಾಗರಿಕ ಸಮಾಜದ[೩೪] ವ್ಯಕ್ತಿಯನ್ನು ನಿರ್ಧರಿಸುವ ಪ್ರಶ್ನಾತೀತ ಮಾನದಂಡವಾಗಿ ಚಾಲನೆಗೊಳ್ಳುತ್ತದೆ. ಅಂದರೆ ಇಲ್ಲಿ ಕಲಿಕೆ ಎಂದರೆ **ನೆನಪು**. ಕಲಿಕಾರ್ಥಿಯ **ನೆನಪಿನ ಸಾಮರ್ಥ್ಯ** ಅಥವಾ **ಪ್ರತಿಭೆ** ಎಂದಾಗುತ್ತದೆ. ಆದ್ದರಿಂದ, ಪಠ್ಯಪುಸ್ತಕದಲ್ಲಿರುವ ಅಂಶಗಳಲ್ಲಿ ಕಲಿಕಾರ್ಥಿಯ ನೆನಪು ಎಷ್ಟನ್ನು ಕೂಡಿಟ್ಟುಕೊಂಡಿದೆ ಎಂಬುದಷ್ಟೆ **ಮೌಲ್ಯಮಾಪನ**ವಾಗಿ ಪರಿಗಣಿಸಲ್ಪಡುವುದರಿಂದ ಇದೊಂದು ಗುಪ್ತವಾಗಿ ಗರ್ಭಗುಡಿಯಲ್ಲಿ ಪರದೆಯ ಹಿಂದೆ ನಡೆಯುವ ಧಾರ್ಮಿಕ ಚಟುವಟಿಕೆಯಂತಿದ್ದು, ಇದರಲ್ಲಿ ಭಾಗಿಯಾಗುವ ಬೋಧಕ ವರ್ಗ ಕಲಿಕಾರ್ಥಿಗಳೊಂದಿಗೆ ದೇವಮಾನವರಂತೆ ವರ್ತಿಸುತ್ತ ಈಗಾಗಲೆ ಬೋಧನೆಯ ಮೂಲಕ ಪ್ರವೃತ್ತವಾಗಿದ್ದ ತನ್ನ ಯಜಮಾನಿಕೆಯನ್ನು ಬಲಪಡಿಸಿಕೊಳ್ಳುವುದಾಗುತ್ತದೆ. ಇದು ಕಲಿಕಾರ್ಥಿಗಳನ್ನು, ತಮ್ಮನ್ನು ಓಲೈಸುವ ಗುಲಾಮರನ್ನಾಗಿಸುವಲ್ಲಿ ಸಂಭ್ರಮಿಸುತ್ತದೆ. ಹೀಗಾಗಿ ನಿರ್ದಿಷ್ಟ ಪಠ್ಯವನ್ನು ಮೂಲ ಮಾಡಿಕೊಂಡ ಬೋಧನೆ ಮತ್ತು ಮೌಲ್ಯಮಾಪನ ಚಟುವಟಿಕೆಗಳು ಬೋಧಕರಿಗೆ ವೈಯುಕ್ತಿಕವಾದ ಅವಕಾಶ(ಪರ್ಸನಲ್ ಸ್ಪೇಸ್-ಇದನ್ನು ತಮಗಿರುವ ಬೊಧನಾಧಿಕಾರದ ಮೂಲಕ ಚಾಲನೆಗೆ ತರುತ್ತಾರೆ)ವನ್ನು ಸೃಷ್ಟಿಸಿಕೊಡುವುದರಿಂದ ಸಾಮಾಜಿಕವಾಗಿ ಒದಗಿಬರುವ ಅಧಿಕಾರದೊಂದಿಗೆ, ಆಚಾರ್ಯ ದೇವೋಭವ ಮತ್ತು ಗುರುದೇವೋ ಮಹೇಶ್ವರಃ ಆಗಿ ದೈವೀ ಅಧಿಕಾರವನ್ನೂ ಪಡೆದವರಾಗಿಬಿಡುತ್ತಾರೆ. ಗುಸ್ತೆವೊ ಎಸ್ತೆವಾ ಮತ್ತು ಮಧು ಎಸ್ ಪ್ರಕಾಶ್[೩೫], ಹೇಳುವಂತೆ 'ಸಮಾನತೆ ಮತ್ತು ನ್ಯಾಯಗಳ ಹೆಸರಿನಲ್ಲಿ ಎಲ್ಲ ಕಡೆಗಳಲ್ಲೂ ಶಿಕ್ಷಣವನ್ನು ಪ್ರೋತ್ಸಾಹಿಸಲಾಗುತ್ತದೆ. ಶಿಕ್ಷಣವೆಂಬುದು ಆಧುನಿಕ ಸಮಾಜದ ಧಮನಕಾರಿ ಅಸಮಾನತೆಗಳಿಗೆಲ್ಲ ಮದ್ದು ಎಂಬಂತೆಯೂ ಅದನ್ನು ಬಿಂಬಿಸಲಾಗುತ್ತದೆ. ಆದರೆ ಶಿಕ್ಷಣದ ಪರಿಣಾಮ ಮಾತ್ರ ಅದಕ್ಕೆ ತದ್ವಿರುದ್ಧ'ವಾಗಿಯೇ ಇರುತ್ತದೆ. ಇಲ್ಲಿ, ಯಾಕೆ, ಏನು, ಹೇಗೆ ಎಂಬ ಪ್ರಶ್ನೆಗಳು ತೀರಾ ಇಲ್ಲವಾಗಿ, ಮೌಲ್ಯಮಾಪನದ ಹೆಸರಿನಲ್ಲಿ ತಳೆಯುವ ನಿರ್ಧಾರವು ಕಲಿಕಾರ್ಥಿಯ

ಸಾಮರ್ಥ್ಯವಾಗಿ ಸಾಭೀತು ಮಾಡಲ್ಪಡುತ್ತದೆ. ಇದನ್ನೇ ಸಾರ್ವಜನಿಕವಾಗಿ ಪ್ರಕಟಿಸುವುದರ ಮೂಲಕ ವ್ಯಕ್ತಿ(ಕಲಿಕಾರ್ಥಿ)ಯನ್ನು ಸಾಮಾಜಿಕ ಸ್ಥಾನಗಳಲ್ಲಿ ನಿಲ್ಲಿಸಿ ಇದೇ ಈ **ವ್ಯಕ್ತಿ**(ಕಲಿಕಾರ್ಥಿ)**ಯ ಪ್ರತಿಭೆ** ಎಂದು ಸಾಮಾಜೀಕರಿಸಿ ಅವಮಾನಿಸಲಾಗುತ್ತದೆ. ಈ ಹಿನ್ನೆಲೆಯಲ್ಲಿ, ಕಲಿಕಾರ್ಥಿಯ ಸಾಮರ್ಥ್ಯಕ್ಕೆ ಸಂಬಂಧಿಸಿದಂತೆ ನಡೆಯುವ ಈ ಚಟುವಟಿಕೆಯ ಸಾಮಾಜಿಕ ಬದ್ಧತೆ, ಕಲಿಕಾರ್ಥಿಯ ಸಾಮರ್ಥ್ಯವನ್ನು ನಿರ್ಧರಿಸುವ ಮೌಲ್ಯಮಾಪಕರ ಸಾಮರ್ಥ್ಯಗಳ ಮಾನದಂಡ, ಈ ಕಾರಣವಾಗಿ ಅತ್ಯಂತ ಕನಿಶ್ಟ ಅವಧಿಯಲ್ಲಿ ನಡೆಸಲಾಗುವ ಪರೀಕ್ಶೆಯ ಹಿಂದಿನ ಕಾಳಜಿ ಎಲ್ಲವೂ ಪ್ರಶ್ನೆಗೆ ಒಳಪಡುತ್ತವೆ. ಆದರೆ ಈ ಪ್ರಶ್ನೆಗಳನ್ನು ಗರ್ಭಗುಡಿಯ ಕತ್ತಲೆಯಲ್ಲಿಯೇ ಇಟ್ಟು ಈ ವಿದ್ಯಮಾನಗಳಲ್ಲಿ ತಾನೇ ಪ್ರವೃತ್ತವಾಗುವ ಯಜಮಾನಿಕೆಯನ್ನು ಮಾತ್ರ ಜತನದಿಂದ ಕಾಪಾಡಿಕೊಳ್ಳಲಾಗುತ್ತದೆ.

ಈ ಹಿನ್ನೆಲೆಯಲ್ಲಿ ಮುಂದಿನ ಅಧ್ಯಾಯದಲ್ಲಿ ಪಠ್ಯಕ್ರಮಗಳ ಮಾಹಿತಿಯನ್ನು ಗಮನಿಸಿಕೊಂಡು ಶಿಕ್ಶಣದ ಸಾಮಾಜಿಕರಣದ ಮೂಲಕವೇ ಜಾರಿಗೊಳಿಸಲಾಗಿರುವ ಸಾಮಾಜಿಕ ಪ್ರತಿನಿಧೀಕರಣವನ್ನು ಮತ್ತು ಆ ಮೂಲಕ ಪ್ರವೃತ್ತಗೊಂಡಿರುವ ಯಜಮಾನಿಕೆಯನ್ನು ಶೋಧಿಸಿಕೊಳ್ಳಲಾಗುತ್ತದೆ.

**ಅಡಿ ಟಿಪ್ಪಣಿಗಳು**

---

೧. ಕಲಿಯುವುದು ಎಂಬ ಕ್ರಿಯಾರೂಪವು ತಮ್ಮೊಳಗೇ ಇರುವ ಸಾಮರ್ಥ್ಯವೊಂದರ ಆವಿಶ್ಕಾರ; ಅದು ಪರರೊಂದಿಗೂ, ನಿಸರ್ಗದೊಂದಿಗೂ ಇಟ್ಟುಕೊಂಡು ಮುನ್ನಡೆಯುವ ಒಂದು ಕ್ರಿಯಾಶೀಲ ಸಂಬಂಧ. ಅಂದರೆ, ಕಲಿಯುವುದೆಂಬ ಪ್ರಕ್ರಿಯೆಯು ವೈಯುಕ್ತಿಕವಾದ ಒಂದು ಕೆಲಸ ಮತ್ತು ಹಾಗೆ ಕಲಿಯುವುದಕ್ಕೂ ಮತ್ತು ಆ ಮೂಲಕ ಬದುಕುವ ಕ್ಶಮತೆಯನ್ನು ವರ್ಧಿಸಿಕೊಳ್ಳಲಿಕ್ಕೂ ಇರುವ ಮಾರ್ಗ ಒಂದೇ–ಅದು ಜಗತ್ತಿನಿಂದ ಕಲಿಯುವುದು, ಜಗತ್ತಿನ ಬಗ್ಗೆ ಕಲಿಯುವುದಲ್ಲ–ಇದು ಬಹುಸಂಖ್ಯೆಯ ಜನರಿಗೀಗ ಅರಿವಾಗಹತ್ತಿದೆ.(ಆಶೀಸ್ ನಂದಿ ಮತ್ತು ವಿನಯ ಲಾಲ್ ೨೦೦೭)

೨. ಶಿಕ್ಶಣ ವ್ಯವಸ್ಥೆಯ ಕಥನವು ಬಂಡವಾಳದ ಬೆಳವಣಿಗೆಯ ಕಥನಕ್ಕೆ ಹೋಲುವಂಥದು. ಒಮ್ಮೆ ಪ್ರಭುತ್ವದ ಹತೋಟಿಗೆ ಒಳಪಟ್ಟದ್ದೇ ಬಂಡವಾಳವು ಹೇಗೆ ಒತ್ತಾಯದಿಂದ ಸಂಗ್ರಹಿಸಲ್ಪಟ್ಟಿತೋ ಹಾಗೆಯೇ ಶಿಕ್ಶಣವನ್ನೂ ಪ್ರಭುತ್ವವು ತನ್ನ ಹತೋಟಿಗೆ ತೆಗೆದುಕೊಂಡಿತು. ಬಂಡವಾಳದ ರಕ್ಶಣೆಗೆ ಅರಕ್ಶಕ ಮತ್ತು ಸೇನಾವ್ಯವಸ್ಥೆಗಳು ಹೇಗೆ ಕೈಜೋಡಿಸಿದವೋ ಹಾಗೇ, ಶಿಕ್ಶಣದ ಮೂಲಕ ಸಮಾಜವನ್ನು ನಿಯಂತ್ರಿಸಲಿಕ್ಕೂ ಇವತ್ತು ಅರಕ್ಶಕ–ಸೇನಾ ವ್ಯವಸ್ಥೆಗಳು ಸಹಾಯ ಮಾಡುತ್ತಿವೆ. ಈ ಪ್ರಕ್ರಿಯೆಯಲ್ಲಿ ಬಂಡವಾಳಕ್ಕಿಂತ ಭಿನ್ನವಾಗಿ, ಶಿಕ್ಶಣವಾದರೋ ಅದೊಂದು ವೈಯುಕ್ತಿಕ ಮತ್ತು ಸಾಮುದಾಯಿಕ ಎಂಬ ನಂಬಿಕೆಯು ರೂಢಿಗತವಾಗಿದೆ. ಕ್ರಮೇಣ, ಇನ್ನುಳಿದ ಹಲವು ಅಗತ್ಯಗಳು

ಹಕ್ಕುಗಳಾಗಿ ಮಾರ್ಪಾಡುಗೊಂಡಂತೆಯೇ ಇಂದು ಶಿಕ್ಷಣವೂ ಒಂದು ಹಕ್ಕಾಗಿ ಮಾರ್ಪಟ್ಟಿದೆ. ಶಿಕ್ಷಣವೆಂಬುದು ಇವತ್ತು ಅಧಿಕಾರಶಾಹಿಯ ಒತ್ತಾಯದಿಂದ ಹೇರಲ್ಪಡುತ್ತಿದೆ. ಸಾರ್ವತ್ರಿಕವೂ ನ್ಯಾಯಯುತವೂ ಆಗಿದೆಯೆಂದು ನಂಬಲಾದ ಒಂದು ಸಾಮಾಜಿಕ ವ್ಯಸನವೂ ಆಗಿ ಇದು ಪರಿಣಮಿಸಿದೆ. ಕಾರಣ, ಶಿಕ್ಷಣವು ಪ್ರತಿಯೊಬ್ಬರನ್ನೂ ಜ್ಞಾನದ ಗ್ರಾಹಕರಾಗುವಂತೆ ಆಕರ್ಷಿಸುತ್ತದೆ.(ಅದೇ)

೩. ಅಂಟೋನಿಯೊ ಗ್ರಾಮ್ಷಿ ಹೇಳುವಂತೆ, ಪ್ರತಿಯೊಬ್ಬ ಬುದ್ಧಿಜೀವಿಯೂ ತನ್ನ ಚಿಂತನೆಯಲ್ಲಿಯೇ ಒಂದು ಬಗೆಯ ರಾಜಕೀಯವನ್ನು ಪೋಶಿಸುತ್ತಿರುತ್ತಾನೆ. ಪ್ರತಿಯೊಬ್ಬ ಸಂಘಟಕನೂ ತನ್ನ ಸಂಘಟನಾ ಕಾರ್ಯದಿಂದ ಒಂದು ಬಗೆಯ ಚಿಂತನೆಗಳನ್ನು ಬೆಳೆಸುತ್ತಿರುತ್ತಾನೆ.(ಕೆ. ಫಣಿರಾಜ್ ೨೦೦೩)

೪. ಆಧುನಿಕತೆ ಮತ್ತು ಪರಂಪರೆಗಳ ಮುಖಾಮುಖಿ-ನಟರಾಜ ಹುಳಿಯಾರ್: ೨೦೦೪, ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ, ಕನ್ನಡ ವಿ.ವಿ. ಹಂಪಿ.

೫. ಕನ್ನಡ ಅಧ್ಯಯನ, ಸಂಪುಟ-೧೨, ಸಂಚಿಕೆ-೧ ಕನ್ನಡ ವಿ.ವಿ ಜನವರಿ-ಜೂನ್ ೨೦೦೬.

೬. ಸಾಹಿತ್ಯದ ಮೂಡನಂಬಿಕೆಗಳ ಆಚೆ-ಮೊಗಳ್ಳಿ ಗಣೇಶ್: ೨೦೦೮, ತಕರಾರು, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೭. ಕಾವ್ಯ ಪರಂಪರೆ ಮತ್ತು ಛಂದಸ್ಸು; ಅದೇ.

೮. ಡಾಮ್ನಿಕ್.ಡಿ: ೨೦೦೫, ಕರ್ನಾಟಕ ಜಾತಿಗಳ ಸಾಂಸ್ಕೃತಿಕ ಪ್ರತಿನಿಧೀಕರಣ ಮತ್ತು ವಸಾಹತುಶಾಹಿ ಅನುಭವ, ಪಿ.ಎಚ್.ಡಿ ಪದವಿಗೆ ಮಂ. ವಿ.ವಿ ಗೆ ಸಲ್ಲಿಸಿದ ಮಹಾಪ್ರಬಂಧ(ಅಪ್ರಕಟಿತ).

೯. ಈ ತೊಡಕನ್ನು ಮೊಗಳ್ಳಿಯವರು ಹೀಗೆ ವಿವರಿಸಿಕೊಳ್ಳುತ್ತಾರೆ `ಪರಂಪರೆಗೂ ಆಧುನಿಕತೆಗೂ ಯಾವತ್ತು ಕೂಡ ಸಂಘರ್ಶವಿರುತ್ತದೆ. ಅದರಲ್ಲೂ ತಳಸಮುದಾಯಗಳಿಂದ ಬಂದವರು ಪ್ರಾಚೀನ ಜ್ಞಾನ ಪರಂಪರೆಗಳ ಜೊತೆ ನಮಗೆ ನಮಗೆ ಸಂಬಂಧವಿಲ್ಲ ಎನ್ನುವ ಇಕ್ಕಟ್ಟಿಗೂ ಸಿಲುಕಿದ್ದಾರೆ. ನಮ್ಮ ನಮ್ಮ ಪರಂಪರೆಯ ಕೇರಿಗಳಲ್ಲೇ ನಮ್ಮ ಹುಡುಕಾಟಗಳು ನಡೆಯುತ್ತಿರುವ ಈ ಕಾಲದಲ್ಲಿ ಸಮಶ್ಟಿ ಸಂವೇದನೆಯ ಬೌದ್ಧಿಕ ಬಂಧುತ್ವವೇ ಅಸಾಧ್ಯ ಎಂಬ ವಾತಾವರಣ ಉಂಟಾಗಿದೆ.(ಮೊಗಳ್ಳಿ ಗಣೇಶ್;೨೦೦೮)

೧೦. ಪಾಶ್ಚಾತ್ಯರ ವಿಚಾರ ರೀತಿ, ವೈಜ್ಞಾನಿಕ ಸಾಧನೆ ಇವುಗಳ ಬಗ್ಗೆ ಮೆಚ್ಚಿಕೆಯ ಜೊತೆಗೇ ಒಂದು ಪ್ರತಿಕ್ರಿಯೆ ಮೂಡಿತು. ಭಾರತೀಯ ಸಂಸ್ಕೃತಿ, ಭಾರತೀಯ ಭಾಶೆಗಳಲ್ಲಿ ಅಭಿಮಾನ ಮೂಡಿತು. ಭಾರತದ ಪ್ರಾಚೀನ ಸಾಧನೆಯ ಅಧ್ಯಯನಕ್ಕೆ ಪ್ಯಾಶ್ಚಾತ್ಯರಿಂದಲೇ ಎಶ್ಟು ನೆರವು, ಮಾರ್ಗದರ್ಶನ ದೊರೆಯಿತು ಎಂಬುದನ್ನು ಕೃತಜ್ಞತೆಯಿಂದ ಸ್ಮರಿಸಬೇಕು.(ಎಲ್.ಎಸ್.ಶೇಶಗಿರಿರಾವ್ ೧೯೯೯)

೧೧. ಎಲ್‌ಫಿನ್‌ಸ್ಟನ್, ಕ್ಯಾಸಲ್, ವಿನ್ಸೆಂಟ್‌ಸ್ಮಿತ್ ಮೊದಲಾದ ಚರಿತ್ರೆಕಾರರು ಭಾರತದ ಇತಿಹಾಸದ ಅಧ್ಯಯನ ಮಾಡಿದರು. ಕೇಂಬ್ರಿಜ್ ಹಿಸ್ಟರಿ ಆಫ್ ಇಂಡಿಯ ಸಿದ್ಧವಾಯಿತು.. ಭಾರತೀಯ ಇತಿಹಾಸ, ತತ್ವಚಿಂತನೆ, ಸಾಹಿತ್ಯ ಇವನ್ನು ಪಾಶ್ಚಾತ್ಯರು ಮೆಚ್ಚಿದ್ದು ಇಲ್ಲಿಯವರೆಗೆ ಅವುಗಳಲ್ಲಿ ಗೌರವವನ್ನು, ಆಸಕ್ತಿಯನ್ನು ಉಂಟುಮಾಡಿದವು. ಪಾಶ್ಚಾತ್ಯ ಅಧ್ಯಯನ ವಿಧಾನ ಮಾರ್ಗದರ್ಶಕವಾಯಿತು.(ಅದೇ)

೧೨. ಆಧುನಿಕ ಭಾರತೀಯ/ಕನ್ನಡ ವಿದ್ವಾಂಸರಾದ ಎಂ.ಎನ್. ಶ್ರೀನಿವಾಸ, ಆರ್. ನರಸಿಂಹಾಚಾರ್ಯ, ಪಿ.ಎಸ್. ಕಾಣೆ, ಎ.ಕೆ. ಕೃಷ್ಣ ಅಯ್ಯರ್ ಮೊದಲಾದವರನ್ನು ಹೀಗೆ ಗುರುತಿಸಲಾಗುತ್ತದೆ(ಡಾಮ್ನಿಕ್ ೨೦೦೫).

೧೩. ಗೋವಿಂದರಾಜು ಸಿ.ಆರ್: ೧೯೯೫, ಕನ್ನಡ ಕರ್ನಾಟಕತ್ವ; ಆಲೂರ ವೆಂಕಟರಾಯರ ಚಿಂತನೆಗಳು, ಕನ್ನಡ ವಿ.ವಿ. ಹಂಪಿ.

೧೪. ಚಂದ್ರಶೇಖರ್ ಎಸ್: ೧೯೯೯, ಸಾಹಿತ್ಯ ಮತ್ತು ಚರಿತ್ರೆ, ನಮ್ಮ ಪ್ರಕಾಶನ, ತಿಪಟೂರು.

೧೫. ಆಂದ್ರೋದಯಕ್ಕಾಗಿ ನಡೆದ ಪೊಟ್ಟೆ ಶ್ರೀರಾಮುಲು ನಡೆಸಿದ ಹೋರಾಟ, ತಮಿಳುನಾಡಿನಲ್ಲಿ ನಡೆದ ಹಿಂದಿ ವಿರೋಧಿ ಚಳುವಳಿಗಳನ್ನು ಕರ್ನಾಟಕ ಏಕೀಕರಣ ಚಳುವಳಿಯ ಹೋರಾಟಗಳೊಂದಿಗೆ ಗ್ರಹಿಸಬಹುದಾಗಿದೆ.

೧೬. ಕನ್ನಡದಲ್ಲಿ ಹೇರಳವಾಗಿ ಗ್ರಂಥಗಳು ಹುಟ್ಟಿವೆ. ಈ ಭಾಶೆಯ ಸಾಹಿತ್ಯವು ದಕ್ಷಿಣ ಹಿಂದೂ ದೇಶದ ಇತರ ದ್ರಾವಿಡ ಭಾಶೆಗಳ ಸಾಹಿತ್ಯದೊಡನೆ ಹೋಲಿಸಿದರೆ ಹಿಂದಾಗುವಂತಿಲ್ಲ. ಕರ್ನಾಟಕ ಕವಿ ಚರಿತೆಯ ಮೂರೂ ಸಂಪುಟಗಳನ್ನು ನೋಡಿದರೂ ಈ ಹೇಳಿಕೆಯ ನಿಜತ್ವವು ದೃಡಪಡುತ್ತದೆ.(ಆರ್. ನರಸಿಂಹಾಚಾರ್ ೧೯೭೪)

೧೭. ಆಲೂರ ವೆಂಕಟರಾಯ: ೧೯೮೨, ಕರ್ನಾಟಕ ಗತವೈಭವ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೧೮. ಇಂಥ ಹೋರಾಟದ ಭಾಗವಾಗಿ ಅನೇಕ ಚಟುವಟಿಕೆಗಳು ಘಟಿಸುತ್ತಿದ್ದವು. ಕರ್ನಾಟಕ ವಿದ್ಯಾವರ್ಧಕ ಸಂಘದ ಸ್ಥಾಪನೆ(೧೮೯೦), ೧೯೦೭ ಮತ್ತು ೧೯೦೮ರಲ್ಲಿ ಕರ್ನಾಟಕ ಗ್ರಂಥಕರ್ತರ ಸಮ್ಮೇಳನಗಳು ನಡೆದವು. ಮೊದಲ ಸಮ್ಮೇಳನದಲ್ಲಿ ಕರ್ನಾಟಕ ಗ್ರಂಥಮಾಲೆ ಪ್ರಕಾಶನ ಸಂಸ್ಥೆಯನ್ನು ಆರಂಭಿಸಲು ನಿರ್ಣಯವಾಗುತ್ತದೆ. ೧೯೧೪ರಲ್ಲಿ ಕರ್ನಾಟಕ ಇತಿಹಾಸ ಮಂಡಳ, ೧೯೧೫ರಲ್ಲಿ ಕನ್ನಡ ಸಾಹಿತ್ಯ ಪರಿಶತ್ತು ಸ್ಥಾಪನೆಯಾಗುತ್ತವೆ. ೧೯೧೬ರಲ್ಲಿ ಏಕೀಕರಣವನ್ನೇ ಗುರಿಯಾಗಿ ಹೊಂದಿದ್ದ ಕರ್ನಾಟಕ ಸಭಾ, ೧೯೧೭ರಲ್ಲಿ ಕರ್ನಾಟಕ ಪ್ರಾಂತೀಯ ಹೋರಾಟ ಲೀಗಿನ ಘಟಕದ ಸ್ಥಾಪನೆಯಾಗಿವೆ. ಆಲೂರರ ಕರ್ನಾಟಕ ಗತವೈಭವ, ಕರ್ನಾಟಕತ್ವದ ವಿಕಾಸ ಸಹ ಈ ಹೊತ್ತಿಗೆ ರಚನೆಯಾಗಿದ್ದವು.

೧೯. ನಾಯಕ ಜಿ.ಎಚ್: ೧೯೮೪, ನಿರಪೇಕ್ಷ, ಅಕ್ಷರ ಪ್ರಕಾಶನ, ಹೆಗ್ಗೋಡು.

೨೦. ಡಿ.ವಿ.ಜಿ. ಇದನ್ನು ಮುಂದಿನ ತಲೆಮೊರೆಯವರಿಗೆ ಕನ್ನಡ ವಿದ್ವಾಂಸನೊಬ್ಬನಿಂದ ರಚಿತವಾದ ಉಚ್ಚಕೃತಿಯೆಂದೆನಿಸಿ ಆದರ್ಶಭೂತವಾಗುತ್ತದೆ ಎನ್ನುತ್ತಾರೆ. ಸಾಹಿತ್ಯ ಚರಿತ್ರೆಯೊಂದರ ಕೊರತೆಯನ್ನು ನೀಗುವ ಮಾತನ್ನು ರಂ.ಶ್ರೀ. ಮುಗಳಿ ಎರಡನೇ ಮುದ್ರಣದ ಸಂಪಾದಕರಾಗಿ ವ್ಯಕ್ತಪಡಿಸುತ್ತಾರೆ. ಗೋವಿಂದ ಪೈ ಆರ್. ನರಸಿಂಹಾಚಾರ್ಯರನ್ನು ಅಮೆರಿಕವನ್ನು ಕಂಡುಹಿಡಿದ ಕೊಲಂಬಸನಿಗೆ ಹೋಲಿಸುತ್ತಾರೆ. ಪ್ರಭುದ್ಧ ಕರ್ನಾಟಕ ಪತ್ರಿಕೆಯು ಕನ್ನಡ ಸಾಹಿತ್ಯದ ಇತಿಹಾಸವನ್ನು ಎಷ್ಟು ಪ್ರಯತ್ನದಿಂದ ಗ್ರಂಥೀಕರಿಸಿ, ಇಷ್ಟು ವಿಪುಲವಾದ, ಇಷ್ಟು ಪ್ರಶಸ್ತವಾದ, ಇಷ್ಟು ಮನೋಜ್ನವಾದ ಸಾಹಿತ್ಯವು ನಮಗಿದೆ ಎಂದು ಕನ್ನಡ ನಾಡಿನ ಅವಗಾಹನೆಗೆ ತಂದವರೆಂದರೆ ಈ ವಿದ್ಯಾವೃದ್ಧರೆ ಎಂದು ದಾಖಲಿಸುತ್ತದೆ.(ಎನ್.ಅನಂತರಂಗಾಚಾರ್ ೧೯೭೧)

೨೧. ಅನಂತರಂಗಾಚಾರ್ಯ ಎನ್: ೧೯೭೧, ರಾ. ನರಸಿಂಹಾಚಾರ್ಯ ಜೀವನ ಮತ್ತು ಕಾರ್ಯ, ಕ.ಸಾ.ಪ, ಬೆಂಗಳೂರು.

೨೨. In terms of intelligentia's socioeconomic roots, we need to keep in mind the nexus of cast and class, and recognise that the predominance of high cast Hindus notwithstanding, non-high cast Hindus and non-Hindus had also attained membership in the dominant group-though their numbers were minuscule. While class played a significant role in their success, of considerable importence also was their participation in a process or tendency that Indian sociologist, M.N. srinivas, has called 'Sanskritization', a form of passing, whereby lesser groups claimed a higher status for themselves by assuming the customs, manners and taboos of groups traditionally superior to them. The assumption of the customs, manners and taboos of higher casts resulted in enhanced social and cultural capital for some members of these groups, and entry into the networks of power. Acceptance of the customs and manners of the groups superior to one's own included acquiscence to the idea of of the superiority of Engish thought and culture, and adaption of an anglicized lifestyle. In the name of modernization, certain leaders of minority communities embraced the value of English education like their high cast Hindu counterparts (ಅಲೋಕ್ ಕೆ ಮುಖರ್ಜಿ: ೨೦೦೯).

೨೩. ಚಂದ್ರಶೇಖರ್ ಎಸ್. ೧೯೯೯

೨೪. ಸಾಹಿತ್ಯ ಚರಿತ್ರೆಯನ್ನು ಕುರಿತು ಇತ್ತೀಚೆಗೆ ಕರ್ನಾಟಕದಲ್ಲಿ ನಡೆಯುತ್ತಿರುವ ಕೆಲಸಗಳೆಲ್ಲ ಬಹುಮಟ್ಟಿಗೆ ವಿದ್ವಾಂಸರನ್ನೊ, ಸಾಹಿತ್ಯವನ್ನು ವಿಶೇಶವಾಗಿ ಅಧ್ಯಯನ ಮಾಡುವವರನ್ನೊ ಉದ್ದೇಶಿಸಿದವುಗಳು. ಆದರೆ ಈ ಪ್ರೌಢ ಪರಿಮಿತ ವರ್ಗದ ಆಚೆ ಇರುವ, ಸಾಹಿತ್ಯಾಸಕ್ತರಾದ ಸಾಮಾನ್ಯರಿಗೆ ಕನ್ನಡ ಸಾಹಿತ್ಯ ಚರಿತ್ರೆಯನ್ನು ಮುಟ್ಟಿಸುವ ಪ್ರಯತ್ನಗಳು ಅಷ್ಟಾಗಿ ನಡೆದಿಲ್ಲವಾದ್ದರಿಂದ ಕನ್ನಡ ಸಾಹಿತ್ಯದ ಇತಿಹಾಸವನ್ನು ಸರಳವಾಗಿ, ನಿರ್ದುಷ್ಟವಾಗಿ ಮತ್ತು ಆಕರ್ಶಕವಾಗಿ ಸಾಮಾನ್ಯರಿಗೆ ಪರಿಚಯ ಮಾಡಿಕೊಡುವುದು ಈ ಕೃತಿ ಸಂಪುಟಗಳ ಉದ್ದೇಶ.(ಜಿ.ಎಸ್.ಶಿವರುದ್ರಪ್ಪ ೧೯೭೫).

೨೫. ಕೀರ್ತಿನಾಥ ಕುರ್ತಕೋಟಿ: ೧೯೯೮, ನೂರು ಮರ ನೂರು ಸ್ವರ, ಕನ್ನಡ ವಿ.ವಿ. ಹಂಪಿ.

೨೬. ಅದೇ.

೨೭. ತೋಳ್ಬಲದ ಆಳ್ವಿಕೆ(ರೂಲ್ ಬೈ ಫೋರ್ಸ್) ಮತ್ತು ಜನಸಮ್ಮತಿಯ ಆಳ್ವಿಕೆ(ರೂಲ್ ಬೈ ಕನ್ಸೆಂಟ್) ಈ ಎರಡೂ ನಮೂನೆಯ ಅಧಿಕಾರಗಳು ಮೇಳೈಸಿದರೆ ಆಳುವ ವರ್ಗಕ್ಕೆ ಸಮಾಜದಲ್ಲಿ ಯಜಮಾನಿಕೆ(ಹೆಜಮನಿ) ಸ್ಥಾಪಿಸಲು ಸಾಧ್ಯವಾಗುತ್ತದೆ. ಅಸಮ್ಮತಿಯನ್ನು ಪ್ರಸಂಗ ಬಂದಾಗ

ತೋಳ್ಬಲದ ಪ್ರದರ್ಶನಕ್ಕೆ ಸಮರ್ಥನೆಯಾಗಿ ಬಳಸಿಕೊಳ್ಳಬಹುದು: ತೋಳ್ಬಲವೇ ಆಳುವ ವರ್ಗದ ನಾಯಕತ್ವಕ್ಕೆ ಜನಸಮ್ಮತಿಯನ್ನು ದೊರಕಿಸಿಕೊಡುವ ಸಾಧನವೂ ಆಗಬಹುದು. ಯಾವುದೇ ವರ್ಗದ ಶಕ್ತಿ ಸಮಾಜದಲ್ಲಿ ಅದು ಗಳಿಸಿಕೊಂಡಿರುವ ಯಜಮಾನಿಕೆಯನ್ನು ಅವಲಂಬಿಸಿರುತ್ತದೆ- ಗ್ರಾಮ್ಷಿ.(ಕೆ.ಫಣಿರಾಜ್ ೨೦೦೩)

೨೮. ಡಾಮ್ನಿಕ್.ಡಿ: ೨೦೦೭, ದಮನಿತ ದನಿಗಳ ಚಿಂತನ, ಸಖಿ ಪ್ರಕಾಶನ, ಹೊಸಪೇಟೆ.

೨೯. ಪಣಿರಾಜ್. ಕೆ: ೨೦೦೩, ಆಂಟೋನಿಯೊ ಗ್ರಾಂಶಿ, ಅಭಿನವ ಪ್ರಕಾಶನ, ಬೆಂಗಳೂರು.

೩೦. ನಾರಾಯಣ ಕೆ.ವಿ: ೧೯೯೭, ಬೇರು ಕಾಂಡ ಚಿಗುರು, ವಿವೇಕ ಪ್ರಕಾಶನ, ಬೆಂಗಳೂರು.

೩೧. ಫ್ರೆಡರಿಕ್ ಆಪ್‌ಫೆಲ್ ಮಾರ್‌ಗ್ಲಿನ್ ಜ್ಞಾನವ್ಯವಸ್ಥೆಗಳ ಕುರಿತು ಮಾತನಾಡುತ್ತಾ, 'ನಮ್ಮ ವಿಶ್ವವಿದ್ಯಾಲಯಗಳ ವಿಶಯಕ್ಕೆ ಬಂದರೆ, ಅವು ನಿಂತಿರುವುದೇ 'ವಸ್ತುನಿಶ್ಚತೆ, ಮೌಲ್ಯನಿರಪೇಕ್ಷತೆ ಮತ್ತು ರ್‍ಯಾಶನಾಲಿಟಿ'( ಕಾರ್ಯಕಾರಣ ಸಂಬಂಧ ಮತ್ತು ಪ್ರಮಾಣ-ಪ್ರಯೋಜನಗಳ ತರ್ಕವನ್ನು ಆಧರಿಸಿದ ವೈಚಾರಿಕತೆ)ಇವುಗಳ ತಳಹದಿಯ ಮೇಲೆ. ಈ ಸಂಸ್ಥೆಗಳ ಪ್ರತಿಯೊಂದು ಜ್ಞಾನಶಾಖೆಯೂ ಈ ಗ್ರಹೀತಗಳಿಗೆ ಚೂರೂ ಚ್ಯುತಿಬಾರದಂತೆ ನೋಡಿಕೊಂಡು ತಮ್ಮ ವಿದ್ಯಾರ್ಥಿಗಳನ್ನು ವ್ಯವಸ್ಥೆಯ ದಕ್ಷ ಗುಮಾಸ್ತರನ್ನಾಗಿ ಮಾರ್ಪಡಿಸುವುದರಲ್ಲಿ ತೊಡಗಿವೆ. ಆದರೆ ಈ ವಿಶ್ವವಿದ್ಯಾಲಯಗಳ ಆವರಣದಲ್ಲೇ ಈಗ ಈ ವಿದ್ಯಮಾನದ ವಿರುದ್ಧ ಒಡಕು ಮಾತುಗಳು ಹುಟ್ಟಿಕೊಂಡಿವೆ' ಎನ್ನುತ್ತಾನೆ.(ವಿನಯ ಲಾಲ್ ಮತ್ತು ಆಶಿಶ್ ನಂದಿ ೨೦೦೭).

೩೨. ಶಂಕರಭಟ್.ಡಿ.ಎನ್: ೨೦೦೬, ಕನ್ನಡ ನುಡಿಯ ಬಗೆಗೆ ಚಿಂತನೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೩೩. ಕೃಷ್ಣ ಕೊಲ್ಹಾರ ಕುಲಕರ್ಣಿ: ೨೦೦೮, ನಾ ಶ್ರೀ ರಾಜಪುರೋಹಿತರ ಸಂಶೋಧನಾ ಲೇಖನಗಳು(೧೮೮೭-೧೯೫೩) ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು.

೩೪. ಗುಸ್ತೆವೊ ಎಸ್ತೆವಾ; ತಳಮಟ್ಟದ ಕ್ರಿಯಾಶೀಲತೆಯನ್ನು ಬಣ್ಣಿಸಲು ಹಲವೊಮ್ಮೆ 'ನಾಗರಿಕ ಸಮಾಜ' ಎಂಬ ನುಡಿಗಟ್ಟನ್ನು ಬಳಸಲಾಗುತ್ತದೆ. ಅದೊಂದು ವ್ಯಾಪಕ ಬಳಕೆಯ ಪದಪ್ರಯೋಗವಾಗಿದ್ದರೂ ಕೆಲವೊಮ್ಮೆ ಸಂದಿಗ್ಧಗಳಿಗೆ ಎಡೆಮಾಡಿಕೊಡುತ್ತದೆ. 'ನಾಗರಿಕ ಸಮಾಜ' ಎಂಬ ನುಡಿಗಟ್ಟಿನ ಬಳಕೆ ಹಾಗೂ ಆ ಪದ ಕುರಿತು ಹಲವು ಬಗೆಯ ವ್ಯಾಖ್ಯಾನಗಳ ಚರಿತ್ರೆಯಿಂದಾಗಿ ಅದಕ್ಕೆ ಈಗ ನಿಕರತೆ ಉಳಿದಿಲ್ಲ. ಅಶ್ಟು ಮಾತ್ರವಲ್ಲ, ಅದು, ಒಮ್ಮೊಮ್ಮೆ ನೀವು ಏನು ಹೇಳಲು ಹೊರಟಿದ್ದೀರೋ, ಅದರ ವಿರುದ್ಧಾರ್ಥವನ್ನೆ ಕೊಡುತ್ತದೆ ಎಂದು ವಿವರಿಸುತ್ತಾನೆ.(ವಿನಯ ಲಾಲ್ ಮತ್ತು ಆಶಿಶ್ ನಂದಿ: ೨೦೦೭)

೩೫. ವಿನಯ ಲಾಲ್ ಮತ್ತು ಆಶಿಶ್ ನಂದಿ: ೨೦೦೭.

ಅಧ್ಯಾಯ ೬

# ಪಠ್ಯಕ್ರಮಗಳ ವಿಶ್ಲೇಶಣೆ: ಯಜಮಾನ ಸಂಬಂಧಗಳ ಶೋಧನೆ

ಸಾಮಾಜಿಕ ಪ್ರತಿನಿಧೀಕರಣವಾಗಿ ಕನ್ನಡ ಪಠ್ಯಕ್ರಮ

ಪಠ್ಯಗಳ ಬೋಧನೆ: ಅಧ್ಯಾಪನ ಸಮುದಾಯದ ನಿರ್ಣಾಯಕ ಪಾತ್ರದ ಸಮಸ್ಯೆಗಳು

ಕಲಿಕೆಯ ಪ್ರಕ್ರಿಯೆ: ಕಲಿಕಾರ್ಥಿಯ ನಿಲುವುಗಳು

ಪಠ್ಯ ಕಟ್ಟಿಕೊಡುವ ತಿಳುವಳಿಕೆ, ಪರೀಕ್ಷೆ ಮತ್ತು ಮೌಲ್ಯಮಾಪನ: ಸಾಮರ್ಥ್ಯ ನಿರ್ಧಾರದ ಪ್ರಶ್ನೆ

ಅಧ್ಯಾಯ ೬

## ಪಠ್ಯಕ್ರಮಗಳ ವಿಶ್ಲೇಶಣೆ: ಯಜಮಾನ ಸಂಬಂಧಗಳ ಶೋಧನೆ

ಕನ್ನಡ ಭಾಶೆಯನ್ನು ಕಲಿಸಬೇಕೆಂಬ ನಿರ್ಧಾರದ ಹಿಂದಿರುವ ಪ್ರಶ್ನೆಗಳಿಂದ ಈ ಚರ್ಚೆಯು ಆರಂಭವಾಗುತ್ತದೆ. ಪದವಿ ಹಂತದಲ್ಲಿ ಭಾಶಾ ಕಲಿಕೆಯ ಸ್ವರೂಪ ಯಾವ ಬಗೆಯದು, ಅದರ ಮೂಲ ಉದ್ದೇಶಗಳೇನು ಎಂಬ ತಳಮೂಲ ಪ್ರಶ್ನೆಗಳಿಂದ ಆರಂಭ ಪಡೆದುಕೊಳ್ಳುವ ಈ ಚರ್ಚೆ ಪದವಿ ತರಗತಿಗಳಿಗೆ ಕನ್ನಡ ಭಾಶಾ ಕಲಿಕೆಯ ಸಾಮಗ್ರಿಗಳಾಗಿ ಆಯ್ಕೆ ಮಾಡಲಾದ ಪಠ್ಯಕ್ರಮಗಳನ್ನು ಕುರಿತದ್ದಾಗಿದೆ. ಈ ಹಿಂದಿನ ಅಧ್ಯಾಯದಲ್ಲಿ ಪಠ್ಯಕ್ರಮಗಳ ಕುರಿತಾಗಿ ಭಾಶೆ ಮತ್ತು ಸಾಹಿತ್ಯ ಸಂಬಂಧಿ ನೆಲೆಗಳಲ್ಲಿ ಚರ್ಚಿತವಾಗಿರುವಂತೆ, ಪರಂಪರೆಯ ಕುರಿತ ಅಪಕಲ್ಪಿತ ನಂಬಿಕೆಗಳಲ್ಲಿ **ಬೌದ್ಧಿಕವಾದ ಯಜಮಾನ** ಸಂಬಂಧಗಳ ಸ್ಥಾಪನೆಯ ಹುನ್ನಾರುಗಳಿವೆ. ಇದನ್ನು ಪಠ್ಯಕ್ರಮದ ಮೂಲಕ ಹೇಗೆ ಜಾರಿಗೊಳಿಸಲಾಗಿದೆ ಎಂಬುದನ್ನು ಇಲ್ಲಿ ಪರಿಶೀಲಿಸಲಾಗುತ್ತದೆ. ಇದರೊಂದಿಗೆ ಬೋಧನೆ ಮತ್ತು ಮೌಲ್ಯಮಾಪನದ ನೆಲೆಗಳು ಹೇಗೆ ಪೂರಕವಾಗಿ ಪ್ರವೃತ್ತವಾಗಿವೆ ಎಂಬುದನ್ನು ವಿವರಿಸಿಕೊಳ್ಳುವುದಾಗಿದೆ.

ಪಠ್ಯ ಎನ್ನುವುದನ್ನು ಮೊದಲಿಗೆ, ಶಿಕ್ಶಣದ ಪಠ್ಯಕ್ರಮವಾಗಿಸುವುದರ ಮೂಲಕವೇ ಶಿಕ್ಶಣ ಸಂಬಂಧಿ ಮಾರುಕಟ್ಟೆಯ ಅರ್ಥವ್ಯವಸ್ಥೆಯನ್ನೂ ನಿಭಾಯಿಸಲಾಗುತ್ತದೆ. ಈ ಮೂಲಕ ಈ ಮಾರುಕಟ್ಟೆಯ ಗ್ರಾಹಕರಾಗುವ ಕಲಿಕಾರ್ಥಿಗಳು ಮಾತ್ರ ಜ್ಞಾನಿಗಳಾಗುತ್ತಾರೆ ಎಂದು ನಂಬಿಸಲಾಗುತ್ತದೆ. ಎರಡನೇ ಹಂತದಲ್ಲಿ ಈ ಪಠ್ಯಕ್ರಮ ಒದಗಿಸುವ ಮಾಹಿತಿಯೆ ವ್ಯಕ್ತಿಯನ್ನು ನಾಗರಿಕನ/ಳನ್ನಾಗಿಸುವ ಜ್ಞಾನವಾಗಿ ಮಾರ್ಪಡುತ್ತದೆ. ಪಠ್ಯಕ್ರಮದೊಳಗಿನ ಭಾಶಿಕ ಜಗತ್ತು ಕಟ್ಟಿಕೊಡುವ ಬದುಕನ್ನು ಅಧಿಕೃತ ಎಂದು ಸಂಸ್ಕೃತಿ, ಪರಂಪರೆಗಳ ಹೆಸರಲ್ಲಿ ನಂಬಿಸುತ್ತ ನಿರಂತರ ಹೊಣೆಗಾರರನ್ನಾಗಿ ಮಾಡಲಾಗುತ್ತದೆ. ಬೋಧನೆ ಮತ್ತು ಮೌಲ್ಯಮಾಪನ ಎಂಬ ಅಧಿಕಾರ ಸಂಬಂಧಿ ಪ್ರಕ್ರಿಯೆಗಳ ಮೂಲಕ ಇದನ್ನು ಸಾಧಿಸಲಾಗುತ್ತದೆ. ಈ ಹಿನ್ನೆಲೆಯಲ್ಲಿ ಇದರ ಒಟ್ಟು ವಿದ್ಯಮಾನಗಳನ್ನು ಬೆಂಗಳೂರು ವಿಶ್ವವಿದ್ಯಾಲಯದ ಪದವಿ ತರಗತಿಗಳಿಗೆ ಸಂಬಂಧಿಸಿದ ಕನ್ನಡಭಾಶಾ ಕಲಿಕೆಯ ಪಠ್ಯಕ್ರಮಗಳನ್ನು ಪ್ರಾತಿನಿಧಿಕವಾಗಿಸಿಕೊಂಡು ಇಲ್ಲಿ ಚರ್ಚಿಸಲಾಗಿದೆ.

ಪದವಿ ತರಗತಿಗಳಲ್ಲಿ ಭಾಶೆಯ ಕಲಿಕೆಗೆ ಸಾಹಿತ್ಯದ ಕೃತಿ ಅಥವಾ ಕೃತಿಯ ಭಾಗಗಳನ್ನು ಪಠ್ಯಗಳನ್ನಾಗಿ ನಿರ್ಣಾಯಕವಾಗಿ ಬಳಸಲಾಗಿದೆ ಎಂಬುದು ಪಠ್ಯಕ್ರಮದ ಮಾಹಿತಿಯನ್ನು

ಗಮನಿಸಿದರೇ ತಿಳಿದು ಬರುವ ವಿಶಯವಾಗಿದೆ. ಹಾಗಿದ್ದರೆ ಈ ಧೋರಣೆಯ ಹಿಂದಿರುವ ಭಾಶಾ ಕಲಿಕೆಯ ತರ್ಕ ಯಾವುದು, ಅದು ಹೇಗೆ?. ಇತರೆ ತಿಳುವಳಿಕೆಯ ಶಿಸ್ತುಗಳು ಕನ್ನಡಕಲಿಕೆಯ ಪಠ್ಯಗಳಾಗದಿರುವುದು ಯಾಕೆ?. ಒಂದು ವಿಶಾಲವಾದ ಭಾಶಿಕ ಸಮುದಾಯದಲ್ಲಿ ನಿರ್ದಿಶ್ಟ ಭಾಶೆಗೆ ಸಂಬಂಧಿಸಿದಂತೆ ಜಾತಿ, ಪ್ರದೇಶ ಮತ್ತು ಜೀವನ ವಿಧಾನಗಳಿಗನುಗುಣವಾಗಿ ಅನೇಕ ಭಾಶಿಕ ಪರಿಸರಗಳಿರುತ್ತವೆ ಎಂಬುದನ್ನು ಭಾಶಾ ಅಧ್ಯಯನಗಳು ತೋರಿಸಿಕೊಡುತ್ತವೆ ನಿಜ. ಆದರೆ, ಪಠ್ಯಕ್ರಮಗಳಾಗಿ ನಿಯಮಿತವಾಗುವ ಪಠ್ಯಗಳು ಇದರ ಹೊಣೆಗಾರಿಕೆಯನ್ನು ಹೇಗೆ ಸಾಧಿಸಿಕೊಡುತ್ತವೆ. ಸಾಹಿತ್ಯ ಕೃತಿಗಳು ಮಾತ್ರವೆ ಕಟ್ಟಿಕೊಡುವ ಭಾಶೆಯು ಭಾಶಾ ಕೌಶಲಗಳ ಪ್ರತಿನಿಧಿಯೆ? ಹೇಗೆ?. ಯಾರು ಬರೆದ ಸಾಹಿತ್ಯ ಇಂಥ ಪ್ರತಿನಿಧೀಕರಣದ ಹೊರೆಯನ್ನು ಹೊರುತ್ತದೆ. ಮತ್ತು ಯಾಕೆ ಹೊರುತ್ತದೆ. ಇಂಥ ತಳಮೂಲವಾದ ಪ್ರಶ್ನೆಗಳಿಗೆ ಕನ್ನಡ ಶಿಕ್ಶಣದ ಪದವಿ ಹಂತವನ್ನು ಕುರಿತಾಗಿ ಎಲ್ಲಿಯೂ ಸ್ಪಶ್ಟಪಡಿಸಿಕೊಂಡಿರುವುದು ಕಾಣುವುದಿಲ್ಲ. ಇನ್ನೂ ಮುಖ್ಯವಾದ ವಿಚಾರವೆಂದರೆ, ಪದವಿ ಹಂತದಲ್ಲಿ ಭಾಶಾ ಕಲಿಕೆ ಎಂದರೆ ಏನು ಮತ್ತು ಯಾಕೆ ಎನ್ನುವ ಪ್ರಶ್ನೆಯನ್ನು ಸಹ ಕೇಳಿಕೊಳ್ಳದಿರುವುದು. ಆದ್ದರಿಂದಾಗಿ ಭಾಶೆಯ ಕಲಿಕೆಗೆ ಸಂಬಂಧಿಸಿದಂತೆ ಪಠ್ಯಕ್ರಮಗಳ ಹಿಂದಿರುವ ತರ್ಕ ಯಾವ ಬಗೆಯದು ಎಂಬುದನ್ನು ಗ್ರಹಿಸುತ್ತಲೇ ವಿವರಿಸಿಕೊಳ್ಳಬೇಕಾಗುತ್ತದೆ. ಇಂಥ ಪ್ರಶ್ನೆಗಳನ್ನು ಮುಖ್ಯವಾಗಿರಿಸಿಕೊಂಡು ನಲವತ್ತಕ್ಕೂ ಹೆಚ್ಚು ವರುಶಗಳ ಪದವಿ ಕನ್ನಡ ಪಠ್ಯಕ್ರಮಗಳ ಸ್ವರೂಪವನ್ನು ಗಮನಿಸಿ ಸಾಮಾಜಿಕ ಹೊಣೆಗಾರಿಕೆಯ ನೆಲೆಯಲ್ಲಿ ವಿಶ್ಲೇಶಣೆಗೆ ಒಳಪಡಿಸಲಾಗಿದೆ. ಇದನ್ನು;

೧. ಸಾಮಾಜಿಕ ಪ್ರತಿನಿಧೀಕರಣವಾಗಿ ಕನ್ನಡ ಪಠ್ಯಕ್ರಮ

೨. ಪಠ್ಯಕ್ರಮದ ಬೋಧನೆ ಮತ್ತು ಪರೀಕ್ಶೆ: ಅಧ್ಯಾಪನ ಸಮುದಾಯದ ನಿರ್ಣಾಯಕ ಪಾತ್ರ

೩. ಕಲಿಕೆಯ ಪ್ರಕ್ರಿಯೆ: ಕಲಿಕಾರ್ಥಿಯ ನಿಲುವುಗಳು

೪. ಪಠ್ಯ ಕಟ್ಟಿಕೊಡುವ ತಿಳುವಳಿಕೆ ಮತ್ತು ಪರೀಕ್ಶೆ: ಸಾಮರ್ಥ್ಯ ನಿರ್ಧಾರದ ಪ್ರಶ್ನೆ

ಈ ನಾಲ್ಕು ನೆಲೆಗಳಲ್ಲಿ ವಿಶ್ಲೇಶಿಸಿಕೊಳ್ಳುವ ಮೂಲಕ ಈ ಅಧ್ಯಯನದ ಮುಖ್ಯ ಗುರಿಯಾದ ಸಾಮಾಜಿಕ ಹೊಣೆಗಾರಿಕೆಯ ತೊಡಕುಗಳನ್ನು ಸ್ಪಶ್ಟಪಡಿಸಿಕೊಳ್ಳಲು ಪ್ರಯತ್ನಿಸಲಾಗಿದೆ.

**೬.೧ ಸಾಮಾಜಿಕ ಪ್ರತಿನಿಧೀಕರಣವಾಗಿ ಪಠ್ಯಕ್ರಮ;**

ಕನ್ನಡ ಭಾಶೆ ಮತ್ತು ಸಾಹಿತ್ಯ ಕುರಿತಂತೆ ಮೊದಲು ಅಭ್ಯಾಸ, ಅಧ್ಯಯನಗಳು ಆರಂಭವಾಗಿದ್ದು ಮದ್ರಾಸ್ ವಿಶ್ವವಿದ್ಯಾಲಯದಲ್ಲಿ. ಕರ್ನಾಟಕದಲ್ಲಿ, ಮೊದಲು ಮೈಸೂರು

ವಿಶ್ವವಿದ್ಯಾಲಯ ೧೯೧೬ರಲ್ಲಿ ಆರಂಭವಾಯಿತು. ಆನಂತರ ೧೯೪೮ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ೧೯೬೪ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯ, ೧೯೭೩ರಲ್ಲಿ ಗುಲಬರ್ಗ ವಿಶ್ವವಿದ್ಯಾಲಯ, ೧೯೮೨ರಲ್ಲಿ ಮಂಗಳೂರು ವಿಶ್ವವಿದ್ಯಾಲಯ, ೧೯೮೬ರಲ್ಲಿ ಕುವೆಂಪು ವಿಶ್ವವಿದ್ಯಾಲಯಗಳು ಸ್ಥಾಪನೆಯಾದವು. ೧೯೯೧ರಲ್ಲಿ ಕನ್ನಡ ನಾಡು, ನುಡಿ, ಜೀವನ ಸಂಬಂಧಿಯಾದ ಎಲ್ಲ ಬಗೆಯ ವಿದ್ಯಮಾನಗಳ ಕುರಿತಾದ ಅಧ್ಯಯನದ ಕಾರಣವನ್ನಿಟ್ಟುಕೊಂಡು ಸಂಶೋಧನಾ ವಿಶ್ವವಿದ್ಯಾಲಯವಾಗಿ ಕನ್ನಡ ವಿಶ್ವವಿದ್ಯಾಲಯ ಆರಂಭವಾಯಿತು. ವಿಶ್ವವಿದ್ಯಾಲಯದ ಶಿಕ್ಷಣ ಕುರಿತಂತೆ ಕಳೆದ ಶತಮಾನದ ವಿದ್ಯಮಾನಗಳು ಇವು. ಈ ಶತಮಾನದ ಮೊದಲಿಗೆ ಸ್ಥಾಪಿತವಾದ ವಿಶ್ವವಿದ್ಯಾಲಯಗಳೆಂದರೆ, ೨೦೦೩ರಲ್ಲಿ ಮಹಿಳಾ ವಿಶ್ವವಿದ್ಯಾಲಯ, ೨೦೦೪ರಲ್ಲಿ ತುಮಕೂರು ವಿಶ್ವವಿದ್ಯಾಲಯ, ೨೦೦೮ರಲ್ಲಿ ಸಂಗೀತ ಮತ್ತು ಲಲಿತ ಕಲೆಗಳ ವಿಶ್ವವಿದ್ಯಾಲಯ ಮತ್ತು ೨೦೦೯ರಲ್ಲಿ ದಾವಣಗೆರೆ ವಿಶ್ವವಿದ್ಯಾಲಯ.

ಕರ್ನಾಟಕದಲ್ಲಿ ಸ್ನಾತಕ ಪದವಿಯನ್ನು ನೀಡುತ್ತಿರುವ ಎಲ್ಲ ೯ ವಿಶ್ವವಿದ್ಯಾಲಯಗಳು ಪದವಿ ಕನ್ನಡ ಪಠ್ಯಕ್ರಮಗಳ ಕುರಿತಂತೆ ಕರ್ನಾಟಕದ ಮೊದಲ ವಿಶ್ವವಿದ್ಯಾಲಯವಾದ ಮೈಸೂರು ವಿಶ್ವವಿದ್ಯಾಲಯದ ಮಾದರಿಯನ್ನೆ ಅನುಸರಿಸುತ್ತವೆ, ಇಂದಿಗೂ. ಈ ಮೊದಲೇ ಚರ್ಚೆಗೆ ತೆಗೆದುಕೊಂಡಿರುವಂತೆ ೧೯ನೆ ಶತಮಾನದಲ್ಲಿ ಪೂರ್ವವನ್ನು ಕುರಿತಂತೆ ಹುಟ್ಟಿಕೊಂಡ ಓರಿಯಂಟಲಿಸ್ಟ್ ಚಿಂತನೆಗಳು, ಈ ವಸಾಹತು ಚಿಂತನೆಯ ಉತ್ಪನ್ನಗಳಾದ ಆರ್. ನರಸಿಂಹಾಚಾರ್ಯರ ಕವಿಚರಿತೆ, ಇವುಗಳನ್ನು ಅನುಸರಿಸಿ ಬಿಎಂಶ್ರೀ **ಕನ್ನಡ ಕೈಪಿಡಿ**ಯ ಮೂಲಕ ರೂಪಿಸಿದ ಪಠ್ಯಕ್ರಮ, ಸಂಸ್ಕೃತ ಪರಂಪರೆಯ ಚಿಂತನೆಗಳನ್ನು ಅಧಿಕೃತವಾಗಿಸುವುದರ ಮೂಲಕವೇ ಕನ್ನಡ ಕಾವ್ಯ ಚಿಂತನೆಯನ್ನು ರೂಪಿಸಿದ ತೀನಂಶ್ರೀಯ **ಭಾರತೀಯ ಕಾವ್ಯ ಮೀಮಾಂಸೆ**ಯ ಚಿಂತನೆಗಳು ಕನ್ನಡ ಪಠ್ಯಕ್ರಮಗಳನ್ನು ನಿರ್ಧರಿಸುವಲ್ಲಿ ಪ್ರಬಲವಾಗಿ ಕೆಲಸ ಮಾಡಿವೆ. ಆನಂತರದ ದಿನಗಳಲ್ಲಿ, ಇದೇ ನಮ್ಮ ಅಧಿಕೃತ ಪರಂಪರೆ ಎಂದು ರಂ.ಶ್ರೀ. ಮುಗಳಿಯವರು **ಕನ್ನಡ ಸಾಹಿತ್ಯ ಚರಿತ್ರೆ**ಯನ್ನು ಮತ್ತಷ್ಟು ಅಧಿಕೃತವಾಗಿ ಸ್ಥಾಪಿಸುವುದರ ಮೂಲಕ ಇದನ್ನು ಚಾಲನೆಗೊಳಿಸುವುದು ಸುಲಭವೂ ಆಯಿತು. ಇವತ್ತಿಗೂ ಕರ್ನಾಟಕದ ಯಾವುದೇ ವಿಶ್ವವಿದ್ಯಾಲಯದಲ್ಲಿ ಕನ್ನಡ ಭಾಶೆ ಮತ್ತು ಸಾಹಿತ್ಯವನ್ನು ಅಭ್ಯಾಸ ಮಾಡುವ ಯಾವುದೇ ಕಲಿಕಾರ್ಥಿಗೆ ಈ ಕೃತಿಗಳನ್ನು ಪ್ರಮುಖ ಪರಾಮರ್ಶನ ಗ್ರಂಥಗಳೆಂದು ಕಟ್ಟಿಕೊಡಲಾಗುತ್ತದೆ. ಇವುಗಳನ್ನು ಪರಾಮರ್ಶಿಸದೆ ಕನ್ನಡ ಸಾಹಿತ್ಯದ ಅಭ್ಯಾಸ, ಅಧ್ಯಯನಗಳು ಪೂರ್ಣಗೊಳ್ಳುವುದಿಲ್ಲವೆಂಬುದನ್ನು ಅಭ್ಯಾಸ ಮಾಡಿಸಲಾಗುತ್ತದೆ.

ಬೆಂಗಳೂರು ವಿಶ್ವವಿದ್ಯಾಲಯ ಆರಂಭವಾದಾಗ ಮೈಸೂರು ವಿಶ್ವವಿದ್ಯಾಲಯದ ಪಠ್ಯಕ್ರಮಗಳನ್ನೇ ಅನುಸರಿಸಲಾಯಿತಲ್ಲದೆ ಮುಂದಿನ ದಿನಗಳಲ್ಲಿ ಪಠ್ಯಕ್ರಮವನ್ನು ಪರಿಷ್ಕರಿಸಿ ಈ ಪರಂಪರೆಯನ್ನು ಮುಂದುವರಿಸಲಾಯಿತು. ಹೀಗಾಗಿ, ಕರ್ನಾಟಕದ ಯಾವುದೇ ವಿಶ್ವವಿದ್ಯಾಲಯಗಳಲ್ಲಿ ಕನ್ನಡ ಭಾಷೆ, ಕನ್ನಡ ಸಾಹಿತ್ಯ ಎಂದು ಎರಡು ಪತ್ರಿಕೆಗಳ ಪಠ್ಯಕ್ರಮಗಳಾಗಿ ಅಭ್ಯಾಸ ಮಾಡಬೇಕಾದ ಕಾರಣಗಳು ಕೂಡ ಯಾಕೆ ಎಂಬುದು ಸ್ಪಷ್ಟವಾಗುವುದಿಲ್ಲ. ಇಂಥ ಪ್ರಶ್ನೆ ಎದುರಾಗುವ ಸಂದರ್ಭದಲ್ಲಿ ಸಾಮಾನ್ಯವಾಗಿ ಕರ್ನಾಟಕದಲ್ಲಿ ಹುಟ್ಟಿ ಕನ್ನಡದ ಬಗ್ಗೆ ಇಷ್ಟಾದರೂ ತಿಳಿದುಕೊಳ್ಳದಿದ್ದರೆ ಹೇಗೆ, ಕನ್ನಡ ಓದಿದ ಕಾರಣಕ್ಕಾಗಿ ಪಂಪ, ರನ್ನ, ಕುಮಾರವ್ಯಾಸ, ಕುವೆಂಪು, ಬೇಂದ್ರೆಯ ಹೆಸರಾದರೂ ಹೇಳದಿದ್ದರೆ ಹೇಗೆ ಎಂಬ ಅಭಿಮಾನ ಸಂಬಂಧಿಯಾದ ಭಾವಾವೇಶದ ಹುಸಿ ಪ್ರಶ್ನೆಗಳನ್ನು ಎದುರಿಗಿಟ್ಟು ಕೈತೊಳೆದುಕೊಳ್ಳಲಾಗುತ್ತದೆ. ಆದರೆ ಇಂಥ ತಿಳುವಳಿಕೆ ಯಾಕೆ ಬೇಕು ಅಥವಾ ಕನ್ನಡ ಭಾಷೆಯ ಬಗೆಗೆ ಎಂಥ ತಿಳುವಳಿಕೆಯ ಅಗತ್ಯವಿದೆ ಎಂಬುದನ್ನು ನಗಣ್ಯವಾಗಿಯೇ ಪರಿಭಾವಿಸಿಕೊಂಡು ಬರಲಾಗಿದೆ. ಅಂತಹ ಹೊಣೆಗಾರಿಕೆಯ ಪ್ರಶ್ನೆಯಿಂದ ಕನ್ನಡ ಪಠ್ಯಕ್ರಮವನ್ನು ದೂರವೇ ಇರಿಸಲಾಗಿದೆ. ಈಗಾಗಲೆ ಪ್ರಾಥಮಿಕ ಹಂತದ ಕನ್ನಡ ಭಾಷಾ ಕಲಿಕೆಯಲ್ಲಿನ ಪಠ್ಯಕ್ರಮಗಳಿಂದ ಮೊದಲು ಮಾಡಿಕೊಂಡು, ಕನ್ನಡ ವ್ಯಾಕರಣದ ಅಭ್ಯಾಸ, ಕನ್ನಡ ಸಾಹಿತ್ಯದ ಅಭ್ಯಾಸ, ಕಾವ್ಯಮೀಮಾಂಸೆಯ ಅಭ್ಯಾಸಗಳಲ್ಲಿ ಒಂದು ಬಗೆಯ ನಿರಂತರತೆಯನ್ನು ಕಂಡುಕೊಂಡಿರುವ ಸಂಸ್ಕೃತ ಪರಂಪರೆಯನ್ನು ಮುಂದುವರಿಸಲು ತೊಡಕಾಗಬಹುದೆಂಬ ಅನಧಿಕೃತ ಉದ್ದೇಶವೂ ಸಹ ಇದರೊಳಗೆ ಪ್ರವೃತ್ತವಾಗಿದೆಯೆಂದೇ ಭಾವಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಸಾಹಿತ್ಯವನ್ನೆ ಮುಖ್ಯಮಾಡಿಕೊಂಡ ಕನ್ನಡ ಭಾಷೆ ಮತ್ತು ಸಾಹಿತ್ಯ ಪಠ್ಯಕ್ರಮಗಳು ಪ್ರತ್ಯೇಕ ಪತ್ರಿಕೆಗಳಾಗಿ ಕಲಿಯಬೇಕಾಗಿರುವುದನ್ನು, ಕಲಿಕಾರ್ಥಿ ಗ್ರಾಹಕರುಗಳನ್ನು ಗುರಿಯಾಗಿಸಿಕೊಂಡು ಸೃಷ್ಟಿಸಲಾದ ಸಾಹಿತ್ಯದ ಮಾರುಕಟ್ಟೆಯ ಹುನ್ನಾರುಗಳನ್ನಾಗಿಯೂ ಅರ್ಥೈಸಿಕೊಳ್ಳಬೇಕಾಗುತ್ತದೆ. ಅಲ್ಲದೆ ಈ ಮಾರುಕಟ್ಟೆಯು ಕಾಪಿರೈಟ್‌ನ ಕಾರಣಕ್ಕಾಗಿ ಯಾರ ಕೈಯಲ್ಲಿದೆ ಎಂಬುದೂ ಸಹ ಮುಖ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಪಠ್ಯಕ್ರಮದ ಭಾಗವಾಗುವ ಸಾಹಿತ್ಯ ಕೃತಿ, ಅದರ ಲೇಖಕರು, ಪಠ್ಯಪುಸ್ತಕ ಸಮಿತಿ ಮತ್ತು ಪ್ರಕಾಶನ ಸಂಸ್ಥೆಯ ಸಂಬಂಧಗಳ ಕುರಿತಾಗಿ ಈಗಾಗಲೇ ವ್ಯಕ್ತವಾಗಿರುವ ಅಭಿಪ್ರಾಯಗಳ ಕುರಿತ ಮೂರನೆ ಅಧ್ಯಾಯದ ಚರ್ಚೆಯನ್ನು ಮತ್ತೊಮ್ಮೆ ಗಮನಕ್ಕೆ ತಂದುಕೊಳ್ಳಬಹುದಾಗಿದೆ. ಹೀಗಾಗಿ ಈ ಹಿನ್ನೆಲೆಯಲ್ಲಿ ಯೋಚಿಸುವಾಗ ಸಾಹಿತ್ಯ ಸಹ ಭಾಷೆಯ ಒಂದು ವಿದ್ಯಮಾನವಾದ್ದರಿಂದ ಸಾಹಿತ್ಯ ಅಥವಾ ಭಾಷಾ ಕಲಿಕೆಯ ಪತ್ರಿಕೆಗಳೆಂದು

ಬೇರೆ ಬೇರೆಯಾಗಿ ಕಲಿಯಬೇಕಾಗಿರುವುದು ಅಸಂಗತ ಎಂಬುದು ಸ್ಪಷ್ಟವಾಗುತ್ತದೆ. ಇದನ್ನು ಒಟ್ಟಿಗೆ ಹೇಗೆ ಪ್ರಯೋಜನಕಾರಿಯಾಗಿ ಯೋಜಿಸಬಹುದೆಂಬುದನ್ನು ತಜ್ಞ ಅಭಿಪ್ರಾಯಗಳ ಮೂಲಕ ತೊಡಕುಗಳನ್ನು ಬಿಡಿಸಿಕೊಳ್ಳುವ ಬಗೆಯನ್ನು ಯೋಚಿಸುವಾಗ ಚರ್ಚೆಗೆ ತೆಗೆದುಕೊಳ್ಳಲಾಗುತ್ತದೆ.

೧೯೬೪-೬೫ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಆರಂಭದ ಹೊತ್ತಿಗಾಗಲೆ ಮೈಸೂರು ವಿಶ್ವವಿದ್ಯಾಲಯದ ಮೂಲಕ ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಕೇಶಿರಾಜನ ಶಬ್ಧಮಣಿದರ್ಪಣ ಕೃತಿಗಳು ಕನ್ನಡಪಠ್ಯಕ್ರಮದಲ್ಲಿ ಪ್ರಮುಖ ಪಾತ್ರ ವಹಿಸಿದ್ದವು. ಬೆಂಗಳೂರು ವಿಶ್ವವಿದ್ಯಾಲಯದ ಮೊದಲ ಕೆಲವು ವರುಶಗಳು ಮೈಸೂರು ವಿಶ್ವವಿದ್ಯಾಲಯದ ಪಠ್ಯಕ್ರಮಗಳನ್ನೆ ಬಳಸಲಾಯಿತು. ಮೊದಲಿಗೆ ಇಲ್ಲಿನ ಕನ್ನಡ ವಿಭಾಗದ ನಿರ್ದೇಶಕರಾಗಿ ಬಂದವರು ಆರ್. ನರಸಿಂಹಾಚಾರ್ಯ, ಬಿಎಂಶ್ರೀ ಪರಂಪರೆಯ ಕೊಂಡಿಯಾದ ರಂ.ಶ್ರೀ. ಮುಗಳಿಯವರು. ಆ ಹೊತ್ತಿಗೆ, ಕನ್ನಡ ಅಭ್ಯಾಸ ಮಾಡುವವರಿಗೆಂದೇ ರಂ.ಶ್ರೀ ಮುಗಳಿ ಕನ್ನಡ ಸಾಹಿತ್ಯ ಚರಿತ್ರೆಯನ್ನು ರಚಿಸಿದ್ದರು. ಕನ್ನಡದ ಪ್ರಮುಖ ಕವಿಗಳೆಂದು ಈಗಾಗಲೇ ಸಾಹಿತ್ಯ ಚರಿತ್ರೆಯ ಹಣೆಪಟ್ಟಿ ಹಚ್ಚಿಕೊಂಡ ಬರಹಗಳು ಮತ್ತು ವಿಮರ್ಶೆಗಳ ಮೂಲಕ ಗುರುತಿಸಲಾಗಿದ್ದ ಕವಿಗಳ ಕಾವ್ಯಗಳು, ಕಾವ್ಯಸಂಗ್ರಹಗಳ ಸಂಪಾದಿತ ಕೃತಿಗಳು ಪ್ರಕಟವಾಗಿದ್ದವು. ಇಂಥ ಇಡೀ ಕಾವ್ಯಗಳು ಅಥವಾ ಕಾವ್ಯಸಂಗ್ರಹಗಳು ಪಠ್ಯಕ್ರಮದ ಭಾಗವಾಗುವುದು ಮೈಸೂರು ವಿಶ್ವವಿದ್ಯಾಲಯದಿಂದಲೇ ಆರಂಭವಾದ ಪರಂಪರೆಯೇ ಆಗಿತ್ತಾದ್ದರಿಂದ ಸುಲಭವೂ ಮತ್ತು ಹೊಸದಾಗಿ ಆರಂಭವಾದ ವಿಶ್ವವಿದ್ಯಾಲಯಕ್ಕೆ ಅನಿವಾರ್ಯವೂ ಆಗಿತ್ತು. ಇದರಿಂದಾಗಿ ಕನ್ನಡಭಾಷಾ ಪಠ್ಯಕ್ರಮದ ಭಾಗವಾಗಿ ಕರ್ನಾಟಕ ಕಾದಂಬರಿ ಸಂಗ್ರಹ, ಗದಾಯುದ್ಧ, ಹರಿಶ್ಚಂದ್ರ ಕಾವ್ಯ ಸಂಗ್ರಹ, ಉದ್ಯೋಗ ಪರ್ವ ಸಂಗ್ರಹ, ಶಬ್ಧಮಣಿದರ್ಪಣಂ, ಯಶೋಧರ ಚರಿತೆಯ ಸಂಗ್ರಹ, ರಾಮಾಶ್ವಮೇದ ಸಂಗ್ರಹ ಮೊದಲಾದ ಪ್ರಾಚೀನ ಕಾವ್ಯಗಳನ್ನು ಅಭ್ಯಾಸಕ್ಕೆಂದು ನಿಗದಿಗೊಳಿಸಲಾಯಿತು.

ರಂ.ಶ್ರೀ.ಮುಗಳಿಯವರ ಆನಂತರದಲ್ಲಿ ಕನ್ನಡ ವಿಭಾಗದ ಹೊಣೆಗಾರಿಕೆಯನ್ನು ಮೈಸೂರು ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕರಾಗಿದ್ದ ಜಿ.ಎಸ್. ಶಿವರುದ್ರಪ್ಪ(೧೯೭೦ರಲ್ಲಿ) ವಹಿಸಿಕೊಂಡರು. ವಿಭಾಗವನ್ನು ಸದಾ ಜೀವಂತವಾಗಿಡಲು ಪ್ರಯತ್ನಿಸಿದ ಜಿ.ಎಸ್.ಎಸ್ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಭಾಶೆ ಮತ್ತು ಸಾಹಿತ್ಯ ಕಲಿಕೆಯ ಪಠ್ಯಕ್ರಮಗಳಲ್ಲಾದ ನಿರಂತರ ಬದಲಾವಣೆಗಳಿಗೆ ಕಾರಣರಾದರು. ಕನ್ನಡ ಭಾಶೆಯ ಕಲಿಕಾರ್ಥಿಗಳಿಗೆಂದು ರೂಪಿಸಿದ ಪ್ರಾಚೀನ ಕಾವ್ಯ ಮಾರ್ಗ ಸಂಕಲನಗಳು, ಸಮಕಾಲೀನ ಕನ್ನಡ ಕವಿತೆ ಸಂಕಲನಗಳು, ವಿಚಾರ ಸಾಹಿತ್ಯ

ಸಂಕಲನಗಳು, ವಿಮರ್ಶೆಯ ದಾರಿ ಸಂಕಲನಗಳು ಮೊದಲಾದವು ಜಿ.ಎಸ್.ಎಸ್ ಅವರ ಪ್ರಯೋಗಶೀಲತೆಗೆ ಸಾಕ್ಷಿಯಾಗಿವೆ. ಅವರ ಈ ಕಾರ್ಯ ಯೋಜನೆಯನ್ನು ಎರಡು ಹಂತಗಳಲ್ಲಿ ಗುರುತಿಸಿಕೊಂಡು ಗಮನಿಸಬಹುದಾಗಿದೆ. ಒಂದು: ಬೆಂಗಳೂರು ವಿಶ್ವವಿದ್ಯಾಲಯವನ್ನು ಪ್ರವೇಶಿಸುವವರೆಗೆ ಪ್ರಾಚೀನ ಕವಿಯೊಬ್ಬನ ಕಾವ್ಯ ಅಥವಾ ಕಾವ್ಯ ಸಂಗ್ರಹ ಪಠ್ಯಕ್ರಮದ ಭಾಗವಾಗಿದ್ದ ಮಾದರಿಯಲ್ಲಿ ಆಧುನಿಕ ಕವಿಯೊಬ್ಬನ ಆಯ್ದ ಕವಿತೆಗಳ ಸಂಗ್ರಹವನ್ನು ಪಠ್ಯಕ್ರಮದ ಭಾಗವಾಗಿ ಪರಿಚಯಿಸುವುದು. ಎರಡು: ಏಕವ್ಯಕ್ತಿ ರಚಿತ ಕಾವ್ಯ ಅಥವಾ ಕಾವ್ಯಸಂಗ್ರಹಗಳಿಗೆ ಬದಲಾಗಿ ವಿವಿಧ ಕವಿಗಳ ಕಾವ್ಯಭಾಗಗಳ ಸಂಗ್ರಹಗಳನ್ನು ಪ್ರಾಚೀನ ಮತ್ತು ಆಧುನಿಕ ಕಾವ್ಯಕ್ಕೆ ಸಂಬಂಧಿಸಿದಂತೆ ರೂಪಿಸಿ ಪರಿಚಯಿಸಿದ್ದು. ಇದೇ ಮಾದರಿಯು ವಿಚಾರ ಸಾಹಿತ್ಯ ಮತ್ತು ವಿಮರ್ಶೆಯನ್ನು ಪರಿಚಯಿಸುವ ಪ್ರಯತ್ನಗಳಲ್ಲೂ ಕಾಣುತ್ತದೆ. ಜಿ.ಎಸ್.ಎಸ್ ಹೀಗೆ ಕನ್ನಡ ತಿಳುವಳಿಕೆಯನ್ನು ಮೂಡಿಸಲು ನಡೆಸಿದ ಹೊಸ ಪ್ರಯೋಗಗಳು ಪಾರಂಪರಿಕ ಕ್ರಮದಲ್ಲಿಯೇ ಕೆಲವು ವೈವಿಧ್ಯತೆಗಳನ್ನು ಕಾಣಿಸುತ್ತವೆ. ಆದರೆ ಇವೂ ಸಹ, ಈ ಹಿಂದಿನ ಓರಿಯಂಟಲಿಸ್ಟ್ ಚಿಂತನೆಯ ಕ್ರಮಗಳನ್ನು ಮೀರುವುದಿಲ್ಲವಾದ್ದರಿಂದ, ಇದು ಕಾವ್ಯ ಸಂಬಂಧ ಪಠ್ಯಕ್ರಮದ ಸ್ವರೂಪದಲ್ಲಾದ ಬದಲಾವಣೆ ಅಷ್ಟೆ ಆಗಿ ಕಾಣುತ್ತದೆಯೇ ಹೊರತು ಸಂಸ್ಕೃತ ಪರಂಪರೆಯ ಚಿಂತನೆಗಳೇ ಇಲ್ಲೂ ಮುಂದುವರಿಯುವುದನ್ನು ಕಾಣುತ್ತೇವೆ. ಅಲ್ಲದೆ, ಅದೇ ವಿದ್ವತ್ ಪರಂಪರೆಯೊಂದು ಆಗೋಚರವಾಗಿ ಹುಸಿ ಸೆಕ್ಯುಲರ್ ನೆಲೆಗಳಲ್ಲಿ ಮತ್ತಷ್ಟು ಪರಿಣಾಮಕಾರಿಯಾಗಿ ಕನ್ನಡಭಾಷಾ ಕಲಿಕೆಯ ತರಗತಿಗಳ ಮೂಲಕ ಪ್ರವಹಿಸುತ್ತಾ ಹೋಗುತ್ತದೆ. ಜಿ.ಎಸ್.ಎಸ್ ರವರ 'ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ' ಕೃತಿಗಳ ಭಾಗವಾಗಿ ಬಂದ 'ಕನ್ನಡ ಸಾಹಿತ್ಯ ಸಮೀಕ್ಷೆ' ಮತ್ತು 'ಕಾವ್ಯಾರ್ಥ ಚಿಂತನ' ಕೃತಿಗಳನ್ನು ಗಮನಿಸಿದಲ್ಲಿ ಇದು ಮತ್ತಷ್ಟು ಸ್ಪಷ್ಟವಾಗುತ್ತದೆ. ಇಲ್ಲಿ ಒಂದು ಕಾಲದ ಸಾಹಿತ್ಯ, ಭಾಶೆ, ಛಂದಸ್ಸು ಮತ್ತೊಂದು ಕಾಲದ ಸಾಹಿತ್ಯ, ಭಾಶೆ, ಛಂದಸ್ಸಿಗೆ ಪ್ರೇರಕವಾಗುವುದನ್ನು ಗಾಢವಾಗಿ ಕಟ್ಟುತ್ತಾ ಹೋಗುವುದನ್ನು ಗಮನಿಸಬಹುದಾಗಿದೆ. ವಿವಿಧ ಲೇಖಕರಿಂದ ಬರೆಸಿದ ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯ ತಮ್ಮ ಮುನ್ನುಡಿಯಲ್ಲಿ ಕೂಡ ಅನ್ಯಶಿಸ್ತುಗಳ ಮೂಲಕ ಈಗಾಗಲೇ ಅಧಿಕೃತಗೊಂಡಿರುವ ಕನ್ನಡ ಸಾಹಿತ್ಯ ಪರಂಪರೆಯ ತಿಳುವಳಿಕೆಯನ್ನು ವಿಸ್ತಾರಗೊಳಿಸುವುದರ ಕುರಿತೇ ಜಿಎಸ್ಎಸ್ ಮಾತನಾಡುತ್ತಾರೆ. ಈ ವಿವರಣೆಗಳಿಗೆ ಉದಾಹರಣೆಯಾಗಿ ಇವರ ಪ್ರಧಾನ ಸಂಪಾದಕತ್ವದಲ್ಲಿ ತಯಾರಾದ ಪ್ರಾಚೀನ ಮತ್ತು ಆಧುನಿಕ ಕಾವ್ಯ ಸಂಕಲನಗಳನ್ನು ಪರಿಶೀಲಿಸಬಹುದಾಗಿದೆ.

ಸಾಮಾನ್ಯವಾಗಿ ೧೯೭೧-೭೨ರವಗೆ ಮೊದಲ ವರುಶದ ಪದವಿ ತರಗತಿಯಲ್ಲಿಯೇ ಪ್ರಾಚೀನ ಕಾವ್ಯ ಮತ್ತು ಆಧುನಿಕ ಕಾವ್ಯವನ್ನು ಪಠ್ಯಕ್ರಮಗಳ ಮೂಲಕ ಪರಿಚಯಿಸುತ್ತಿದ್ದುದು ಕಾಣುತ್ತದೆ. ಜಿ.ಎಸ್.ಎಸ್ ಕನ್ನಡ ವಿಭಾಗಕ್ಕೆ ಬಂದ ನಂತರದಲ್ಲಿ ಮೊದಲ ಪದವಿಯಲ್ಲಿ ಪ್ರಾಚೀನ ಕಾವ್ಯವನ್ನು, ಎರಡನೇ ವರುಶದ ಪದವಿಯಲ್ಲಿ ಆಧುನಿಕ ಕಾವ್ಯವನ್ನು ಪಠ್ಯಕ್ರಮವಾಗಿ ಜಾರಿಗೆ ತರುತ್ತಾರೆ. ಪ್ರಾಚೀನ ಪಠ್ಯಗಳು ಈ ಹಿಂದಿನಂತೆ ಸಾಮಾನ್ಯವಾಗಿ ಏಕವ್ಯಕ್ತಿ ರಚಿತ ಕಾವ್ಯಭಾಗ ಅಥವ ಕಾವ್ಯಸಂಗ್ರಹಗಳ ಪಠ್ಯಕ್ರಮಗಳಾಗಿ ಕೆಲವು ವರುಶಗಳು ಮುಂದುವರಿದಿದ್ದವು. ನಂತರ ೧೯೭೭ರಲ್ಲಿ **ಹಳಗನ್ನಡ ಕಾವ್ಯ ಸಂಗ್ರಹ-೧** ಮತ್ತು ೧೯೭೮ರಲ್ಲಿ **ಹಳಗನ್ನಡ ಕಾವ್ಯ ಸಂಗ್ರಹ-೨** ಸಂಕಲನಗಳು ಮೊದಲ ವರುಶದ ಪದವಿಯ ಪಠ್ಯಕ್ರಮವಾದವು. ಶಿವರುದ್ರಪ್ಪನವರ ನೇತೃತ್ವದಲ್ಲಿ ಸಿ.ಮಹಾದೇವಪ್ಪ, ಬಿ. ರಾಮಚಂದ್ರ ಗೌಡ ಮತ್ತು ಎಸ್. ಶ್ರೀನಿವಾಸನ್ ಸಮಿತಿ ಈ ಪಠ್ಯಕ್ರಮಗಳನ್ನು ಸಂಪಾದಿಸಿದ್ದಾರೆ. **ಆಧುನಿಕ ಕವಿತೆಯ ಏಕವ್ಯಕ್ತಿ ರಚಿತ ಸಂಗ್ರಹ**ಗಳು ನಿಯಮಿತವಾಗಿ ಎರಡನೆಯ ವರುಶದ ಪದವಿಯಲ್ಲಿ ಪಠ್ಯಕ್ರಮವಾಗುವಂತೆ ಯೋಜಿಸಲಾಯಿತು. ಕುವೆಂಪು, ಬೇಂದ್ರೆ, ಅಡಿಗ, ಚನ್ನವೀರ ಕಣವಿ, ಜಿ.ಎಸ್.ಎಸ್. ವಿನಾಯಕ, ನಿಸಾರ ಅಹಮದ್, ಕೆ.ಎಸ್. ನರಸಿಂಹಸ್ವಾಮಿ ಮೊದಲಾದವರ ಕವಿತೆಗಳ ಆಯ್ದ ಸಂಗ್ರಹಗಳು ಹೀಗೆ ೧೯೭೭-೭೮ರವರೆಗೆ ಪಠ್ಯಕ್ರಮದ ಭಾಗವಾಗಿರುವುದನ್ನು ಗಮನಿಸಬಹುದಾಗಿದೆ.

೧೯೭೮-೭೯ರಿಂದಾಚೆಗೆ ಪದವಿಯ ಪಠ್ಯಕ್ರಮಗಳಲ್ಲಿ ಮತ್ತೊಂದಿಶ್ಟು ಬದಲಾವಣೆಯನ್ನು ಗುರುತಿಸಬಹುದಾಗಿದೆ. ಆಧುನಿಕಪೂರ್ವದ ರಚನೆಗಳಿಂದ ಆಯ್ದ ಕಾವ್ಯಭಾಗಗಳನ್ನು ಒಳಗೊಂಡ **ಮಧ್ಯಕಾಲೀನ ಕನ್ನಡ ಕವಿತೆ**ಯ ಎರಡು ಸಂಕಲನಗಳು, **ಪ್ರಾಚೀನ ಕಾವ್ಯ ಮಾರ್ಗ** ಹೆಸರಿನ ನಾಲ್ಕು ಸಂಕಲನಗಳು ಮೊದಲ ವರುಶದ ಪದವಿಯ ಕಲಿಕಾರ್ಥಿಗಳಿಗೂ, ಆಧುನಿಕ ಕವಿಗಳ ಆಯ್ದ ಕವಿತೆಗಳನ್ನೊಳಗೊಂಡ **ಸಮಕಾಲೀನ ಕನ್ನಡ ಕವಿತೆ** ಹೆಸರಿನ ನಾಲ್ಕು ಸಂಕಲನಗಳು ಎರಡನೆ ವರುಶದ ಪದವಿ ಕಲಿಕಾರ್ಥಿಗಳಿಗೂ ಪಠ್ಯಕ್ರಮವಾಗಿ ಜಾರಿಗೆ ತರಲಾಯಿತು. ಈ ಕಾವ್ಯ ಸಂಕಲನಗಳ ಮೂಲಕ ಪಠ್ಯಕ್ರಮದಲ್ಲಿ ಆದ ಬದಲಾವಣೆಯೆಂದರೆ ಅಲ್ಲಿಯವರೆಗೂ ಯಾವುದೊ ಒಬ್ಬ ಕವಿಯ ಕಾವ್ಯವನ್ನು ಅಥವಾ ಕವಿತೆಗಳನ್ನು ಅಭ್ಯಾಸ ಮಾಡುವ ಪದ್ಧತಿಯು ತಪ್ಪಿದ್ದಲ್ಲದೆ ಅನೇಕ ಕವಿಗಳು ಏಕಕಾಲಕ್ಕೆ ಪಠ್ಯಕ್ರಮದಲ್ಲಿ ಪ್ರವೇಶ ಪಡೆಯುವಂತಾಯಿತು. ಇದು ಆ ಸಂದರ್ಭಕ್ಕೆ ಮಹತ್ವದ ಬದಲಾವಣೆಯಾಗಿಯೂ ಕಾಣುತ್ತದೆ. ಕರ್ನಾಟಕದ ಇತರೆ ವಿಶ್ವವಿದ್ಯಾಲಯಗಳಿಗೆ ಮಾದರಿಯೂ ಆಗುತ್ತದೆ. ಆದರೆ ಮೈಸೂರು ವಿಶ್ವವಿದ್ಯಾಲಯದ ಪಠ್ಯಕ್ರಮಗಳ ಮೂಲಕ ಗುರುತಿಸಿಕೊಂಡಿದ್ದ ಚಾರಿತ್ರಿಕವಾದ ಕಾಲಾನುಕ್ರಮಣಿಕೆ ಇಲ್ಲಿಯೂ

ಮುಂದುವರಿಯಿತು. ಪ್ರಾಚಿನ ಕಾವ್ಯದ ಪಠ್ಯಭಾಗಗಳು ಒಂಬತ್ತು ಹತ್ತನೆ ಶತಮಾನದಿಂದ ಅಥವಾ ವಡ್ಡಾರಾದನೆ, ಪಂಪನ ಕಾವ್ಯಭಾಗಗಳಿಂದ ಆರಂಭಗೊಂಡು ಬಹುಮಟ್ಟಿಗೆ ರನ್ನ, ನಾಗವರ್ಮ, ನಾಗಚಂದ್ರ, ವಚನಕಾರರು, ಹರಿಹರ, ರಾಘವಾಂಕ, ಜನ್ನ, ಕುಮಾರವ್ಯಾಸ, ಕೀರ್ತನೆಕಾರರು, ಚಾಮರಸ, ಲಕ್ಷ್ಮೀಶ, ರತ್ನಾಕರವರ್ಣಿಯರ ಕಾವ್ಯಗಳ ಆಯ್ದ ಭಾಗಗಳು ಒಳಗೊಂಡಿರುವಂತೆ ಯೋಜಿಸಿರುವುದನ್ನು ಗಮನಿಸಬಹುದಾಗಿದೆ[೧]. ಆಧುನಿಕ ಕವಿತೆಗಳನ್ನೊಳಗೊಂಡ ಕವಿತೆಗಳ ಸಂಕಲನಗಳಲ್ಲಿಯೂ ಇದೇ ಮಾದರಿಯನ್ನು ಅನುಸರಿಸಿದ್ದು, ಬಿಎಂಶ್ರಿ, ಪಂಜೆ, ರಾಜರತ್ನಂ, ಬೇಂದ್ರೆ, ಕುವೆಂಪು, ಪುತಿನ, ಕೆಎಸ್‌ನ, ಜಿಎಸ್‌ಎಸ್, ಕಣವಿ, ಅಡಿಗ, ರಾಮಚಂದ್ರ ಶರ್ಮ ಹೀಗೆ ಕವಿಗಳ ಕಾಲಾನುಕ್ರಮ ಸರಣಿಯನ್ನು ಮೀರುವುದಿಲ್ಲ[೨]. ಇದೇ ಮಾದರಿಯನ್ನು ಈವರೆಗೂ ಪಠ್ಯಕ್ರಮಗಳಲ್ಲಿ ಅನುಸರಿಸುತ್ತಾ ಬಂದಿರುವುದನ್ನು ಕರ್ನಾಟಕದ ಯಾವುದೇ ವಿಶ್ವವಿದ್ಯಾಲಯದ ಕನ್ನಡ ಪಠ್ಯಕ್ರಮವನ್ನು ಗಮನಿಸಿದರೂ ಮನವರಿಕೆಯಾಗುತ್ತದೆ[೩]. ಇತರೆ ವಿಶ್ವವಿದ್ಯಾಲಯಗಳು ಪಠ್ಯಕ್ರಮಕ್ಕೆ ನಿಯಮಿತವಾದ ಇಂತಹ ಸಂಕಲನಗಳಲ್ಲಿ ಪ್ರಾಚೀನ ಮತ್ತು ಆಧುನಿಕ ಕಾವ್ಯಗಳನ್ನು ಒಟ್ಟಿಗೆ ಸಂಯೋಜಿಸುತ್ತಿದ್ದವು. ಜಿಎಸ್‌ಎಸ್ ಇದನ್ನು ಮೊದಲ ಮತ್ತು ಎರಡನೆ ವರುಶದ ಪದವಿಯಲ್ಲಿ ಪ್ರತ್ಯೇಕವಾಗಿ ಅಭ್ಯಾಸಕ್ಕೆ ಅನುಕೂಲವಾಗುವಂತೆ ತಮ್ಮ ಅವಧಿಯಲ್ಲಿ ಯೋಜಿಸಿದರು.

ಬೆಂಗಳೂರು ವಿಶ್ವವಿದ್ಯಾಲಯವೊಂದರಲ್ಲಿಯೇ ಹೀಗೆ ೧೯೬೪-೬೫ರಿಂದ ೨೦೦೬-೦೭ರವರೆಗೆ ೩೦೦ರಕ್ಕೂ ಹೆಚ್ಚು ಕನ್ನಡ ಸಾಹಿತ್ಯ ಕೃತಿಗಳನ್ನು ಪದವಿ ತರಗತಿಗಳಲ್ಲಿ ಕನ್ನಡ ಭಾಶಾ ಕಲಿಕೆಯ ಪಠ್ಯಕ್ರಮಗಳಾಗಿ ಬಳಸಲಾಗಿದೆ[೪]. ಪ್ರಾಚೀನದಲ್ಲಿ ರಚನೆಯಾಗಿ ಸುಮಾರು ನೂರೈವತ್ತು ವರುಶಗಳ ವಸಾಹತು ಆಧುನಿಕತೆಯ ಅವಧಿಯಲ್ಲಿ ಸಂಪಾದನೆ, ಸಂಕಲನ, ಸಂಗ್ರಹಗಳ ಮೂಲಕ ಮರುರೂಪುಪಡೆದ ಮತ್ತು ಆಧುನಿಕದಲ್ಲಿ ರಚನೆಯಾದ ಪಠ್ಯಗಳು ಇದರಲ್ಲಿ ಸೇರಿವೆ. ಇದನ್ನು ಪ್ರಾಚೀನ ಸಾಹಿತ್ಯ ಮತ್ತು ಆಧುನಿಕ ಸಾಹಿತ್ಯ ಎಂದೇ ಕಲಿಕೆಯ ಸಂದರ್ಭಕ್ಕೆ ವಿಂಗಡಿಸಿಕೊಡಲಾಗಿದೆ. ಹೀಗೆ ಪ್ರಾಚೀನ ಮತ್ತು ಆಧುನಿಕವೂ ಸೇರಿದಂತೆ ಸುಮಾರು ೫೦೦ರಕ್ಕೂ ಹೆಚ್ಚು ಕನ್ನಡ ಬರೆಹಗಾರರ ಸಾಹಿತ್ಯ ಬರಹಗಳು ಸರಿಸುಮಾರು ೪೫ ವರುಶದ ಪಠ್ಯಕ್ರಮದಲ್ಲಿ ಸೇರಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಕಲಿಕೆಯ ಭಾಗವಾಗಿ ಹೊಣೆಗಾರಿಕೆಯನ್ನು ತೆಗೆದುಕೊಂಡಿವೆ. ಇದರಲ್ಲಿ ೨೫೦ಕ್ಕೂ ಹೆಚ್ಚು ಏಕವ್ಯಕ್ತಿ ರಚನೆಗಳಾದ ಕಾವ್ಯ, ಕಾದಂಬರಿ, ನಾಟಕ, ಸಣ್ಣಕತೆ, ಪ್ರಬಂಧ, ವಿಚಾರ ಸಾಹಿತ್ಯ, ವಿಮರ್ಶೆ, ಜೀವನ ಚರಿತ್ರೆ, ಆತ್ಮಚರಿತ್ರೆ, ಪ್ರವಾಸ ಕಥನ ಮೊದಲಾದ ಪಠ್ಯಗಳು ಬಳಕೆಯಾಗಿದ್ದು, ವಿವಿದ ಲೇಖಕರಿಂದ ರಚಿತವಾಗಿ

ಕ್ರೋಢೀಕರಿಸಲ್ಪಟ್ಟ ಕಾವ್ಯ, ಸಣ್ಣಕತೆ, ಪ್ರಬಂಧ, ವಿಮರ್ಶೆ, ವಿಚಾರ ಸಾಹಿತ್ಯ ಕುರಿತ ಸುಮಾರು ೫೦ಕ್ಕೂ ಹೆಚ್ಚು ಸಂಕಲನಗಳು ಸೇರಿವೆ. ಈ ಸಂಕಲನಗಳು ೧೦೦ಕ್ಕೂ ಹೆಚ್ಚು ತಜ್ಞರಿಂದ ಪರಿಷ್ಕಾರ ಅಥವಾ ಸಂಪಾದನೆಗೆ ಒಳಗಾಗಿ ಕನ್ನಡ ಭಾಷಾ ಕಲಿಕೆಯ ಪಠ್ಯಕ್ರಮಕ್ಕಾಗಿಯೇ ಜೋಡಿಸಿದವುಗಳಾಗಿವೆ.

ಹೀಗೆ ಪಠ್ಯಪುಸ್ತಕ ಸಮಿತಿಗಳ ತಜ್ಞರಿಂದ ಅಧಿಕೃತವೆನಿಸಿಕೊಂಡ ಕೃತಿಗಳು ಪಠ್ಯಕ್ರಮದೊಳಗೆ ಪ್ರವೇಶ ಪಡೆಯುವುದರ ಮೂಲಕ **ಇವರೇ** ಕನ್ನಡ ಸಾಹಿತ್ಯ ಪರಂಪರೆಯ ನಿರ್ಮಾಪಕರು ಎಂಬುದು ಪಠ್ಯಕ್ರಮಗಳ ಸಂದರ್ಭದಲ್ಲಿ ಮತ್ತಷ್ಟು ಅಧಿಕೃತವಾಗಿಸುತ್ತ ಹೋಗುವ ಪ್ರಕ್ರಿಯೆಯನ್ನು ಗಮನಿಸುತ್ತಲೇ ಪಠ್ಯಗಳ ಸಾಮಾಜಿಕ ಪ್ರತಿನಿಧೀಕರಣವನ್ನು ಗುರುತಿಸುವ ಚರ್ಚೆಯನ್ನು ಮುಂದುವರಿಸಬಹುದಾಗಿದೆ. ಇದಕ್ಕೆ ಪ್ರಾಚೀನ ಸಾಹಿತ್ಯವನ್ನು ಉದಾಹರಣೆಯಾಗಿ ಇಲ್ಲಿ ತೆಗೆದುಕೊಳ್ಳಬಹುದು.

ಈ ಹಿಂದೆಯೇ ವಿವರಿಸಿಕೊಂಡಿರುವಂತೆ ಪ್ರಾಚೀನ ಎನ್ನುವುದು ವಸಾಹತು ಆಧುನಿಕತೆಯ ಸಂದರ್ಭದಲ್ಲಿ ವಸಾಹತುವನ್ನು ಎದುರುಗೊಳ್ಳಲು ಕಲ್ಪಿಸಿ ಕಟ್ಟಿಕೊಂಡ ಪರಂಪರೆ. ಓರಿಯಂಟಲಿಸ್ಟ್ ಚಿಂತನೆಗಳಲ್ಲಿ ಆರ್. ನರಸಿಂಹಾಚಾರ್ಯರು ಕಾಲ, ದೇಶ, ಧರ್ಮಗಳ ಮೂಲಕ ಕಲ್ಪಿಸಿದ ಕವಿಚರಿತೆಯ ಪರಂಪರೆ. ಬಿ.ಎಂ.ಶ್ರೀ ಕನ್ನಡ ಕೈಪಿಡಿಯ ಮೂಲಕ ಪಠ್ಯಕ್ರಮದ ಭಾಗವಾಗಿ ಜಾರಿಗೊಳಿಸಿದ ಪರಂಪರೆ. ಸಮಗ್ರ ಸಾಹಿತ್ಯ ಚರಿತ್ರೆ ಮತ್ತು ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆಯ ಮೂಲಕ ಜಿ.ಎಸ್.ಎಸ್ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಸಾಹಿತ್ಯ ಚರಿತ್ರೆಗಳ ಮೂಲಕ ಹಾ.ಮಾ.ನಾಯಕ ಮೊದಲಾದವರು ಮುಂದುವರಿಸಿದ ಪರಂಪರೆ ಎನ್ನುವುದನ್ನು ಮತ್ತೊಮ್ಮೆ ಸ್ಪಷ್ಟಪಡಿಸಿಕೊಳ್ಳಬೇಕಾಗುತ್ತದೆ. ಇದಕ್ಕೆ ಅನುಕೂಲವಾಗುವಂತೆ ಕನ್ನಡವನ್ನು ಕಟ್ಟಿಕೊಡಲಾಗುತ್ತದೆ. ವಿಮರ್ಶಕರಿಂದ ಅಧಿಕೃತಗೊಂಡ ಶಾಸನಗಳು, ವಡ್ಡಾರಾಧನೆ, ಗದಾಯುದ್ಧ, ಶಬ್ಧಮಣಿದರ್ಪಣ, ಕರ್ನಾಟಕ ಕಾದಂಬರಿ, ವಚನಗಳು, ರಗಳೆಗಳು, ಹರಿಶ್ಚಂದ್ರ ಕಾವ್ಯ, ಕುಮಾರವ್ಯಾಸ ಭಾರತ, ಪ್ರಭುಲಿಂಗಲೀಲೆ, ಜೈಮಿನಿ ಭಾರತ, ಭರತೇಶ ವೈಭವ, ಕೀರ್ತನೆಗಳು, ರಾಮಾಶ್ವಮೇದ ಕಾವ್ಯ ಮೊದಲಾದ ಸಂಗ್ರಹಗಳು ಅಥವಾ ಕಾವ್ಯಭಾಗಗಳನ್ನು ಪಠ್ಯಕ್ರಮವಾಗಿಸಲಾಯಿತು. ಮುಂದುವರಿದು ಆಧುನಿಕವಾಗಿ ಇದನ್ನು ಬಿಎಂಶ್ರಿ, ಗೋವಿಂದ ಪೈ, ಪಂಜೆ, ಬೇಂದ್ರೆ, ಕುವೆಂಪು, ಪುತಿನ, ಮಾಸ್ತಿ, ಚನ್ನವೀರ ಕಣವಿ, ಜಿಎಸ್ಎಸ್, ವಿನಾಯಕ, ರಾಜರತ್ನಂ, ಕೆಎಸ್ನ, ಅಡಿಗ, ಕಂಬಾರ, ನಿಸಾರ್, ಲಂಕೇಶ್, ರಾಮಚಂದ್ರಶರ್ಮ, ಎಕ್ಕುಂಡಿ ಮೊದಲಾದವರ ಕವಿತೆಗಳನ್ನು ಪ್ರಾತಿನಿಧಿಕವಾಗಿಸಿ ಕಟ್ಟಿಕೊಡಲಾಗುತ್ತದೆ. ಇದನ್ನು ಪಠ್ಯಕ್ರಮಗಳ

ರಚನೆ ಮತ್ತು ಸಂಪಾದನೆಗೆ ಸಂಬಂಧಿಸಿದ ಭಾಗವಹಿಸುವಿಕೆಯ ಮತ್ತೊಂದು ಆಯಾಮದ ಮೂಲಕವೂ ಚರ್ಚೆಗೆ ತೆಗೆದುಕೊಳ್ಳಬಹುದಾಗಿದೆ.

**ಪಠ್ಯಗಳ ರಚನೆಕಾರರ ಕುರಿತ ಮಾಹಿತಿ,**

ಬೆಂಗಳೂರು ವಿಶ್ವವಿದ್ಯಾಲಯದ ಪಠ್ಯಕ್ರಮಗಳಾಗಿ ನಿಯಮಿತವಾದ ಪಠ್ಯಗಳ ಪ್ರಕಾನುಸಾರವಾದ ಮಾಹಿತಿಯನ್ನು ಒದಗಿಸುತ್ತ, ಇವುಗಳ ರಚನೆಕಾರರು ಸಾಮಾಜಿಕ ಶ್ರೇಣಿಯ ಯಾವ ಜಾತಿ ಸಮುದಾಯಗಳಿಂದ ಬಂದವರು ಎಂಬುದನ್ನು ಗುರುತಿಸಬಹುದಾಗಿದೆ.

**ಟೇಬಲ್–೧**

| ಪಠ್ಯಕ್ರಮ | | ಬ್ರಾಹ್ಮಣ | ಲಿಂಗಾಯತ | ಒಕ್ಕಲಿಗ | ಇತರೆ |
|---|---|---|---|---|---|
| ಏಕವ್ಯಕ್ತಿ ರಚಿತ ಪ್ರಾಚೀನ ಕಾವ್ಯ ಸಂಗ್ರಹಗಳು | **೧೮** | ೦೭ | ೦೫ | – | ೦೬ |
| ವಿವಿಧ ಕವಿಗಳ ಕಾವ್ಯಗಳಿಂದ ಆಯ್ದ ಭಾಗಗಳ ಸಂಕಲನಗಳು | **೧೬** | ೦೬ | ೩೨ | – | ೧೦ |
| ಏಕವ್ಯಕ್ತಿ ರಚಿತ ಆಧುನಿಕ ಕವಿತೆಗಳ ಸಂಕಲನಗಳು | **೧೩** | ೦೭ | ೦೨ | ೦೨ | ೦೨ |
| ವಿವಿಧ ಕವಿಗಳ ಆಯ್ದ ಆಧುನಿಕ ಕವಿತೆಗಳ ಸಂಕಲನಗಳು | **೧೩** | ೩೩ | ೦೭ | ೦೩ | ೧೦ |
| ಕನ್ನಡದ ಸ್ವತಂತ್ರ ನಾಟಕಗಳು | **೫೧** | ೨೮ | ೧೨ | ೦೫ | ೦೬ |
| ಅನುವಾದ/ರೂಪಾಂತರ ನಾಟಕಗಳು | **೩೨** | ೧೭ | ೦೬ | ೦೮ | ೦೧ |
| ಕನ್ನಡದ ಸ್ವತಂತ್ರ ಕಾದಂಬರಿಗಳು | **೪೨** | ೨೯ | ೦೪ | ೦೧ | ೦೮ |
| ಅನುವಾದಿತ ಕನ್ನಡ ಕಾದಂಬರಿಗಳು | **೦೫** | ೦೪ | – | – | ೦೧ |
| ಏಕವ್ಯಕ್ತಿ ರಚಿತ ಕನ್ನಡ ಕಥಾ ಸಂಕಲನಗಳು | **೩೦** | ೧೮ | ೦೧ | ೦೯ | ೦೨ |
| ವಿವಿಧ ಕತೆಗಾರರ ಆಯ್ದ ಕತೆಗಳ ಸಂಕಲನಗಳು | **೦೨** | ೨೫ | ೦೧ | ೦೯ | ೦೫ |
| ಏಕವ್ಯಕ್ತಿ ರಚಿತ ಪ್ರಬಂಧ ಸಂಕಲನಗಳು | **೨೫** | ೨೦ | ೦೨ | ೦೨ | ೦೧ |
| ವಿವಿಧ ಬರಹಗಾರರ ಆಯ್ದ ಪ್ರಬಂಧ ಸಂಕಲನಗಳು | **೦೫** | ೭೬ | ೦೬ | ೧೧ | ೦೫ |
| ಜೀವನ/ಆತ್ಮ ಚರಿತ್ರೆ/ವ್ಯಕ್ತಿಚಿತ್ರ ಗಳು | **೧೭** | ೦೮ | ೦೪ | ೦೨ | ೦೩ |
| ಪ್ರವಾಸ ಕಥನಗಳು | **೦೮** | ೦೬ | ೦೧ | – | ೦೧ |
| ಏಕವ್ಯಕ್ತಿ ರಚಿತ ವಿಚಾರ ಸಾಹಿತ್ಯ ಸಂಕಲನಗಳು | **೦೨** | ೦೨ | – | – | – |
| ವಿವಿಧ ಚಿಂತಕರ ಆಯ್ದ ವಿ. ಸಾ. ಸಂಕಲನಗಳು | **೦೮** | ೨೭ | ೦೯ | ೦೬ | ೨೪ |
| ಏಕವ್ಯಕ್ತಿ ರಚಿತ ವಿಮರ್ಶೆಯ ಬರಹದ ಸಂಕಲನಗಳು | **೦೫** | ೦೩ | ೦೧ | – | ೦೧ |
| ವಿವಿಧ ವಿಮರ್ಶಕರ ಆಯ್ದ ವಿಮರ್ಶಾ ಬರಹಗಳ ಸಂಕಲನಗಳು | **೦೨** | ೧೧ | ೦೩ | – | ೦೨ |
| ಇತರೆ | **೦೪** | ೧೭ | ೦೩ | ೦೨ | – |
| ಒಟ್ಟು | **೨೯೮** | **೩೪೬** | **೯೯** | **೬೦** | **೮೯** |

ಬೆಂಗಳೂರು ವಿಶ್ವವಿದ್ಯಾಲಯದ ವ್ಯಾಪ್ತಿಯಲ್ಲಿ ೧೯೬೪-೬೫ರಿಂದ ೨೦೦೬-೦೭ರವರೆಗೆ ನಿಯಮಿಸಿರುವ ಕನ್ನಡ ಭಾಶೆ ಕುರಿತ ಪಠ್ಯಕ್ರಮದಲ್ಲಿ ಬಳಸಿದ ಒಟ್ಟು ಪಠ್ಯಗಳ ಸಂಖ್ಯೆ ಸರಿಸುಮಾರು ೩೦೦. ಇದರಲ್ಲಿ **ಏಕವ್ಯಕ್ತಿ ರಚಿತ** ಪಠ್ಯಗಳು ಸರಿಸುಮಾರು **೨೫೧** ಆಗಿದ್ದರೆ ವಿವಿಧ ಲೇಖಕರು ಬರೆದ ಆಯ್ದ ಪಠ್ಯ **ಸಂಕಲನಗಳು ೫೫**. ಈ ಪಠ್ಯಕ್ರಮಗಳಲ್ಲಿನ ಒಟ್ಟು ಪಠ್ಯಗಳ ಬರಹಗಾರರು ಸರಿಸುಮಾರು ೫೯೪. ಇದರಲ್ಲಿ ಸಾಮಾಜಿಕ ಪ್ರತಿನಿಧೀಕರಣದ ಬಹುಮುಖ್ಯ ನೆಲೆಯಾದ **ಗಂಡು** ಮತ್ತು **ಹೆಣ್ಣಿನ** ಭಾಗವಹಿಸುವಿಕೆಯು ಈ ಪಠ್ಯಕ್ರಮಗಳ ಸಂದರ್ಭದಲ್ಲಿ **೫೫೯-೩೫** ಇದೆ.

**ಟೇಬಲ್-೨**

| **ಪಠ್ಯಕ್ರಮದಲ್ಲಿ ಭಾಗವಹಿಸಿರುವ ಒಟ್ಟು ಬರಹಗಾರರು-೫೯೪** |
|---|
| ಗಂಡಸರು-೫೫೯ |
| ಹೆಂಗಸರು-೩೫ |




ಹೀಗೆ ಭಾಗವಹಿಸಿರುವ ಹೆಂಗಸರಲ್ಲಿ ಸಂಸ್ಕೃತ ಪರಂಪರೆಯ ಜೀವನಕ್ರಮದಿಂದ ಬಂದವರು ೦೬ ಜನರು, ಶೈವ/ಲಿಂಗಯಾತ ಸಮುದಾಯದವರು(ಬಹುಮಟ್ಟಿಗೆ ವಚನಕಾರರು) ೨೪ ಮಂದಿ ಮತ್ತು ಇತರರು ೫ ಮಂದಿ ಸೇರಿದ್ದಾರೆ

ಒಟ್ಟು ೫೯೪ ಬರಹಗಾರರಲ್ಲಿ ಸುಮಾರು **೩೪೬** ಬರಹಗಾರು **ಸಂಸ್ಕೃತ ಪರಂಪರೆಯ ಪ್ರತಿನಿಧಿ**ಗಳಾಗಿದ್ದರೆ, ಉಳಿದ ಎಲ್ಲಾ ಸಮುದಾಯಗಳಿಂದ ಬಂದವರು ಸರಿಸುಮಾರು ೨೪೮ ಆಗಿದ್ದಾರೆ ಎನ್ನುವ ಮಾಹಿತಿಯೇ ಕನ್ನಡ ಪರಂಪರೆಯ ಅಧಿಕೃತ ವಕ್ತಾರಿಕೆಯ ಹಿಂದಿನ ಹುನ್ನಾರುಗಳನ್ನು ಬಯಲುಮಾಡುತ್ತದೆ. ಈ ಮೂಲಕ ಸಾಂಸ್ಕೃತಿಕ ಯಜಮಾನಿಕೆಯನ್ನು ಕಟ್ಟುವ ಸಾಮಾಜಿಕ ನೆಲೆಯ ಪ್ರತಿನಿಧೀಕರಣವನ್ನು ಪಠ್ಯಕ್ರಮಗಳ ಮಾಹಿತಿ ಕುರಿತ ಈ ಕೆಳಗಿನ ನಕ್ಶೆಯು ಮತ್ತಷ್ಟು ಸ್ಪಷ್ಟನೆಯನ್ನು ಒದಗಿಸುತ್ತದೆ;

**ಟೇಬಲ್-೩**

| **ಪಠ್ಯಕ್ರಮದಲ್ಲಿ ಭಾಗವಹಿಸಿರುವ ಒಟ್ಟು ಬರಹಗಾರರು-೫೯೪** |
|---|
| ಬ್ರಾಹ್ಮಣ-೩೪೬ |
| ಲಿಂಗಾಯತ-೯೯ |
| ಒಕ್ಕಲಿಗ-೬೦ |
| ಇತರರು-೮೯ |

ಕಲಿಕೆಯ ಪಠ್ಯಗಳ ಬರಹಗಾರರ ಸಾಮಾಜಿಕ ಪ್ರತಿನಿಧೀಕರಣ ಬಿಂಬಿಸುವ ನಕ್ಷೆ




ಟೇಬಲ್-೩ರ ಮಾಹಿತಿಯು ಕನ್ನಡ ಭಾಶೆಯನ್ನು ನಿರ್ಧರಿಸುವಲ್ಲಿ ಸಂಸ್ಕೃತ ಪರಂಪರೆಯ ಭಾಗವಹಿಸುವಿಕೆಯು ನಿರ್ಣಾಯಕ ಪಾತ್ರ ವಹಿಸಿರುವುದನ್ನು ಸೂಚಿಸುತ್ತದೆ. ಇನ್ನುಳಿದಂತೆ ಮುಖ್ಯವಾಗಿ ಲಿಂಗಾಯತ ಮತ್ತು ಒಕ್ಕಲಿಗ ಸಮುದಾಯದ ಪಾತ್ರವು ಕನ್ನಡ ಭಾಶೆಯ

ಕಲಿಕೆಯನ್ನು ನಿರ್ಣಯಿಸುವಲ್ಲಿ ಇತರೆ ಸಮುದಾಯಗಳಿಗಿಂತ ಮೇಲುಸ್ತರದಲ್ಲಿರುವುದನ್ನು ಗುರುತಿಸಬಹುದಾಗಿದೆ;

ಈ ಮೇಲಿನ ಟೇಬಲ್-೧ರ ಮಾಹಿತಿಯಲ್ಲಿ ಗಮನಿಸಬಹುದಾದ ಮತ್ತೊಂದು ಅಂಶವೆಂದರೆ ಕನ್ನಡ ಪಠ್ಯಕ್ರಮದ ನಿರ್ಧಾರಗಳಲ್ಲಿ ಬಹುಮುಖೀ ಭಾಗವಹಿಸುವಿಕೆಯ ಆಯ್ಕೆಯು ಕನಿಶ್ಟವಾಗಿ ಏಕವ್ಯಕ್ತಿ ಭಾಗವಹಿಸುವಿಕೆಯ ಆಯ್ಕೆಯೇ ಮೇಲುಗೈಯಾಗಿದ್ದು ಇಲ್ಲಿಯೂ ಸಂಸ್ಕೃತ ಪರಂಪರೆಯ ಪ್ರತಿನಿಧೀಕರಣ ಮುಖ್ಯವಾಗಿರುವುದನ್ನು ಗಮನಿಸಬಹುದಾಗಿದೆ;

**ಟೇಬಲ್-೪**

| **ಏಕವ್ಯಕ್ತಿ ರಚಿತ ಪಠ್ಯಕ್ರಮ-೨೪೮** |
|---|
| ಬ್ರಾಹ್ಮಣ-೧೪೯ |
| ಲಿಂಗಾಯತ-೩೮ |
| ಒಕ್ಕಲಿಗ-೨೯ |
| ಇತರರು-೩೨ |

ಏಕವ್ಯಕ್ತಿ ರಚಿತ ಪಠ್ಯಗಳ ಸಾಮಾಜಿಕ ಪ್ರತಿನಿಧೀಕರಣ ಬಿಂಬಿಸುವ ನಕ್ಷೆ



ವಿವಿಧ ಲೇಖಕರ ಭಾಗವಹಿಸುವಿಕೆಯನ್ನು ಮುಖ್ಯಮಾಡಿಕೊಂಡ ಪಠ್ಯಕ್ರಮಗಳಲ್ಲಿನ ಸಾಮಾಜಿಕ ಪ್ರತಿನಿಧೀಕರಣವೂ ಸಹ ಸಂಸ್ಕೃತ ಪರಂಪರೆಯ ಯಜಮಾನಿಕೆಯನ್ನು ಬೆಂಬಲಿಸುವುದೇ ಆಗಿದೆ ;

**ಟೇಬಲ್-೫**

| **ಪಠ್ಯಕ್ರಮವಾದ ಸಂಕಲನಗಳ ಒಟ್ಟು ಬರಹಗಾರರು-೩೦೫** |
| --- |
| ಬ್ರಾಹ್ಮಣ-೧೮೪ |
| ಲಿಂಗಾಯತ-೫೮ |
| ಒಕ್ಕಲಿಗ-೩೦ |
| ಇತರರು-೫೪ |



**ಪಠ್ಯಕ್ರಮಗಳ ಸಂಪಾದನೆ ಕುರಿತ ಮಾಹಿತಿ:**

ಗಮನಿಸಿಕೊಳ್ಳಬೇಕಾದ ಮತ್ತೊಂದು ಅಂಶವೆಂದರೆ ಪಠ್ಯಕ್ರಮಗಳ ಸಂಪಾದನೆಯನ್ನು ಕುರಿತದ್ದು. ಪಠ್ಯಗಳ ಸಂಪಾದನೆಯ ಕೆಲಸದಲ್ಲಿ ಒಟ್ಟು ೧೧೭ ಜನ ಪಾಲುಗೊಂಡಿದ್ದು ಇವರಲ್ಲಿ ೧೦೬ ಜನ ಗಂಡಸರು ಮಾತ್ತು ೧೧ ಮಂದಿ ಹೆಂಗಸರಿದ್ದಾರೆ.

ಟೇಬಲ್-೬

| **ಪಠ್ಯಕ್ರಮಗಳ ಸಂಪಾದಕರು-೧೧೭** |
|---|
| ಗಂಡಸರು-೧೦೬ |
| ಹೆಂಗಸರು-೧೧ |

ಪಠ್ಯಕ್ರಮಗಳ ಸಂಪಾದನೆಯಲ್ಲಿ ಹೆಣ್ಣು ಮತ್ತು ಗಂಡಿನ ಪ್ರತಿನಿಧೀಕರಣವನ್ನು ಬಿಂಬಿಸುವ ನಕ್ಷೆ




ಇಲ್ಲಿನ ಹೆಂಗಸರಲ್ಲಿ ಸಂಸ್ಕೃತ ಪರಂರೆಯ ೬ ಮಂದಿ, ಲಿಂಗಾಯತರು ೨ ಮತ್ತು ಇತರೆ ಸಮುದಾಯಗಳವರು ೩ ಮಂದಿ ಸೇರಿದ್ದಾರೆ.

ಇಲ್ಲಿಯ ಒಟ್ಟು ಪಾಲ್ಗೊಳ್ಳುವಿಕೆಯಲ್ಲಿ ಸಂಸ್ಕೃತ ಪರಂಪರೆಯ ಪ್ರತಿನಿಧೀಕರಣವು ಹೆಚ್ಚಾಗಿಯೇ ಇದ್ದು ಲಿಂಗಾಯತ ಮತ್ತು ಒಕ್ಕಲಿಗ ಸಮುದಾಯ ಸ್ವಲ್ಪಮಟ್ಟಿಗೆ ತಮ್ಮ ಪ್ರತಿನಿಧೀಕರಣವನ್ನು ಸುಧಾರಿಸಿಕೊಂಡಿರುವುದು ಕಾಣುತ್ತದೆ.

ಪಠ್ಯಕ್ರಮಗಳ ಒಟ್ಟು ಸಂಪಾದಕರ ಸಾಮಾಜಿಕ ಪ್ರತಿನಿಧೀಕರಣದಲ್ಲಿ ಈ ಮೇಲಿನ ಮಾಹಿತಿ ಸಂದರ್ಭಗಳಿಗಿಂತಲೂ ಗುರುತಿಸಬಹುದಾದ ಭಿನ್ನತೆಯೇನೂ ಕಾಣುವುದಿಲ್ಲವಾದರೂ ಸ್ವಲ್ಪಮಟ್ಟಿಗೆ ಲಿಂಗಾಯತ ಮತ್ತು ವಕ್ಕಲಿಗ ಸಮುದಾಯಗಳು ಇಲ್ಲಿಯವರೆಗೆ ಸಂಸ್ಕೃತ ಪರಂಪರೆ ಆಕ್ರಮಿಸಿಕೊಂಡಿದ್ದ ಜಾಗದಲ್ಲಿ ತಮ್ಮನ್ನು ವಿಸ್ತರಿಸಿಕೊಂಡಂತೆ ಕಾಣುತ್ತದೆ.

**ಟೇಬಲ್–೭**

| **ಪಠ್ಯಕ್ರಮಗಳ ಸಂಪಾದಕರು–೧೧೭** |
|---|
| ಬ್ರಾಹ್ಮಣ–೫೯ |
| ಲಿಂಗಾಯತ–೨೫ |
| ಒಕ್ಕಲಿಗ–೧೫ |
| ಇತರರು–೧೮ |

ಪಠ್ಯಕ್ರಮಗಳ ಸಂಪಾದನೆಯ ಸಾಮಾಜಿಕ ಪ್ರತಿನಿಧೀಕರಣ ಬಿಂಬಿಸುವ ನಕ್ಷೆ



ಹೀಗಾಗಿ ಸಂಸ್ಕೃತ ಪರಂಪರೆ ಎನ್ನುವುದು ಕನ್ನಡವನ್ನು ನೆಪವಾಗಿಸಿಕೊಂಡು ಕನ್ನಡ ಭಾಶೆ ಮತ್ತು ಸಾಹಿತ್ಯದ ಐಡೆಂಟಿಟಿಗಳನ್ನು ತನ್ನ ಮೂಗಿನ ನೇರಕ್ಕೆ ಕಟ್ಟಿಕೊಟ್ಟಿರುವ ವಿದ್ಯಮಾನವೇ ಆಗಿದೆ ಎನ್ನುವುದು ಈ ಮೇಲಿನ ಮಾಹಿತಿಯಿಂದ ಸ್ಪಶ್ಟವಾಗುತ್ತದೆ. ಆದ್ದರಿಂದಾಗಿ ಸಾಮಾಜಿಕ ಹೊಣೆಗಾರಿಕೆಯನ್ನು ತನ್ನಲ್ಲೆ ಗುಪ್ತವಾಗಿರಿಸಿಕೊಂಡು ಅದು ಪ್ರಜಾಪ್ರಭುತ್ವೀಕರಣಕ್ಕೆ ಒಳಗಾಗದಂತೆ ಕಾಪಾಡಿಕೊಳ್ಳುತ್ತಾ ಬಂದಿರುವುದನ್ನು ಗುರುತಿಸಬಹುದಾಗಿದೆ.

**ಪಠ್ಯಪುಸ್ತಕ ಮತ್ತು ಮಾರುಕಟ್ಟೆಯ ಸಂಬಂಧಗಳು;**

ಪಠ್ಯಕ್ರಮಗಳ ಸಂದರ್ಭದಲ್ಲಿ ಗಮನಿಸಬೇಕಾದ ಮತ್ತೊಂದು ವಿಚಾರವೆಂದರೆ ಪಠ್ಯಕ್ರಮವಾಗಿ ನಿರ್ಧಾರವಾಗುವ ಪಠ್ಯಗಳನ್ನು ಕುರಿತದ್ದು. ಇಲ್ಲಿ ಬಹುಮುಖ್ಯವಾಗಿ ಏಕವ್ಯಕ್ತಿ ರಚನೆಗಳು ಹೆಚ್ಚಿಗಿರುವುದನ್ನು ಈಗಾಗಲೆ ಗಮನಿಸಿಕೊಳ್ಳಲಾಗಿದೆ. ಪಠ್ಯಕ್ರಮವಾಗಿ ಬಳಸಲಾಗಿರುವ ಸರಿಸುಮಾರು ೩೦೦ ಪಠ್ಯಪುಸ್ತಕಗಳಲ್ಲಿ ಸುಮಾರು೨೫೦ ಏಕವ್ಯಕ್ತಿ ರಚನೆಗಳಾಗಿದ್ದು ಇವುಗಳ ಮೂಲಕ ಸೃಶ್ಟಿಸಲಾದ ಮಾರುಕಟ್ಟೆಯನ್ನು ಪ್ರಶ್ನಾತೀತವಾಗಿಯೆ ಭಾವಿಸಿಕೊಂಡು ಬರಲಾಗಿದೆ. ಕಲಿಕಾರ್ಥಿಗಳಿಗೆ ಸಮಯಕ್ಕೆ ಸರಿಯಾಗಿ ನಿಗದಿಯಾದ ಪುಸ್ತಕ ದೊರೆಯುವುದನ್ನಶ್ಟೆ ಯೋಚಿಸಲಾಗುತ್ತದೆ. ಆದರೆ, ಇಂಥ ರಚನೆಗಳ ಪ್ರಕಾಶನದಲ್ಲಿ ಪ್ರಕಾಶಕರ ಪಾಲ್ಗೊಳ್ಳುವಿಕೆಯು ಸ್ಪರ್ಧಾತ್ಮಕವಾಗಿರುತ್ತದೆ. ಪಠ್ಯಪುಸ್ತಕ ನಿರ್ಧಾರ ಮಂಡಳಿ, ಲೇಖಕ ಮತ್ತು ಪ್ರಕಾಶನ ನೆಲೆಯ ಸಂಬಂಧಗಳು ಕಲಿಕಾರ್ಥಿಯನ್ನು ಗ್ರಾಹಕನನ್ನಾಗಿಸುವ ಮೂಲಕ ಇಡೀ ಕಲಿಕೆಯನ್ನು ತನ್ನ ಕೈಗೆ ತೆಗೆದುಕೊಳ್ಳುತ್ತ ಸಾಮಾಜಿಕವಾಗಿ ಈಗಾಗಲೇ ಪ್ರವೃತ್ತವಾದ ಅಧಿಕಾರ ಸಂಬಂಧಗಳನ್ನು ಮತ್ತಶ್ಟು ಭದ್ರಪಡಿಸುತ್ತಾ ಹೋಗುತ್ತದೆ ಎಂಬುದನ್ನು ಗಮನಿಸಬಹುದಾಗಿದೆ. ಪಠ್ಯಪುಸ್ತಕಗಳ ಪ್ರಕಾಶನ ಕುರಿತಂತೆ ವಿಶ್ವವಿದ್ಯಾಲಯ ಮತ್ತು ಖಾಸಗಿ ಪ್ರಕಾಶನಗಳ ಪಾಲನ್ನು ಗಮನಿಸುವುದರ ಮೂಲಕ ಇದನ್ನು ಗುರುತಿಸಬಹುದಾಗಿದೆ. ಲಭ್ಯವಿರುವ ಮಾಹಿತಿಯ ಪ್ರಕಾರ ಒಟ್ಟು ೨೯೮ ಪಠ್ಯಪುಸ್ತಕಗಳಲ್ಲಿ ಕೇವಲ ೪೨ ಮಾತ್ರ ವಿಶ್ವವಿದ್ಯಾಲಯಗಳ ಪ್ರಕಟಣೆಗಳಾಗಿದ್ದು ೨೫೬ನ್ನು ಖಾಸಗಿ ಪ್ರಕಾಶಕರೆ ಉತ್ಪಾದಿಸಿದ್ದಾರೆ ಎನ್ನುವುದು ಇದರ ಹಿಂದಿನ ಅರ್ಥಿಕ ಮತ್ತು ಸಾಮಾಜಿಕ ರಾಜಕಾರಣದ ಉಪಾಯಗಳನ್ನು ಬಯಲು ಮಾಡುತ್ತದೆ.

ಟೇಬಲ್–೮

| ಪಠ್ಯಕ್ರಮವಾದ ಒಟ್ಟು ಪುಸ್ತಕಗಳು–೨೯೮ |
|---|
| ವಿಶ್ವವಿದ್ಯಾಲಯ ಪ್ರಕಟಣೆ–೪೨ |
| ಖಾಸಗಿ ಪ್ರಕಟಣೆ–೨೫೬ |

ಪಠ್ಯಕ್ರಮಗಳ ಪ್ರಕಟಣೆಯಲ್ಲಿ ಖಾಸಗಿ ಯಜಮಾನಿಕೆಯನ್ನು ಬಿಂಬಿಸುವ ನಕ್ಷೆ




ಅಲ್ಲದೆ ಈ ಪಠ್ಯಗಳು ಕಾಪಿರೈಟ್‌ನ ಮೂಲಕವೇ ಚಾಲನೆಗೆ ಬರುತ್ತವೆಯಾದ್ದರಿಂದ ಕಾಪಿರೈಟ್ ತಂದುಕೊಡುವ ರಾಯಲ್ಟಿಗಾಗಿ ಸಹಜವಾಗಿಯೆ ಪೈಪೋಟಿಯೂ ಏರ್ಪಡುತ್ತದೆ. ಇಂಥಲ್ಲಿ ಜಾತಿ, ವರ್ಗ ಮೂಲವಾದ ಸಾಮಾಜಿಕ ವ್ಯಕ್ತಿ ಅಥವಾ ಗುಂಪುಗಳು ಬೆಂಬಲಕ್ಕೆ ನಿಲ್ಲುತ್ತವೆ. ಪ್ರಕಾಶನ ಸಂಸ್ಥೆಗಳು ಈ ಗುಂಪುಗಳ ಭಾಗವಾಗಿಯೂ ಕೆಲಸ ಮಾಡುತ್ತವೆ. ಕೆಲವೊಮ್ಮೆ ಪ್ರಕಾಶನ ಸಂಸ್ಥೆಗಳು ನಿರ್ಧರಿಸಿದ ಕೃತಿಗಳೇ ಪಠ್ಯಕ್ರಮದೊಳಗೆ ಸೇರುತ್ತವೆ. ಈ ಬಗೆಯ ಪ್ರಭಾವಿ ನೆಲೆಯಿಂದ ನಿರ್ಧಾರವಾದ ಪಠ್ಯಗಳೇ ಕನ್ನಡ ಭಾಶೆಯನ್ನು, ಸಮಾಜವನ್ನು ಬಿಂಬಿಸುವ ಪ್ರತಿನಿಧಿಕರಣಕ್ಕೆ ಒಳಗಾಗುತ್ತವೆ. ಆ ಮೂಲಕ ಕೆಲವೇ ಲೇಖಕರು(ನಿರ್ದಿಶ್ಟ ಜಾತಿಯ ಗಂಡಸರು) ಸಾಮಾಜಿಕವಾಗಿಯೂ ಬಿಂಬಿತವಾಗುತ್ತ ಕನ್ನಡ ಭಾಶೆ, ಸಾಹಿತ್ಯ, ಸಂಸ್ಕೃತಿಯ ವಕ್ತಾರರೆನಿಸಿಕೊಳ್ಳುತ್ತಾರೆ. ಇದು ಯಾವ ಪ್ರಮಾಣದಲ್ಲಿ ನಡೆದಿದೆ ಎಂಬುದನ್ನು ಪಠ್ಯಕ್ರಮಗಳ ಮೂಲಕ ಜಾರಿಗೊಳಿಸಲಾಗಿರುವ ಯಜಮಾನಿಕೆಯ ಚರ್ಚೆಯಲ್ಲಿಯೆ (ಅಧ್ಯಾಯ ೫ರಲ್ಲಿ)

ಗಮನಿಸಿಕೊಳ್ಳಬಹುದಾಗಿದೆ. ಈ ಹಿನ್ನೆಲೆಯಲ್ಲಿ ಒಟ್ಟು ಕರ್ನಾಟಕದ ಪದವಿ ಶಿಕ್ಷಣ ನೀಡುವ ೯ ವಿಶ್ವವಿದ್ಯಾಲಯಗಳ ಶೈಕ್ಷಣಿಕ ವಿದ್ಯಮಾನಗಳಲ್ಲಿನ ಕನ್ನಡ ಪಠ್ಯಕ್ರಮಗಳ ಮಾರುಕಟ್ಟೆಯನ್ನು ಕುರಿತು ಯೋಚಿಸುವಾಗ ಇದರ ಹಿಂದೆ ಪ್ರವೃತ್ತವಾಗಿರುವ ಲೇಖಕ ಮತ್ತು ಪ್ರಕಾಶಕರ ನಡುವಿನ ಆರ್ಥಿಕ ಒಪ್ಪಂದಗಳು ಮತ್ತು ಕಲಿಕಾರ್ಥಿ ಗ್ರಾಹಕರುಗಳನ್ನೆ ಮುಖ್ಯಮಾಡಿಕೊಂಡಿರುವ ಪ್ರಿಂಟ್ ಕ್ಯಾಪಿಟಲಿಸಂನ ಹುನ್ನಾರುಗಳು ಮತ್ತಷ್ಟು ಸ್ಪಷ್ಟವಾಗುತ್ತವೆ.

**೬.೨ ಪಠ್ಯಗಳ ಬೋಧನೆ: ಅಧ್ಯಾಪನ ಸಮುದಾಯದ ನಿರ್ಣಾಯಕ ಪಾತ್ರದ ಸಮಸ್ಯೆಗಳು**

ಬೆಂಗಳೂರು ವಿಶ್ವವಿದ್ಯಾಲಯ ವ್ಯಾಪ್ತಿಯ ಪದವಿ ಕನ್ನಡ ಪಠ್ಯಕ್ರಮಗಳ ಬೋಧನೆ, ಪರೀಕ್ಷೆ, ಮೌಲ್ಯಮಾಪನ ಕುರಿತ ಪ್ರಕ್ರಿಯೆಯ ಹಿನ್ನೆಲೆಯಲ್ಲಿ ಅಧ್ಯಾಪನ ಸಮುದಾಯದ ಸುಮಾರು ೧೨೫ ಮಂದಿಗೆ ೨೦ ಪ್ರಶ್ನೆಗಳ ಸರಣಿಯೊಂದಿಗೆ, ಪ್ರತಿ ಪ್ರಶ್ನೆಗೆ ಸಂಭವನೀಯ ಆಯ್ಕೆಯ ನಾಲ್ಕು ಉತ್ತರಗಳನ್ನು ನೀಡಿ ಅಭಿಪ್ರಾಯವನ್ನು ನಿರೀಕ್ಷಿಸಲಾಗಿತ್ತು. ಈ ಪ್ರಶ್ನೆ ಮತ್ತು ಉತ್ತರಗಳ ಸರಣಿಯ ಮೂಲಕ ಪಠ್ಯಕ್ರಮ, ಬೋಧನೆ, ಕಲಿಕೆ ಮತ್ತು ಕಲಿಕೆಯ ಮೌಲ್ಯಮಾಪನ ಕುರಿತಾಗಿ ಗುಣಾತ್ಮಕ ನೆಲೆಗಳನ್ನು ಕಂಡುಕೊಳ್ಳುವ ಉದ್ದೇಶವನ್ನು ಇರಿಸಿಕೊಳ್ಳಲಾಗಿತ್ತು. ಇದರಲ್ಲಿ ಹೆಂಗಸರು ೨೬ ಮಂದಿ ಮತ್ತು ಗಂಡಸರು ೬೩ ಮಂದಿ ಪ್ರತಿಕ್ರಿಯಿಸಿದ್ದು; ೧ ರಿಂದ ೫ ವರುಶದ ಬೋಧನಾನುಭವ ಹೊಂದಿದವರು ೧೮ ಮಂದಿ, ೬ ರಿಂದ ೧೦ ವರುಶದ ಬೋಧನಾನುಭವ ಹೊಂದಿದವರು ೩೦ ಮಂದಿ, ೧೧ ರಿಂದ ೧೫ ವರುಶದ ಬೋಧನಾನುಭವ ಹೊಂದಿದವರು ೧೪ ಮಂದಿ, ೧೬ ರಿಂದ ೨೦ ವರುಶದ ಬೋಧನಾನುಭವ ಹೊಂದಿದವರು ೧೨ ಮಂದಿ, ೨೦ ವರುಶಕ್ಕೂ ಮೇಲ್ಪಟ್ಟು ಬೋಧನಾನುಭವ ಹೊಂದಿದವರು ೧೫ ಮಂದಿ ತಮ್ಮ ಅಭಿಪ್ರಾಯಗಳನ್ನು ಸೂಚಿಸಿದ್ದಾರೆ. ಹೀಗೆ ಪಾಲ್ಗೊಂಡವರಲ್ಲಿ; ಪರಿಶಿಷ್ಟ ಜಾತಿ/ವರ್ಗಕ್ಕೆ ಸೇರಿದವರು ೧೭ ಮಂದಿ, ಹಿಂದುಳಿದ ಜಾತಿ/ಪಂಗಡಕ್ಕೆ ಸೇರಿದವರು ೩೭ ಮಂದಿ, ಸಾಮಾನ್ಯ ವರ್ಗಕ್ಕೆ ಸೇರಿದವರು ೨೨ ಮಂದಿ, ಅಲ್ಪಸಂಖ್ಯಾತ-೧ ಮತ್ತು ಜಾತಿ, ವರ್ಗ, ಸಮುದಾಯದ ಹೆಸರನ್ನು ನಮೂದಿಸಲು ಇಚ್ಚಿಸದವರು ೧೨ ಮಂದಿ ಸೇರಿದ್ದಾರೆ. ಇವರಲ್ಲಿ ನಗರ ಕೇಂದ್ರಿತ ಕಾಲೇಜುಗಳಲ್ಲಿ ಕರ್ತವ್ಯದಲ್ಲಿರುವವರು ೫೪ ಮಂದಿ ಆಗಿದ್ದರೆ, ಹಳ್ಳಿ ಕೇಂದ್ರಿತ ಕಾಲೇಜುಗಳಲ್ಲಿ ಕರ್ತವ್ಯದಲ್ಲಿರುವವರು ೩೫ ಮಂದಿ ಸೇರಿದ್ದು ಬೆಂಗಳೂರು ನಗರ ಜಿಲ್ಲೆಯಿಂದ ೬೧, ಬೆಂಗಳೂರು ಗ್ರಾಮಾಂತರ ಜಿಲ್ಲೆಯಿಂದ ೧೨, ಕೋಲಾರ ಜಿಲ್ಲೆಯಿಂದ ೧೬ ಮಂದಿ ಪಾಲ್ಗೊಂಡಿದ್ದಾರೆ. ಹೀಗೆ ಒಟ್ಟು ೮೯ ಮಂದಿ ಕೊಟ್ಟ ಅಭಿಪ್ರಾಯಗಳನ್ನು ಕ್ರೋಡೀಕರಿಸಿಕೊಂಡು ಬೋಧನೆ, ಪರೀಕ್ಷೆಮತ್ತು

ಮೌಲ್ಯಮಾಪನ ಕುರಿತ ಪ್ರಕ್ರಿಯೆಯ ಮೂಲಕ ಅಂತಿಮವಾಗಿ ಕಲಿಕಾರ್ಥಿಗೆ ತಲುಪುವ ತಿಳುವಳಿಕೆ ಏನ್ನುವುದು ಏನು ಎಂಬುದನ್ನು ಇಲ್ಲಿ ಗ್ರಹಿಸಲು ಪ್ರಯತ್ನಿಸಲಾಗಿದೆ.

ಕನ್ನಡ ಭಾಶೆಯ ಬೋಧನೆ ಮತ್ತು ಕಲಿಕಾರ್ಥಿಗೆ ತಲುಪಬೇಕಾದ ತಿಳುವಳಿಕೆಯ ಕುರಿತಾಗಿ ಅಧ್ಯಾಪನ ಸಮುದಾಯದ ಎದುರಿಗಿರಿಸಿದ ಪ್ರಶ್ನೆಗಳ ಸರಣಿಯು ಬಹಳ ಮುಖ್ಯವಾಗಿ; ಭಾಶೆಯ ಕಲಿಕೆಯಲ್ಲಿ ಕನ್ನಡ ಸಾಹಿತ್ಯದ ಪ್ರಸ್ತುತತೆ, ಕನ್ನಡ ಭಾಶೆಯ ಕೌಶಲಗಳು, ವ್ಯಾಕರಣ ಕುರಿತ ಅನುಮಾನಗಳು, ಕನ್ನಡ ಮತ್ತು ಸಾಹಿತ್ಯವಲ್ಲದ ಜ್ಞಾನ ಶಿಸ್ತುಗಳ ಬಗೆಗಿನ ತಿಳುವಳಿಕೆ, ಕನ್ನಡ ಸಮಾಜ-ಸಂಸ್ಕೃತಿಯ ಕುರಿತ ನೈತಿಕ ಶಿಕ್ಶಣ, ಕನ್ನಡದ ಬಗೆಗಿನ ಅಭಿಮಾನ, ಕನ್ನಡ ಬಳಕೆಯ ಮಾದರಿಗಳು, ಮಾತು ಮತ್ತು ಬರವಣಿಗೆಯ ಸಂಬಂಧ, ಬೋಧನೆಯ ವಿಧಾನ ಮತ್ತು ಮಾದರಿ, ಪಠ್ಯಕ್ರಮದ ನಿರ್ಧಾರದಲ್ಲಿ ಅಧ್ಯಾಪನ ಸಮುದಾಯ ಮತ್ತು ವಿದ್ಯಾರ್ಥಿ ಸಮುದಾಯದ ಪ್ರಾಮುಖ್ಯತೆ ಮತ್ತು ಪಾಲ್ಗೊಳ್ಳುವಿಕೆ, ಪರೀಕ್ಶೆ ಮತ್ತು ಮೌಲ್ಯಮಾಪನ ಮೊದಲಾಗಿ ಇವುಗಳ ಮೂಲಕ ಕನ್ನಡ ಭಾಶಾ ಕಲಿಕೆಯ ಅಗತ್ಯತೆ, ಪ್ರಾಮುಖ್ಯತೆ ಮತ್ತು ಸಾಧ್ಯತೆಗಳನ್ನು ಕಂಡುಕೊಳ್ಳುವ ಉದ್ದೇಶ್ಯವನ್ನು ಇರಿಸಿಕೊಳ್ಳಲಾಗಿತ್ತು. ಈ ಹಿನ್ನೆಲೆಯ ಅಧ್ಯಾಪನ ಸಮುದಾಯದ ಅಭಿಪ್ರಾಯಗಳನ್ನು ಹೀಗೆ ಕ್ರೋಡೀಕರಿಸಿಕೊಳ್ಳಲಾಗಿದೆ;

- ಪದವಿ ಹಂತದ ಕನ್ನಡ ಭಾಶೆಯ ಕುರಿತ ಕಲಿಕೆಯನ್ನು ಕನ್ನಡಸಾಹಿತ್ಯದ ತಿಳುವಳಿಕೆ ಎಂದು ಭಾವಿಸಿದ್ದಾರೆ. ಕನ್ನಡ ಸಾಹಿತ್ಯದ ಮೂಲಕ ಸಮಾಜ, ಸಂಸ್ಕೃತಿಯ ಕುರಿತ ಶಿಕ್ಶಣ, ಸಾಹಿತ್ಯದ ಬಗೆಗಿನ ತಿಳುವಳಿಕೆ ಎಂಬ ಗ್ರಹಿಕೆ ಮುಖ್ಯವಾಗಿದೆ.
- ಭಾಶಾ ಕಲಿಕೆಯ ಸಂಕಥನವು ಸಾಹಿತ್ಯದ ಕುರಿತ ಸಂಕಥನಕ್ಕಿಂತ ಭಿನ್ನವಾದುದು ಎಂದು ನೋಡುವುದಿಲ್ಲ. ಒಂದರ ಜೊತೆಯಲ್ಲಿ ಇನ್ನೊಂದನ್ನು, ಒಂದರ ಮೂಲಕ ಮತ್ತೊಂದನ್ನು ಗ್ರಹಿಸುತ್ತಾರೆ. ಕನ್ನಡ ಭಾಶೆ ಮತ್ತು ಸಾಹಿತ್ಯದ ಕಲಿಕೆಯ ಪಠ್ಯಗಳು ಬೇರೆಯಲ್ಲ ಎಂಬ ಅಭಿಪ್ರಾಯ ಬಹುಮಟ್ಟಿಗೆ ಕಾಣುತ್ತದೆ. ಬೇರೆಯಾಗಿರಬೇಕು ಎಂಬ ಅಭಿಪ್ರಾಯವೂ ಸಣ್ಣದಾಗಿ ಕಾಣುತ್ತದೆ. ಆದರೆ, ಕನ್ನಡ ಭಾಶೆಯ ಕಲಿಕೆಯ ಪಠ್ಯವೆಂದರೆ ಕಾವ್ಯ, ಕತೆ, ನಾಟಕ ಇತ್ಯಾದಿ ಸಾಹಿತ್ಯ ಪ್ರಕಾರಗಳನ್ನು ಗುರುತಿಸಿಕೊಳ್ಳಲಾಗುತ್ತದೆ. ಓದು, ಬರಹ ಮತ್ತು ಅರ್ಥೈಸುವಿಕೆಯ ಕೌಶಲವನ್ನು ಬಹುಮಂದಿ ಬೆಂಬಲಿಸುತ್ತಾರೆ.
- ಸಾಹಿತ್ಯ ಪಠ್ಯಗಳಲ್ಲದೆ, ಇತರೆ ಜ್ಞಾನವಲಯಗಳ ಕನ್ನಡ ಪಠ್ಯಗಳು ಸಹ ಕನ್ನಡ ಭಾಶೆ, ಸಂಸ್ಕೃತಿಯ ಸಂದರ್ಭದಲ್ಲಿ ಮುಖ್ಯವಾಗಬೇಕೆಂಬುದನ್ನು ಬಹುಮಟ್ಟಿನ ಕನ್ನಡ

ಅಧ್ಯಾಪನ ಸಮುದಾಯ ಒಪ್ಪುತ್ತದೆ. ಕೇವಲ ಸಾಹಿತ್ಯವಲ್ಲದೆ ಇತರೆ ಜ್ಞಾನವಲಯಗಳ ಮೂಲಕವೂ ಕನ್ನಡ ಭಾಶೆ ಮತ್ತು ಸಮಾಜದ ತಿಳುವಳಿಕೆಯ ಸಾಧ್ಯತೆಗಳನ್ನು ಒಪ್ಪಿಕೊಳ್ಳುತ್ತದೆ. ಆದರೆ ಸಾಹಿತ್ಯದ ಸ್ಕೂಲಿನಿಂದ ಬಂದಿರುವ ಕನ್ನಡ ಅಧ್ಯಾಪನ ಸಮುದಾಯಕ್ಕೆ ಸಾಹಿತ್ಯ ಪಠ್ಯಗಳ ಬಗೆಗೆ ಮೋಹವಿದೆ. ಆದ್ದರಿಂದಾಗಿ ಕನ್ನಡ ಭಾಶೆಯ ತಿಳುವಳಿಕೆಯ ಕುರಿತಾಗಿ ಕನ್ನಡಸಾಹಿತ್ಯದ ಅವಲಂಬನೆಯೇ ಮುಖ್ಯವಾಗಿ ಕಾಣುತ್ತದೆ.

- ಕನ್ನಡ ಭಾಶೆಯ ಕುರಿತ ಶಿಕ್ಶಣವೆನ್ನುವುದು ಕನ್ನಡ ಭಾಶೆಯ ಬಳಕೆಯ ಸ್ವರೂಪವನ್ನು ಅರಿಯುವುದು ಮತ್ತು ಭಾಶಿಕ ಕೌಶಲಗಳನ್ನು ಅರಿಯುವುದು ಎನ್ನುವುದನ್ನು ಬಹುಮಂದಿ ನಿರಾಕರಿಸುವುದಿಲ್ಲ. ಭಾಶಿಕ ಕೌಶಲಗಳ ತಿಳುವಳಿಕೆಗೆ ಹೆಚ್ಚು ಒತ್ತು ಕೊಡಬೇಕೆಂಬುದು ಶೇಕಡಾ ತೊಂಬತ್ತರಶ್ಟು ಹೊಸ ತಲೆಮಾರಿನ ಅಧ್ಯಾಪಕರ ಅಭಿಪ್ರಾಯವೂ ಆಗಿದೆ. ಆದ್ದರಿಂದಾಗಿ, ಭಾಶೆಯ ಬಳಕೆ ಮತ್ತು ಕೌಶಲಗಳ ಕಡೆಗೆ ಹೆಚ್ಚು ಒತ್ತು ಕೊಟ್ಟಲ್ಲಿ ಭಾಶಾ ತಿಳುವಳಿಕೆಯ ಸಾಧ್ಯತೆಯು ವಿಸ್ತರಿಸುತ್ತದೆ, ಇಲ್ಲವಾದಲ್ಲಿ ಪಠ್ಯದ ವಸ್ತು-ಸಂಗತಿಯನ್ನು ವಿವರಿಸುವಲ್ಲಿಯೇ ಮುಗಿದು ಹೋಗುತ್ತದೆ, ಇದಕ್ಕೆ ಪಠ್ಯವಿಶಯದಲ್ಲಿಯೆ ಅವಕಾಶವನ್ನು ಕಲ್ಪಿಸಬೇಕಾಗಿದೆ ಎಂಬ ಅಭಿಪ್ರಾಯ ವ್ಯಕ್ತವಾಗಿದೆ. ಆದರೆ, ಭಾಶಾ ಕಲಿಕೆಗೂ ಸಾಹಿತ್ಯದ ಪಠ್ಯಕ್ರಮ ಇರಬೇಕು, ಇದಕ್ಕೆ ಸಾಹಿತ್ಯವೇ ಸಮರ್ಥ ಪ್ರತಿನಿಧಿ ಎಂಬ ಅಭಿಪ್ರಾಯವೇ ಸಾಮಾನ್ಯವಾಗಿದೆ.
- ಪಠ್ಯಕ್ರಮಗಳಲ್ಲಿ ಕನ್ನಡ ಭಾಶೆಯ ಸಾಮಾಜಿಕ ಬಳಕೆಯ ಮಾದರಿಗಳು ಮತ್ತು ಕೌಶಲಗಳ ಮಾದರಿಗಳು ಪ್ರಾಸಂಗಿಕವಾಗಿದ್ದು ಮತ್ತಶ್ಟು ಒಳಗೊಳ್ಳುವ ಅಗತ್ಯವನ್ನು ಬೆಂಬಲಿಸುತ್ತಾರೆ. ಆದರೆ, ಜಾತಿ, ಪ್ರದೇಶ, ವಯಸ್ಸು, ಸ್ಥಾನಮಾನ, ಸಮೂಹ ಮಾಧ್ಯಮ ಇತ್ಯಾದಿ ಮೂಲವಾದ ಕನ್ನಡ ಬಳಕೆಯ ಮತ್ತು ಕೌಶಲಗಳ ಮಾದರಿಗಳು ಇರಬೇಕೆಂಬುದಕ್ಕೆ ತೆಳುವಾದ ನಿಲುವಿದ್ದು, ಮಾತು ಮತ್ತು ಬರವಣಿಗೆ ಒಂದೇ ಆಗಬೇಕಾಗಿಲ್ಲ, ಬರವಣಿಗೆಯು ವಿಶಯಾಭಿವ್ಯಕ್ತಿಗೆ ಸಹಕಾರಿಯಾಗಿರಬೇಕು ಎಂಬ ಅಭಿಪ್ರಾಯವಿದೆ.
- ನೈತಿಕ ಜವಬ್ದಾರಿಗಳನ್ನು ತಿಳಿಸಿಕೊಡುವಂತೆ ಕನ್ನಡ ಪಠ್ಯವಿಶಯಗಳನ್ನು ಯೋಜಿಸಬೇಕೆಂಬ ಅಭಿಪ್ರಾಯವು ಪ್ರಬಲವಾಗಿ ಕಾಣುತ್ತದೆ.
- ಕನ್ನಡ ಸಾಹಿತ್ಯವಿಶಯದ ತಿಳುವಳಿಕೆಯು ಇತರೆ ಜ್ಞಾನವಲಯಗಳ ವಿಶಯಾಧಾರಿತ ಕಲಿಕೆಗೆ ಭಾಶಿಕ ಕೌಶಲಗಳನ್ನು ಒದಗಿಸಬಲ್ಲುದು ಎಂಬ ಅಭಿಪ್ರಾಯವೂ ವ್ಯಕ್ತವಾಗಿದೆ.

- ಕನ್ನಡ ಭಾಷೆಯ ಬೋಧನಾ ಚಟುವಟಿಕೆ ಎಂದರೆ, ಸಾಹಿತ್ಯ, ಸಂಸ್ಕೃತಿಯ ತಿಳುವಳಿಕೆಯ ಮೂಲಕ ಕನ್ನಡಾಭಿಮಾನ ಮೂಡಿಸುವುದು ಎಂದು ಬಹುವಾಗಿ ಗ್ರಹಿಸಲಾಗಿದೆ. ಈ ಮೂಲದ ಬೋಧನಾ ವಿಧಾನಗಳಲ್ಲೆಯೇ ಕನ್ನಡ ಭಾಷೆಯ ಕೌಶಲ್ಯಗಳನ್ನು ತಿಳಿಸಿಕೊಡುವುದು ಎಂಬ ಅಭಿಪ್ರಾಯವಿದ್ದಂತೆ ಕಾಣುತ್ತದೆ. ಇದು ಅಧ್ಯಾಪಕರ ಏಕಮುಖ ಚಟುವಟಿಕೆಯಾಗದೆ, ಕಲಿಕಾರ್ಥಿಗಳ ನಡುವೆಯೂ ಪರಸ್ಪರ ಚರ್ಚೆ ಮತ್ತು ಪ್ರಶ್ನೋತ್ತರ ನೆಲೆಗಳಲ್ಲಿ ನಿರ್ವಹಣೆಗೆ ಒಳಗಾಗಬೇಕು ಎಂಬ ಅಭಿಪ್ರಾಯವಿದೆ.
- ಬೋಧನಾ ವಿಧಾನವೆನ್ನುವುದು ಸಿದ್ಧ ಮತ್ತು ಏಕರೂಪಿಯಾದುದು ಎಂಬುದರ ಬಗ್ಗೆ ಅಲ್ಪಾಭಿಪ್ರಾಯವಿದ್ದು, ಇದು ತರಗತಿಯ ಸಂದರ್ಭದಲ್ಲೆ ನಿರ್ಧಾರವಾಗುತ್ತದೆ ಮತ್ತು ಅಧ್ಯಾಪಕರ ವೈಯುಕ್ತಿಕ ಸಾಮರ್ಥ್ಯವನ್ನು ಅವಲಂಬಿಸಿದೆ ಎಂಬುದು ಬಹುಮಟ್ಟಿನ ತಿಳುವಳಿಕೆಯಾಗಿದೆ.
- ಪಠ್ಯಕ್ರಮಗಳನ್ನು ರೂಪಿಸುವಲ್ಲಿ ಕಲಿಕಾರ್ಥಿಗಳ ನಿರೀಕ್ಷೆಗಳು ಮತ್ತು ಅಗತ್ಯಗಳನ್ನು ಪ್ರತಿನಿಧಿಸುವ ಮೂಲಕ ತಮ್ಮನ್ನು ಗುರುತಿಸಿಕೊಳ್ಳಲು ಇಚ್ಛಿಸುತ್ತದೆ. ಬಹುಮಟ್ಟಿನ ಅಧ್ಯಾಪನ ಸಮುದಾಯವು, ಪಠ್ಯಕ್ರಮದ ಚರ್ಚೆಯಲ್ಲಿ ಕಲಿಕಾರ್ಥಿಗಳ ಪಾಲ್ಗೊಳ್ಳುವಿಕೆ ಇರಬೇಕು ಪಠ್ಯಕ್ರಮದ ನಿರ್ಧಾರದಲ್ಲಿ ಕಲಿಕಾರ್ಥಿಗಳ ಪಾಲ್ಗೊಳ್ಳುವಿಕೆ ಅಗತ್ಯವಿಲ್ಲ ಎಂದು ಅಭಿಪ್ರಾಯಿಸಿದೆ.
- ಪರೀಕ್ಷೆ ಮತ್ತು ಮೌಲ್ಯಮಾಪನವು ಪಠ್ಯವಸ್ತು ಮತ್ತು ಸಂಗತಿಗಳ ನೆನಪನ್ನು ಮಾತ್ರ ಆಧರಿಸಿದೆ ಎಂದು ಬಹುಮಟ್ಟಿನ ಅಭಿಪ್ರಾಯವಿದ್ದು, ಕೆಲವರು ಇದರ ಬದಲಾವಣೆಯ ಅಗತ್ಯವಿದೆ, ಆದರೆ ಹೇಗೆಂದು ತಿಳಿದಿಲ್ಲ ಎನ್ನುತ್ತಾರೆ. ಮತ್ತೂ ಕೆಲವರು ಈಗಿರುವ ಕ್ರಮವು ವಿದ್ಯಾರ್ಥಿಗಳನ್ನು ಶಿಸ್ತಿನಲ್ಲಿಡಲು ಸರಿಯಾಗಿದೆ ಎಂತಲೂ ಭಾವಿಸುತ್ತಾರೆ.
- ಭಾಶಿಕ ತಿಳುವಳಿಕೆಯ ಪ್ರಶ್ನೆಗಳು ಪರೀಕ್ಷೆಗಳಲ್ಲಿ ಹೆಚ್ಚಾಗಬೇಕು ಎಂಬ ಅಭಿಪ್ರಾಯವು ಬಹುಮಟ್ಟಿಗೆ ಕಂಡರೂ, ಪಠ್ಯಸಾರವನ್ನು ಕುರಿತ ಪ್ರಶ್ನೆಗಳ ಕಡೆಗೆ ಹೆಚ್ಚು ಒಲವು ಕಂಡುಬರುತ್ತದೆ. ಪದವಿಯಲ್ಲಿ ಭಾಶಿಕ ತಿಳುವಳಿಕೆಯ ಚಿಂತನೆಯ ಅಗತ್ಯವಿಲ್ಲ ಎಂಬ ಬಗ್ಗೆಯೂ ಸೊಲ್ಲೆತ್ತಿದವರಿದ್ದಾರೆ.
- ಪದವಿ ಹಂತದ ಬರವಣಿಗೆಯಲ್ಲಿ ಆಗುವ ತಪ್ಪುಗಳಿಗೆ ಭಾಶಿಕ ತಿಳುವಳಿಕೆಗೆ ಹೆಚ್ಚು ಒತ್ತು ಕೊಡದಿರುವುದು ಎಂಬ ಗ್ರಹಿಕೆಯಿದ್ದರೂ, ಪದವಿಗೂ ಪೂರ್ವದ ತರಗತಿಗಳಲ್ಲಿ

ಕಲಿತ ವ್ಯಾಕರಣ ದೋಶಗಳಿಂದಾಗಿ ಇದು ರೂಢವಾದದ್ದು ಎಂಬ ಅಭಿಪ್ರಾಯ ಸ್ವಲ್ಪ ಹೆಚ್ಚಿಗೆ ಕಾಣುತ್ತದೆ. ಜೊತೆಗೆ ಕಲಿಕಾರ್ಥಿಗಳ ಅಶಿಸ್ತನ್ನು ಇದಕ್ಕೆ ಕಾರಣವಾಗಿ ಗುರುತಿಸುತ್ತಾರೆ.

- ಮೌಲ್ಯಮಾಪನದ ಉದ್ದೇಶದ ಕುರಿತಾಗಿ ಪಠ್ಯಸಾರದ ಗ್ರಹಿಕೆ ಮತ್ತು ನೆನಪನ್ನು ಅಳೆಯುವುದರ ಕಡೆಗೆ ಹೆಚ್ಚಿನ ಒಲವು ಇದ್ದು, ಭಾಶಿಕ ಕೌಶಲಗಳ ಕಡೆಗಿನ ಗಮನವು ಎರಡನೆಯದಾಗಿದೆ. ಅದರಲ್ಲೂ ಬರವಣಿಗೆಯ ಸಾಮರ್ಥ್ಯದ ಕಡೆಗೆ ಒತ್ತು ಇರುವುದು ಕಾಣುತ್ತದೆ.

ಅಧ್ಯಾಪನ ಸಮುದಾಯದ ಒಟ್ಟು ಅಭಿಪ್ರಾಯಗಳನ್ನು ಹೀಗೆ ಗ್ರಹಿಸಬಹುದಾಗಿದೆ; ಪ್ರಸ್ತುತದಲ್ಲಿರುವ ಪರೀಕ್ಶೆ, ಪ್ರಶ್ನೆಪತ್ರಿಕೆ ಮತ್ತು ಮೌಲ್ಯಮಾಪನ ವಿದ್ಯಮಾನಗಳ ಕುರಿತಾಗಿ ಒಟ್ಟು ಕನ್ನಡ ಅಧ್ಯಾಪನ ಸಮುದಾಯಕ್ಕೆ ಸ್ಪಶ್ಟ ಮತ್ತು ನಿರ್ದಿಶ್ಟ ಅಭಿಪ್ರಾಯವಿರುವುದು ಕಾಣುವುದಿಲ್ಲ. ಅಸಮದಾನಗಳು, ಆತಂಕಗಳು, ಗೊಂದಲಗಳು, ಸಾಹಿತ್ಯದ ಮೇಲಿನ ವಿಶೇಶವಾದ ಪ್ರೀತಿ-ಈಗಾಗಲೆ ಮೂರನೆ ಅಧ್ಯಾಯದಲ್ಲಿ ವ್ಯಕ್ತವಾಗಿರುವಂತೆ-ಇಲ್ಲೂ ವ್ಯಕ್ತವಾಗಿವೆ. ಪಠ್ಯದ ವಸ್ತು-ಸಂಗತಿಗಳ ನೆನಪನ್ನು ಆಧರಿಸಿರುವ ಈ ಪ್ರಕ್ರಿಯೆಯು ಭಾಶಾ ತಿಳುವಳಿಕೆಯ ಸಾಮರ್ಥ್ಯವನ್ನು ತಿಳಿಯಲು ಸೂಕ್ತವಲ್ಲವೆಂದು ಭಾವಿಸುವಲ್ಲಿ, ಇದನ್ನು ಹೇಗೆ ಬದಲಾಯಿಸಬಹುದೆಂಬುದರ ಬಗ್ಗೆ ಸ್ಪಶ್ಟ ಅಭಿಪ್ರಾಯಕ್ಕೆ ಬರಲಾಗದೆ ಇರುವಾಗಲೂ ಬದಲಾವಣೆಯ ಕಡೆಗೆ ತುಡಿತವನ್ನು ವ್ಯಕ್ತಪಡಿಸುವಲ್ಲಿ ಈ ಗೊಂದಲಗಳು ಕಾಣಿಸುತ್ತವೆ.

**ಟೇಬಲ್–೯**

| ಅಧ್ಯಾಪನ ಸಮುದಾಯದ ಅಭಿಪ್ರಾಯ ಗೊಂದಲಗಳು | |
|---|---|
| ಸಾಹಿತ್ಯದ ಪಠ್ಯಗಳ ಮೂಲಕ ಸಂಸ್ಕೃತಿ, ಸಮಾಜ ಚಿಂತನೆಗಳ ಬಗೆಗಿನ ಒಲವು | ೪೮% |
| ಭಾಶಾ ಕೌಶಲಗಳು ಇರಬೇಕೆಂಬ ಆಶಯ | ೩೮% |
| ಇತರೆ | ೧೪% |

ಅಧ್ಯಾಪನ ಸಮುದಾಯದ ಅಭಿಪ್ರಾಯ ಗೊಂದಲಗಳನ್ನು ಬಿಂಬಿಸುವ ನಕ್ಷೆ




ಈ ನಿಟ್ಟಿನಲ್ಲಿ ಅಧ್ಯಾಪನ ಸಮುದಾಯಕ್ಕೆ ಮೌಲ್ಯಮಾಪನ ಶಿಬಿರವನ್ನು, ವಿದ್ಯಾರ್ಥಿಗಳಿಗೆ ಮೌಖಿಕ ಪರೀಕ್ಷೆ, ಓದಿನ ಪರೀಕ್ಷೆಗಳನ್ನು ಈಗಿನ ವಿಧಾನಗಳಿಗೆ ಅಳವಡಿಸಿಕೊಂಡು ಕಲಿಕಾರ್ಥಿಗಳನ್ನು ಶಿಸ್ತಿನಲ್ಲಿಡಬಹುದು ಎಂದು ಕನಸುವುದು ಕಾಣುತ್ತದೆ.

ಅಧ್ಯಾಪನ ಸಮುದಾಯಕ್ಕೆ ಭಾಷಾ ತಿಳುವಳಿಕೆಗೆ ಸಂಬಂಧಿಸಿದಂತೆ ಪಠ್ಯ ಮತ್ತು ಪ್ರಶ್ನೆ ಪತ್ರಿಕೆಯಲ್ಲಿ ಅವಕಾಶವಿಲ್ಲದಿರುವುದು ಸ್ಪಷ್ಟವಾಗಿದೆ. ಇದರಿಂದಾಗಿ ಪದವಿ ಹಂತದಲ್ಲಿ ಭಾಷೆಯ ತಿಳುವಳಿಕೆ ಎಂದರೆ ವ್ಯಾಕರಣದ ತಿಳುವಳಿಕೆ ಎನ್ನುವುದನ್ನು ಸಂಪೂರ್ಣವಾಗಿ ತಿರಸ್ಕರಿಸುತ್ತದೆ. ಹಾಗಲ್ಲದಿದ್ದರೆ ಇನ್ನೇನು ಎನ್ನುವುದನ್ನು ಗುರುತಿಸಿಕೊಳ್ಳುವಲ್ಲಿ ಪಾರಂಪರಿಕ ಸಾಹಿತ್ಯದ ಸ್ಕೂಲಿನ ಉತ್ಪಾದಕರಾದ ಅಧ್ಯಾಪನ ಸಮುದಾಯಕ್ಕೆ ಸಹಜವಾಗಿ ಸಾಹಿತ್ಯವೇ ಕೊನೆಯ ನಿಲ್ದಾಣವಾಗಿ ಕಾಣುತ್ತದೆ. ಇದರಿಂದಾಗಿ ಸಾಹಿತ್ಯದ ಆನಂದದಲ್ಲಿ ಮುಳುಗಿಬಿಡುತ್ತದೆ. ಇದಕ್ಕೆ ಡಿಸ್ಟರ್ಬ್ ಆಗುವ ಸಂದರ್ಭಗಳಿಗೆ ಕಾರಣಗಳನ್ನು; ಬರವಣಿಗೆಯಲ್ಲಿ ಕಾಣುವ ತಪ್ಪುಗಳ ಪ್ರಶ್ನೆಯನ್ನು ಮುಖ್ಯಮಾಡಿಕೊಂಡಾಗ ಕಲಿಕಾರ್ಥಿಯ ಹಿಂದಿನ ತರಗತಿಗಳಿಗೆ ಹೊಣೆಯನ್ನು ಹೊರಿಸುತ್ತದೆ ಅಥವಾ ಕಲಿಕಾರ್ಥಿಗಳ ಅಶಿಸ್ತು ಎಂದು ಸಾಮಾನ್ಯೀಕರಿಸಿ ದೂರ ನಿಲ್ಲುತ್ತದೆ.

ಭಾಷಾ ಕಲಿಕೆಗೆ ಪ್ರಾಮುಖ್ಯತೆ ನೀಡದಿರುವ ಪ್ರಶ್ನೆ ಎದುರಾದಾಗ ಕಲಿಕಾರ್ಥಿಗಳ ಭಾಷಾ ತಿಳುವಳಿಕೆಯ ಸಾಮರ್ಥ್ಯವನ್ನು ಅಳೆಯುವುದು ಪ್ರಸ್ತುತ ಮೌಲ್ಯಮಾಪನದ ಉದ್ದೇಶವಾಗಿಲ್ಲ. ಬದಲಾಗಿ ಕಲಿಕಾರ್ಥಿಗಳ ಪಠ್ಯವಿಶಯದ ನೆನಪಿನ ಸಾಮರ್ಥ್ಯವನ್ನು ಅಳೆಯಲು ಮಾತ್ರ

ಸೀಮಿತವಾಗಿದೆ ಎಂದು ವ್ಯವಸ್ಥೆಯು ಸೃಷ್ಟಿಸಿರುವ ಇಕ್ಕಟ್ಟಿನ ಎದುರು ಅಸಹಾಯಕತೆಯನ್ನು, ಅಥವಾ ಅದರ ಪರವಾದ ಹುಸಿ ವಕ್ತಾರಿಕೆಯನ್ನು ಪ್ರದರ್ಶಿಸುತ್ತದೆ. ಆದರೆ ಆಗಬೇಕಾಗಿರುವುದು ಭಾಶಾ ತಿಳುವಳಿಕೆಗೆ ಸಂಬಂಧಿಸಿದ್ದು ಎಂಬ ವಿಚಾರದಲ್ಲಿ ಬಹುಮಟ್ಟಿಗೆ ಸ್ಪಶ್ಟತೆಯಿದ್ದರೂ, ಸಾರರೂಪಿಯಾದ ಬೋಧನೆಗೆ ಬೇಕಾದ ಕೌಶಲ ಸಾಹಿತ್ಯದಿಂದ ದೊರಕಿದೆಯಾದ್ದರಿಂದ ಅದನ್ನೆ, ಕಲಿಕಾರ್ಥಿಯ ಎದುರಿಗಿಡುವಲ್ಲಿ ತನ್ನ ಸಾರ್ಥಕತೆಯನ್ನು ಹುಡುಕಿಕೊಳ್ಳುತ್ತದೆ. ಇದು ವೈಯುಕ್ತಿಕವಾದ ಬೋಧನಾ ಶೈಲಿಗಳಲ್ಲಿ ಘಟಿಸಲ್ಪಡುವುದರಿಂದ ಇಂಥ ಪರ್ಸನಲ್ ಸ್ಪೇಸ್ ಕೊಡುವ ಅಧಿಕಾರವನ್ನು ಬಿಟ್ಟುಕೊಡುವ ಸಮಸ್ಯೆಯೂ ತಾನು ವ್ಯಕ್ತಪಡಿಸುತ್ತಿರುವ ಗೊಂದಲದಲ್ಲಿ ಇದ್ದೇ ಇದೆ ಎಂಬುದನ್ನು ಗ್ರಹಿಸಬೇಕಾಗುತ್ತದೆ. ಆದ್ದರಿಂದಾಗಿಯೆ, ತಾವು ಕಲಿಸಿದ ಸಾರರೂಪದ ಅಭಿವ್ಯಕ್ತಿಯನ್ನು ಕಲಿಕಾರ್ಥಿಗಳು ಸಮರ್ಥವಾಗಿ ನಿಭಾಯಿಸಬಲ್ಲವರಾಗುವಲ್ಲಿ ಅಧ್ಯಾಪನ ಸಮುದಾಯದ ಸಂಭ್ರವಿದೆ. ಇದನ್ನು, ಪಠ್ಯಕ್ರಮಗಳ ಸಂದರ್ಭದಲ್ಲಿ ಕಲಿಕಾರ್ಥಿಗಳ ಪರವಾಗಿ ತಾನು ನಿಂತು ಪ್ರತಿನಿಧೀಕರಿಸಿಕೊಳ್ಳುವ ಅಭಿಪ್ರಾಯದಲ್ಲಿಯೂ ಗಮನಿಸಬಹುದಾಗಿದೆ. ಈ ಅಂಶಗಳನ್ನು ಕಲಿಕಾರ್ಥಿಯ ನಿಲುವುಗಳಲ್ಲಿ, ಬೋಧನೆಯ ಮೂಲಕ ಸಾಮರ್ಥ್ಯವನ್ನು ಪರೀಕ್ಷಿಸುವ ಪಠ್ಯ ಮತ್ತು ಪ್ರಶ್ನೆಪತ್ರಿಕೆಯ ಮುಖಾಮುಖಿಯಲ್ಲಿ ಪರಿಶೀಲಿಸಿ ನೋಡಬಹುದಾಗಿದೆ.

**೬.೩ ಕಲಿಕೆಯ ಪ್ರಕ್ರಿಯೆ: ಕಲಿಕಾರ್ಥಿಯ ನಿಲುವುಗಳು**

ಬೆಂಗಳೂರು ವಿಶ್ವವಿದ್ಯಾಲಯ ವ್ಯಾಪ್ತಿಯ ಆಯ್ದ ೧೦ ಕಾಲೇಜುಗಳ ೨೨೬ ವಿದ್ಯಾರ್ಥಿಗಳನ್ನು ಸಂದರ್ಶಿಸಿ ೧೨ ಪ್ರಶ್ನೆಗಳ ಸರಣಿಯನ್ನು ಕೊಡಲಾಯಿತು. ಇಲ್ಲಿಯೂ ಸಹ ಪ್ರತಿ ಪ್ರಶ್ನೆಗೆ ಸಂಭವನೀಯ ನಾಲ್ಕು ಉತ್ತರಗಳ ಸರಣಿಯನ್ನು ಒದಗಿಸಲಾಗಿತ್ತು. ಈ ಬಗೆಯ ಪ್ರಶ್ನೆಗಳಿಗೆ ಪ್ರತಿಕ್ರಿಯಿಸಿದವರಲ್ಲಿ ೧೨೮ ಮಂದಿ ಹುಡುಗಿಯರು ಮತ್ತು ೯೮ ಮಂದಿ ಹುಡುಗರು ಇದ್ದು, ಇದರಲ್ಲಿ ಬಿಎ ಪದವಿಯನ್ನು ತೆಗೆದುಕೊಂಡವರು ೬೮ ಮಂದಿ, ಬಿಎಸ್ಸಿ ಪದವಿಗೆ ಅಭ್ಯಾಸ ಮಾಡುವವರು ೪೮ ಮಂದಿ, ಬಿಕಾಂ ಪದವಿಗೆ ಅಭ್ಯಾಸದಲ್ಲಿ ತೊಡಗಿದವರು ೪೧ ಮಂದಿ ಮತ್ತು ಬಿಬಿಎಂ ಪದವಿಯ ಕಲಿಕಾರ್ಥಿಗಳು ೬೯ ಮಂದಿ ಇದ್ದಾರೆ. ಇವರಲ್ಲಿ ಬಹುಮಟ್ಟಿಗೆ ಮೊದಲೆರಡು ವರುಶಗಳ ಅಭ್ಯಾಸವನ್ನು ಮುಗಿಸಿದವರನ್ನು ಆಯ್ಕೆ ಮಾಡಿಕೊಂಡು ಕನ್ನಡ ಭಾಶೆಯ ಪಠ್ಯಕ್ರಮ, ಕನ್ನಡ ತರಗತಿ, ಕನ್ನಡ ಕಲಿಕೆ ಮತ್ತು ಬೋಧಕ ಮತ್ತು ಕಲಿಕಾರ್ಥಿಗಳ ನಡುವಿನ ಸಂಬಂಧವನ್ನು ಕುರಿತಾಗಿ ಅಭಿಪ್ರಾಯವನ್ನು ಪಡೆಯಲಾಗಿದೆ. ಕಲಿಕಾರ್ಥಿಗಳ ಅಭಿಪ್ರಾಯಗಳನ್ನು ಹೀಗೆ ಕ್ರೋಢೀಕರಿಸಿಕೊಳ್ಳಬಹುದಾಗಿದೆ. ಬಹುಮಟ್ಟಿನ ಕಲಿಕಾರ್ಥಿಗಳ ಪ್ರಕಾರ:

- ಕನ್ನಡ ಭಾಶೆಯ ತರಗತಿಯು ಕನ್ನಡ ಭಾಶೆಯ ಕೌಶಲ ಮತ್ತು ಕನ್ನಡ ಸಾಹಿತ್ಯವನ್ನು ಅಭ್ಯಾಸ ಮಾಡುವ ತರಗತಿ. ಕನ್ನಡ ತರಗತಿಯೆಂದರೆ ಮನರಂಜನೆಯ ತರಗತಿ ಎಂಬ ಅಭಿಪ್ರಾಯವೂ ಇದೆ.
- ಕನ್ನಡ ತರಗತಿಯು ಕನ್ನಡ ಭಾಶೆಯ ಬಳಕೆಯ ಸ್ವರೂಪ, ಕನ್ನಡದಲ್ಲಿ ವ್ಯವಹಾರಿಕ ಕೌಶಲಗಳನ್ನು ತಿಳಿಯಲು ಅನುಕೂಲವಾದ, ಕನ್ನಡದ ಮೇಲಿನ ಅಭಿಮಾನ ಹುಟ್ಟಿಸುವ ತರಗತಿ.
- ಕನ್ನಡ ತರಗತಿಗಳಲ್ಲಿ ಪಡೆದುಕೊಳ್ಳುತ್ತಿರುವ ತಿಳುವಳಿಕೆಯು ಸಾಹಿತ್ಯದ ಮೂಲಕ ಸಾಮಾಜಿಕ ತಿಳುವಳಿಕೆ. ಮಾತು, ಓದು, ಬರಹ ಮತ್ತು ಅರ್ಥೈಸಿಕೊಳ್ಳುವ ಕೌಶಲಗಳು ಸಿಗುತ್ತದೆ ಎಂದು ಆಶಿಸಲಾಗಿದೆ. ಜೊತೆಗೆ ಸಾರ್ವಜನಿಕ ಉಪಯೋಗಿ ಕನ್ನಡ ಭಾಶೆಯ ತಿಳುವಳಿಕೆ ಆಗಬೇಕು ಎಂಬ ಆಶಯ ವ್ಯಕ್ತವಾಗಿದೆ.
- ಕನ್ನಡ ಭಾಶೆಯ ತಿಳುವಳಿಕೆಯ ಮೂಲಕ ಕಲಿಯುವ ಹೊಣೆಗಾರಿಕೆಯು ಸಾಮಾಜಿಕ ಸ್ವರೂಪವನ್ನು ಅರಿಯುವುದು, ಕನ್ನಡ ಮಾತನಾಡುವವರ ನಡುವೆ ಸಮಾನ ಅವಕಾಶಗಳನ್ನು ಕಂಡುಕೊಳ್ಳುವುದು ಎಂದು ಬಯಸಿದರೂ ಪಠ್ಯವು ಕನ್ನಡಸಾಹಿತ್ಯವನ್ನು ಓದಲು, ತಿಳಿಯಲು ಸೂಕ್ತವಾಗಿರಬೇಕೆಂಬ ಅಭಿಪ್ರಾಯವಿದೆ. ಈ ನಿಟ್ಟಿನಲ್ಲಿ ಸಮರ್ಪಕವಾಗಿ ಪಠ್ಯಗಳನ್ನು ರೂಪಿಸಬೇಕೆಂಬ ಆಶಯವಿದೆ.
- ಕನ್ನಡಸಾಹಿತ್ಯ ಖುಶಿ ಕೊಡುವುದರಿಂದ ಕನ್ನಡ ತರಗತಿ ಪ್ರಿಯವಾಗುತ್ತದೆ, ಮನೆ ಭಾಶೆ ಕನ್ನಡ ಆಗಿರುವುದರಿಂದ ಮತ್ತು ಕರ್ನಾಟಕದಲ್ಲಿ ವಾಸವಾಗಿರುವುದರಿಂದ ಕನ್ನಡ ಅಭ್ಯಾಸ ಮುಖ್ಯವಾಗಿದೆ.
- ಕಲಿಕಾರ್ಥಿ ಮತ್ತು ಅಧ್ಯಾಪಕರ ಸಂಬಂಧ ಬಹುಮಟ್ಟಿಗೆ ಸಮಾನವಾಗಿರಬೇಕೆಂದು ಆಶಿಸಲಾಗಿದೆ. ಈ ಕುರಿತು ಚಿಂತಿಸುವ ಅಗತ್ಯವಿಲ್ಲ ಎಂದು ಕೆಲವರು ಭಾವಿಸಿದರೆ ಮತ್ತೆ ಕೆಲವರು ಅಂತರ ಇರುವುದು ಸರಿ ಎಂದಿದ್ದಾರೆ.
- ಪಾಠ ವಿಶಯದ ನೆನಪಿನ ಸಾಮರ್ಥ್ಯವನ್ನು ಪರೀಕ್ಶಿಸುವುದು ಮತ್ತು ಭಾಶೆಯ ಬಳಕೆಯ ಸ್ವರೂಪವನ್ನು, ಕೌಶಲಗಳನ್ನು ಪರೀಕ್ಶಿಸುವ ಪ್ರಶ್ನೆಪತ್ರಿಕೆಯಿರಬೇಕೆಂಬ ಕಡೆಗೆ ಹೆಚ್ಚು ಕಡಿಮೆ ಸಮಸಮ ಅಭಿಪ್ರಾಯವಿದೆ. ಪಾಠ ವಿಶಯದ ಪ್ರಶ್ನೆಗಳು ಕಡಿಮೆ ಎಂಬ ಅಭಿಪ್ರಾಯ ಕೆಲವರಲ್ಲಿ, ಭಾಶಾ ಸಾಮರ್ಥ್ಯಕ್ಕೆ ಸಂಬಂಧಿಸಿದ ಪ್ರಶ್ನೆಗಳು ಕಡಿಮೆ ಎಂಬ

ಅಭಿಪ್ರಾಯ ಕೆಲವರಲ್ಲಿ ಇದ್ದು ಹೆಚ್ಚಿನ ಕಲಿಕಾರ್ಥಿಗಳು ಪ್ರಶ್ನೆ ಪತ್ರಿಕೆ ಈಗಿರುವಂತೆಯೇ ಇರಲಿ ಎನ್ನುತ್ತಾರೆ.

- ಮೌಲ್ಯಮಾಪನದ ಮೂಲಕ ಸಿಗುತ್ತಿರುವ ಅಂಕಗಳ ಕುರಿತಾಗಿ ಸರಿಯಾಗಿಯೇ ಸಿಗುತ್ತಿದೆ ಎಂಬ ಸಮಾದಾನ ಮತ್ತು ಸರಿಯಾಗಿ ಸಿಗುತ್ತಿಲ್ಲ ಎಂಬ ಅಸಮದಾನಗಳು ಸಮಸಮವಾಗಿಯೇ ವ್ಯಕ್ತವಾಗಿವೆ. ಕೆಲವರು ಮೌಲ್ಯಮಾಪನ ವ್ಯವಸ್ಥೆ ಬದಲಾಗಬೇಕಾದ್ದರ ಬಗ್ಗೆಯೂ ತಮ್ಮ ಅಭಿಮತ ತೋರಿಸಿದ್ದಾರೆ.

ಈ ಮೇಲಿನ ತಿಳುವಳಿಕೆಗಳೊಂದಿಗೆ ಕಲಿಕಾರ್ಥಿಗಳ ಅಭಿಪ್ರಾಯಗಳನ್ನು ಪರಿಶೀಲಿಸಿದಾಗ ಕಲಿಕೆಯ ಸಂದರ್ಭವೂ ಸಹ ಅಧ್ಯಾಪನ ಸಮುದಾಯದ ಅಭಿಪ್ರಾಯಗಳಲ್ಲಿ ವ್ಯಕ್ತವಾಗಿರುವ ಗೊಂದಲಗಳನ್ನು ಹೊತ್ತು ಮುಂದುವರಿಸುವುದೇ ಆಗಿದೆ ಎಂಬುದು ತಿಳಿಯುತ್ತದೆ. ಕನ್ನಡ ಸಾಹಿತ್ಯವನ್ನು ಅಭ್ಯಾಸ ಮಾಡುವ ತರಗತಿ, ಸಾಹಿತ್ಯದ ಮೂಲಕ ಸಾಮಾಜಿಕ ತಿಳುವಳಿಕೆ, ಕನ್ನಡದ ಮೇಲಿನ ಅಭಿಮಾನ ಹುಟ್ಟಿಸುವ ತರಗತಿ, ಕನ್ನಡಸಾಹಿತ್ಯ ಖುಶಿ ಕೊಡುವುದರಿಂದ ಕನ್ನಡ ತರಗತಿಯ ಅಗತ್ಯ, ಕನ್ನಡ ತರಗತಿಯೆಂದರೆ ಮನರಂಜನೆಯ ತರಗತಿ, ಕನ್ನಡಸಾಹಿತ್ಯವನ್ನು ಓದಲು, ತಿಳಿಯಲು ಸೂಕ್ತವಾಗಿರಬೇಕೆಂಬ ಅಭಿಪ್ರಾಯಗಳನ್ನು ಗಮನಿಸಿದಲ್ಲಿ ಇದು ಸ್ಪಷ್ಟವಾಗುತ್ತದೆ.

ಪಾಠ ವಿಶಯದ ಪ್ರಶ್ನೆಗಳು ಕಡಿಮೆ ಎಂಬ ಕೆಲವರ ಅಭಿಪ್ರಾಯ, ಭಾಶಾ ಸಾಮರ್ಥ್ಯಕ್ಕೆ ಸಂಬಂಧಿಸಿದ ಪ್ರಶ್ನೆಗಳು ಕಡಿಮೆ ಎಂಬ ಮತ್ತೆ ಕೆಲವರ ಅಭಿಪ್ರಾಯ ಮತ್ತು ಮೌಲ್ಯಮಾಪನ ಕುರಿತಾದ ಸಮಾಧಾನ ಮತ್ತು ಅಸಮಾಧಾನಗಳೂ ಸಹ ಭಾಶಿಕ ಪತ್ರಿಕೆಯ ಮೂಲಕ ಕಲಿಯಬೇಕಾದ್ದು ಏನು, ಯಾಕೆ, ಮತ್ತು ಹೇಗೆ ಎನ್ನುವುದರಲ್ಲಿರುವ ಅಸ್ಪಶ್ಟತೆಯ ಪರಿಣಾಮವೇ ಆಗಿದೆ ಎಂದು ಗ್ರಹಿಸಬಹುದಾಗಿದೆ.

**ಟೇಬಲ್–೧೦**

| ಕಲಿಕಾರ್ಥಿ ಸಮುದಾಯದ ಅಭಿಪ್ರಾಯ ಗೊಂದಲಗಳು | |
|---|---|
| ಸಾಹಿತ್ಯದ ಪಠ್ಯಗಳ ಮೂಲಕ ಸಂಸ್ಕೃತಿ, ಸಮಾಜ ಚಿಂತನೆಗಳ ಬಗೆಗಿನ ಒಲವು | ೫೨% |
| ಭಾಶಾ ಕೌಶಲಗಳು ಇರಬೇಕೆಂಬ ಆಶಯ | ೩೮% |
| ಇತರೆ | ೧೦% |

ಕಲಿಕಾರ್ಥಿ ಸಮುದಾಯದ ಅಭಿಪ್ರಾಯ ಗೊಂದಲಗಳನ್ನು ಬಿಂಬಿಸುವ ನಕ್ಷೆ




ಹೀಗಾಗಿ, ಕನ್ನಡ ಭಾಷೆಯ ಬಳಕೆಯ ಸ್ವರೂಪ, ಕನ್ನಡದಲ್ಲಿ ವ್ಯವಹಾರಿಕ ಕೌಶಲ, ಸಾರ್ವಜನಿಕ ಉಪಯೋಗಿ ಕನ್ನಡ ಭಾಷೆಯ ತಿಳುವಳಿಕೆ ಎನ್ನುವುದು ಆಶಯಗಳ ನೆಲೆಯಲ್ಲಿ ಮಾತ್ರವೆ ಕಾಣಿಸಿಕೊಳ್ಳುತ್ತವೆ. ಇದು ಅಧ್ಯಾಪನದ ನೆಲೆಯಲ್ಲಿಯೂ ಸಹಜವಾಗಿಯೆ ಅಭಿವ್ಯಕ್ತಗೊಂಡಿದೆ.

ಈ ಹಿನ್ನೆಲೆಯಲ್ಲಿ ಒಟ್ಟು ಕಲಿಕೆಯ ಪ್ರಕ್ರಿಯೆಯು ಪರಂಪರೆಯಿಂದ ಪ್ರವೃತ್ತವಾದ ಅಧಿಕಾರ ಸಂಬಂಧಗಳಲ್ಲಿಯೇ ನಡೆಯುತ್ತದೆ ಮತ್ತು ಅದನ್ನು ಮುಂದುವರಿಸುವಲ್ಲಿಯೆ ಪರ್ಯವಸಾನಗೊಳ್ಳುತ್ತದೆಯೆ ಹೊರತು ಬೇರೇನೂ ಅಲ್ಲ ಎಂಬುದು ಸ್ಪಷ್ಟವಾಗುತ್ತದೆ. ಕನ್ನಡ ಕಲಿಕೆಯ ನೆಪದಲ್ಲಿ ಯಜಮಾನ ಪರಂಪರೆಯನ್ನು ಜೀವಂತವಾಗಿರಿಸುವುದು ಸುಲಭವೂ ಆಗುತ್ತದೆ. ಇದು ಪಠ್ಯನಿರ್ಧಾರದ ನೆಲೆಯಿಂದಲೇ ಮೊದಲುಗೊಳ್ಳುವ ಅಂಶವಾಗಿದೆ. ಇದನ್ನು ಪಠ್ಯ ಮತ್ತು ಪರೀಕ್ಷೆಯ ವಿದ್ಯಮಾನದಲ್ಲಿಯೂ ಪರಿಶೀಲಿಸಿ ನೋಡಬಹುದಾಗಿದೆ.

**೬.೪ ಪಠ್ಯ ಕಟ್ಟಿಕೊಡುವ ತಿಳುವಳಿಕೆ, ಪರೀಕ್ಷೆ ಮತ್ತು ಮೌಲ್ಯಮಾಪನ: ಸಾಮರ್ಥ್ಯ ನಿರ್ಧಾರದ ಪ್ರಶ್ನೆ**

ಶಿಕ್ಷಣ ಕ್ರಮದೊಳಗೆ ಪ್ರವೇಶ ಪಡೆಯುವ ವ್ಯಕ್ತಿ(ಕಲಿಕಾರ್ಥಿ)ಯ ಸಾಮರ್ಥ್ಯ ಪರೀಕ್ಷೆಗಾಗಿಯೆ ಪಠ್ಯ, ಪಠ್ಯದ ಬೋಧನೆ ಮತ್ತು ಪಠ್ಯ ಕಟ್ಟಿಕೊಡುವ ತಿಳುವಳಿಕೆಯನ್ನು ಪರೀಕ್ಷಿಸುವ ಮೌಲ್ಯಮಾಪನ ಚಟುವಟಿಕೆಗಳು ರೂಪುಗೊಳ್ಳುತ್ತವೆ. ಆ ಮೂಲಕ ನಾಗರಿಕ ಪ್ರಜ್ಞೆಗೆ

ಬೇಕಾಗಿರುವ ಯೋಗ್ಯತೆಯನ್ನು ಅಧಿಕೃತಗೊಳಿಸಲಾಗುತ್ತದೆ. ಅಂಕಪಟ್ಟಿಗಳು ಈ ಪ್ರಜ್ಞೆಯನ್ನು ಪ್ರದರ್ಶಿಸುವ ಸಂಕೇತಗಳಾಗುತ್ತವೆ. ಇಂಥ ಸಂಕೇತಗಳ ದುಡಿಮೆಯಲ್ಲಿ ಯಜಮಾನ ಮೌಲ್ಯಗಳನ್ನು ಪಠ್ಯ ಮತ್ತು ಪರೀಕ್ಷೆಯ ಸಂಬಂಧಗಳಲ್ಲಿ ಹೇಗೆ ಕಲಿಕಾರ್ಥಿಗಾಗಿ ಜಾರಿಗೊಳಿಸಲಾಗುತ್ತದೆ ಎನ್ನುವುದನ್ನು ಉದಾಹರಣೆಗಳ ಮೂಲಕ ಪರಿಶೀಲಿಸಿಕೊಳ್ಳಬಹುದಾಗಿದೆ. ಇಲ್ಲಿನ ಉದಾಹರಿತ ಪಠ್ಯಗಳ ಆಯ್ಕೆಯ ಹಿಂದಿನ ಮಾನದಂಡವು ಅತಿ ಹೆಚ್ಚು ಅವಧಿಯಲ್ಲಿ ಪಠ್ಯಕ್ರಮದ ಭಾಗವಾಗಿರುವುದು, ಅಥವಾ ನಿರ್ದಿಷ್ಟ ರಚನೆಕಾರ ಅತಿ ಹೆಚ್ಚು ಬಾರಿ ಪಠ್ಯಕ್ರಮದೊಳಗೆ ಪ್ರವೇಶ ಪಡೆದಿರುವುದು ಮತ್ತು ಕನ್ನಡ ಸಾಹಿತ್ಯ ಚರ್ಚೆಯ ಸಂದರ್ಭದಲ್ಲಿ ಪ್ರಾಮುಖ್ಯತೆ ಪಡೆದಿರುವುದು ಆಗಿದೆ.

ಇಪ್ಪತ್ತನೇ ಶತಮಾನದ ಸಾಹಿತ್ಯದ ಚರ್ಚೆಯಲ್ಲಿ(ಅದರಲ್ಲೂ ನವೋದಯದ ವಿಮರ್ಶಕರು) ಅತಿ ಹೆಚ್ಚು ಚರ್ಚೆಗೆ ಒಳಗಾಗಿರುವ ಪಠ್ಯವೆಂದರೆ ಕುಮಾರವ್ಯಾಸ ಕವಿಯ **ಕರ್ಣಾಟ ಭಾರತ ಕಥಾಮಂಜರಿ**. ಇದು ತಿಳಿಯ ಹೇಳಿದ ಕೃಷ್ಣ ಕಥೆ, ಪಂಚಮಶೃತಿ. ಅರಸುಗಳಿಗಿದು ವೀರ, ದ್ವಿಜರಿಗೆ ಪರಮ ವೇದದ ಸಾರ, ಮಂತ್ರಿಗಳ ಬುದ್ಧಿಗುಣವೆಂದು ಸಾಮಾಜಿಕ ಶ್ರೇಣೀಕರಣವನ್ನು ರೂಪಕಗಳಲ್ಲಿ ವಿವರಿಸುವ, **ಕುಮಾರವ್ಯಾಸ ಭಾರತ**ವೆಂದೇ ಅತಿ ಹೆಚ್ಚು ಪ್ರಚುರದಲ್ಲಿರುವ ಈ ಕೃತಿಯ ಭಾಗಗಳು ಬೆಂಗಳೂರು ವಿಶ್ವವಿದ್ಯಾಲಯದ ಪದವಿಯ ಪಠ್ಯಕ್ರಮದಲ್ಲಿ ಇಲ್ಲದ ವರುಶಗಳು ಅತ್ಯಂತ ಕನಿಷ್ಟ. ಉದ್ಯೋಗ ಪರ್ವ ಸಂಗ್ರಹ(೧೯೬೮-೬೯), ಭಾರತ ಕಥಾಮಂಜರಿ(೧೯೬೮-೬೯, ೧೯೭೧-೭೨), ಕುಮಾರವ್ಯಾಸ ಸರಸವಾಣಿ(೧೯೬೯-೭೦, ೧೯೭೧-೭೨, ೧೯೭೬-೭೭) ವೀರಕುಮಾರ ಸಂಗ್ರಾಮ(೧೯೭೩-೭೪), ಅಗ್ನಿಪಥ(೧೯೭೭-೭೮) ಹೆಸರಿನ ಪಠ್ಯಪುಸ್ತಕಗಳಲ್ಲಿ ಬಹುಮಟ್ಟಿಗೆ ಪೂರ್ಣ ಪ್ರಮಾಣದಲ್ಲಿ ಕಾವ್ಯಪಠ್ಯದ ಭಾಗವಾಗಿ ಮೊದಲ ದಶಕದಲ್ಲಿ ಕಲಿಸಲಾಗಿದೆ. ಅನಂತರದಲ್ಲಿ ಕನ್ನಡ ಬಾವುಟ, ಮಧ್ಯಕಾಲೀನ ಕನ್ನಡ ಕವಿತೆ-೧(೧೯೭೮-೭೯, ೭೯-೮೦, ೮೦-೮೧) ಮತ್ತು ೨(೧೯೮೧-೮೨), ಪ್ರಾಚಿನ ಕಾವ್ಯ ಮಾರ್ಗ-೧(೧೯೮೨-೮೩, ೮೩-೮೪, ೮೪-೮೫, ೮೬-೮೭, ೯೧-೯೨) ಪ್ರಾಚಿನ ಕಾವ್ಯ ಮಾರ್ಗ-೨ (೧೯೮೭-೮೮, ೮೮-೮೯, ೮೯-೯೦, ೯೦-೯೧, ೯೮-೯೯, ೯೯-೨೦೦೦) ಪ್ರಾಚಿನ ಕಾವ್ಯ ಮಾರ್ಗ-೩(೧೯೯೨-೯೩, ೯೩-೯೪) ಮತ್ತು ಪ್ರಾಚಿನ ಕಾವ್ಯ ಮಾರ್ಗ-೪(೧೯೯೪-೯೫, ೯೫-೯೬, ೯೬-೯೭, ೯೭-೯೮) ಸಂಕಲನಗಳ ಮೂಲಕ ೨೦೦೦ ಇಸವಿಯವರೆಗೂ, ಪ್ರಾಚೀನ ಕಾವ್ಯಾಂಜಲಿ(೨೦೦೦-೦೧, ೦೧-೦೨, ೦೨-೦೩, ೦೩-೦೪) ಪ್ರಾಚೀನ ಕಾವ್ಯ ಸೌರಭ(೨೦೦೦-೦೧, ೦೧-೦೨, ೦೨-೦೩, ೦೩-೦೪), ಪ್ರಾಚೀನ ಕಾವ್ಯಮಾಲೆ(೨೦೦೦-೦೧, ೦೧-೦೨, ೦೨-೦೩, ೦೩-೦೪), ಪ್ರಾಚೀನ ಕಾವ್ಯ ಕುಸುಮ(೨೦೦೪-೦೫,

೦೫-೦೬, ೦೬-೦೭) ಪ್ರಾಚೀನ ಕಾವ್ಯ ದರ್ಶನ(೨೦೦೪-೦೫, ೦೫-೦೬, ೦೬-೦೭) ಪ್ರಾಚೀನ ಕಾವ್ಯ ಧಾರೆ(೨೦೦೪-೦೫, ೦೫-೦೬, ೦೬-೦೭) ಸಂಕಲನಗಳಲ್ಲಿ ೨೦೦೭ರವರೆಗೂ ಆಯ್ದ **ರಸವತ್ತಾದ**(ಅಧ್ಯಾಪನ ಸಮುದಾಯ ಪಾರಂಪರಿಕವಾಗಿ ಬಯಸುವಂತೆ) ಭಾಗಗಳ ಮೂಲಕ ಪ್ರತಿನಿಧಿಸಿಕೊಂಡಿರುವುದು ಕಾಣುತ್ತದೆ. ಆದ್ದರಿಂದಾಗಿಯೆ ಈ ಪಠ್ಯಗಳ ಕುರಿತ ಪ್ರಶ್ನೆಗಳನ್ನು ಗಮನಿಸುವುದರ ಮೂಲಕ ಕಲಿಕೆಯಲ್ಲಿ ಪ್ರವೃತ್ತಗೊಂಡ ತಿಳುವಳಿಕೆ ಎಂಥಹುದು ಎಂಬುದನ್ನು ಗ್ರಹಿಸಬಹುದಾಗಿದೆ. ೧೯೬೯ರಲ್ಲಿ ಮೊದಲ ವರುಶದ ಬಿಎ, ಬಿಎಸ್ಸಿಗೆ ಪಠ್ಯವಾದ ಉದ್ಯೋಗ ಪರ್ವ ಸಂಗ್ರಹ ಪಠ್ಯದ ಕುರಿತ ಪರೀಕ್ಷೆಯ ಈ ಪ್ರಶ್ನೆಗಳನ್ನು ಗಮನಿಸಿ;

೧. ಅರ್ಜುನನಿಗೆ ಕೃಷ್ಣನು ಸಾರಥಿಯಾಗಿರಲು ಒಪ್ಪಿದ **ಸನ್ನಿವೇಶ**ವನ್ನು ಕುಮಾರವ್ಯಾಸನು ಹೇಗೆ ನಿರೂಪಿಸಿದ್ದಾನೆ?

೨. ವಿದುರನ ಭಕ್ತಿ ಎಂಥದು? ಉದ್ಯೋಗ ಪರ್ವದ **ಕಥೆಯ ಸಹಾಯ**ದಿಂದ ಸ್ಪಷ್ಟಪಡಿಸಿ.

೩. ಕರ್ಣ, ಕುಂತಿ-ಇವರ **ಸಂಭಾಶಣೆಯ ಸಾರಾಂಶ**ವನ್ನು ತಿಳಿಸಿ, ಈ ಸಂದರ್ಭದಲ್ಲಿ ವ್ಯಕ್ತಪಡುವ ಕರ್ಣನ ಗುಣಗಳನ್ನು ವಿಶದಪಡಿಸಿ.

೪. ಕಾಳಗವನೆ ಬಲಿದು ಬಹೆನು ಎಂದು ದ್ರೌಪದಿಗೆ ಕೃಷ್ಣನು ಮಾತು ಕೊಟ್ಟ **ಪ್ರಸಂಗದಲ್ಲಿರುವ ಸ್ವಾರಸ್ಯ**ವನ್ನು ಕುಮಾರವ್ಯಾಸನು ಹೇಗೆ ಚಿತ್ರಿಸಿದ್ದಾನೆ?

೧೯೬೯ರ ಪ್ರಶ್ನೆ ಪತ್ರಿಕೆಯಿಂದ ದಾಖಲಿಸಿರುವ ಈ ಪ್ರಶ್ನೆಗಳಲ್ಲಿನ ಸನ್ನಿವೇಶ, ಕಥೆಯ ಸಹಾಯ, ಸಂಭಾಶಣೆಯ ಸಾರಾಂಶ, ಪ್ರಸಂಗದಲ್ಲಿರುವ ಸ್ವಾರಸ್ಯ ಈ ಪದಗುಚ್ಛಗಳನ್ನು ಗಮನಿಸಿದಲ್ಲಿ ಬೋಧನೆ ಮತ್ತು ಕಲಿಕೆಗಳಲ್ಲಿ ಪ್ರವೃತ್ತವಾಗುವ ಪಠ್ಯದ ತಿಳುವಳಿಕೆ ಯಾವ ಬಗೆಯದೆಂಬುದು ಸ್ಪಷ್ಟವಾಗುತ್ತದೆ. ಇದೇ ಸಾಹಿತ್ಯ ಕಲಿಕೆಯೆನಿಸಿಕೊಳ್ಳುತ್ತದೆ. ಇಂಥ ಸಾರರೂಪಿ ತಿಳುವಳಿಕೆಯು ಕಟ್ಟಿಕೊಡುವ ಮೌಲ್ಯಗಳೇ **ಜ್ಞಾನ** ಎನಿಸಿಕೊಳ್ಳುತ್ತದೆ. ಈ **ಮೌಲ್ಯಜ್ಞಾನ**ವೇ ನಾಗರಿಕ ಪ್ರಜ್ಞೆಯೂ ಆಗಿ ನಾಳಿನ ಪ್ರಜೆಯನ್ನು ನಿರ್ಧರಿಸುತ್ತದೆ. ಇದೇ ಕನ್ನಡ ಜ್ಞಾನವೆಂದಾಗಿ ಮೌಲ್ಯಮಾಪನದ ಮೂಲಕ ಅಧಿಕೃತಗೊಳ್ಳುತ್ತದೆ.

ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಸಂಸ್ಕೃತ ಸಾಹಿತ್ಯ ಅತ್ಯಂತ ಹೆಚ್ಚು ಚರ್ಚೆಗೆ ಒಳಗಾಗಿದೆ. ರಾಮಾಯಣ, ಮಹಾಭಾರತಗಳು ಇದರ ಚಾಲಕ ಶಕ್ತಿಯಂತೆ ಕಂಡರೂ, ಸಂಸ್ಕೃತ ಪರಂಪರೆಯ ಮೂಲ ದ್ರವ್ಯಗಳಾದ ಶೃತಿ, ಆಗಮಗಳು ಇದರ ಮೂಲ ನೆಲೆಯಾಗಿವೆ. ಈ ಹಿನ್ನೆಲೆಯಲ್ಲಿ ಗಮನಿಸುವಾಗ ಕನ್ನಡ ಪಠ್ಯಕ್ರಮಗಳ ಭಾಗವೂ ಆಗಿರುವ ಸಂಸ್ಕೃತ ಕವಿಗಳ ಮೂಲಕ ವರ್ಣಾಶ್ರಮ ಧರ್ಮದವನ್ನು ಆಧುನಿಕದಲ್ಲಿ ಜಾರಿಗೊಳಿಸುವ ವಿದ್ಯಮಾನಗಳು ಸ್ಪಷ್ಟವಾಗಿ

ಕಾಣಿಸಿಕೊಳ್ಳುತ್ತವೆ. ಹೀಗೆ ಪಠ್ಯಕ್ರಮದ ಭಾಗವಾದವರಲ್ಲಿ ಬಾಸ ಮತ್ತು ಕಾಳಿದಾಸ ಕವಿಗಳು ಪ್ರಮುಖವಾಗಿ ಕಾಣಿಸಿಕೊಳ್ಳುತ್ತಾರೆ. ಈ ಇಬ್ಬರ ಕೃತಿಗಳು ಕನ್ನಡ ಅವತರಣಿಕೆಗಳ ಮೂಲಕ ಪದವಿ ಕನ್ನಡ ಪಠ್ಯಕ್ರಮದಲ್ಲಿ ೨೦೦೩-೦೪ರ ತನಕ ಆಗಾಗ ಸೇರುತ್ತಲೇ ಬಂದಿರುವುದು ಕಾಣುತ್ತದೆ. ಬಾಸನ ಏಕಾಂಕ ನಾಟಕಗಳು(ಎಲ್.ಗುಂಡಪ್ಪ), ಕನ್ನಡ ಪ್ರತಿಮಾ ನಾಟಕ(ಕೆ.ಕೃಷ್ಣಮೂರ್ತಿ), ಬಾಸನ ಎರಡು ನಾಟಕಗಳು(ಸಿ,ಪಿ.ಕೆ), ಕರ್ನಾಟಕ ಪ್ರತಿಮಾ ನಾಟಕಂ(ಮೈಸೂರು ಸೀತಾರಾಮಶಾಸ್ತ್ರಿ), ರಾಮಾಯಣ ನಾಟಕ ತ್ರಿವೇಣಿ(ಎಲ್.ಬಸವರಾಜು) ಕೃತಿಗಳು ಬೆಂಗಳೂರು ವಿಶ್ವವಿದ್ಯಾಲಯದ ಪಠ್ಯಕ್ರಮದಲ್ಲಿ ಸೇರಿವೆ. ಕಾಳಿದಾಸನ ಮಾಲವಿಕಾಗ್ನಿ ಮಿತ್ರ ನಾಟಕಂ(ಸುಬ್ರಹ್ಮಣ್ಯ ಶಾಸ್ತ್ರಿ), ಅದೇ ಹೆಸರಿನಲ್ಲಿ ಒಂದು ಬಾರಿ, ಮತ್ತು ವಿದಿಶೆಯ ವಿದೂಶಕ(ಕೆ.ವಿ. ಸುಬ್ಬಣ್ಣ) ಹೆಸರಿನಲ್ಲಿ ಎರಡು ಅವದಿಗಳಿಗೆ ಪಠ್ಯವಾಗಿದ್ದರೆ, **ಕರ್ನಾಟ ಶಾಕುಂತಲ ನಾಟಕಂ** ಕೃತಿಯ ಬಸವಪ್ಪ ಶಾಸ್ತ್ರಿಗಳ ಅನುವಾದವು ಎಚ್. ಎಂ ಶಂಕರನಾರಾಯಣರಿಂದ ಸಂಪಾದಿಸಲ್ಪಟ್ಟು ೧೯೬೮-೬೯ ಮತ್ತು ೧೯೯೧-೯೨ ಎರಡು ಅವಧಿಗಳಲ್ಲಿಯೂ ಮತ್ತು ಎಸ್.ವಿ. ಪರಮೇಶಭಟ್ಟರಿಂದ ಅನುವಾದಿಸಲ್ಪಟ್ಟ **ಕನ್ನಡ ಅಭಿಜ್ಞಾನ ಶಾಕುಂತಳ**ವು ೧೯೬೭-೬೮ ಮತ್ತು ೧೯೮೩-೮೪ರ ಅವಧಿಗಳಲ್ಲಿ ಪಠ್ಯಕ್ರಮ(ಎಸ್.ವಿ.ಪರಮೇಶವರ ಭಟ್ಟ ೧೯೮೩)ದ ಭಾಗವಾಗಿದೆ.

**ಆರ್ಯ ಸಂಸ್ಕೃತಿ**ಯ ಪ್ರಸ್ತಾಪದಿಂದಲೇ ಮೊದಲುಗೊಳ್ಳುವುದು ಸಂಸ್ಕೃತ ನಾಟಕಗಳ ಸಾಮಾನ್ಯ ಲಕ್ಷಣ. ಶಾಕುಂತಲ" ನಾಟಕವೂ ಸಹ ಬ್ರಹ್ಮಸೃಷ್ಟಿ, ಶಾಸ್ತ್ರ ಶೃತಿವಿಶಯಗಳ ದೈವ ಪ್ರಾರ್ಥನೆಯೊಂದಿಗೆ ಶುರುವಾಗುತ್ತದೆ. ಆರ್ಯ, ಆರ್ಯಪುತ್ರ, ಆರ್ಯೆ ಎಂಬ ಸಂಬೋಧನೆಗಳಲ್ಲಿಯೇ ವ್ಯಕ್ತಿ ಸಂಬಂಧಗಳನ್ನು ನಿರೂಪಿಸಲ್ಪಡುತ್ತಾ ಸಾಗುವ ನಾಟಕದ ಕ್ರಿಯೆಯು ತಳಸಮುದಾಯಗಳ(ಬೆಸ್ತ) ಪ್ರವೇಶದಲ್ಲಿ ಮಾತ್ರ ಭಾಶೆಯನ್ನು ಬದಲಾಯಿಸಿಕೊಳ್ಳುತ್ತದೆ. **ಸ್ಮೃತಿ** ಮತ್ತು **ಮರೆವಿ**ನ ಮೂಲಕ ಆರ್ಯಭೂಮಿಯ ಗಂಡಾದ ದುಶ್ಯಂತನ ಕಥೆಯನ್ನು ಮುಖ್ಯ ಭೂಮಿಕೆಯನ್ನಾಗಿ ಮಾಡಿಕೊಂಡು ಹೆಣ್ಣಿನ ಸಂಬಂಧದಲ್ಲಿ ನಿರೂಪಿಸಲ್ಪಡುವ ನಾಟಕ ಇದಾಗಿದೆ. ರಾಜನೂ, ಗಂಡೂ, ವರ್ಣಾಶ್ರಮ ಧರ್ಮ ರಕ್ಶಕನೂ ಆಗಿ **ಅಧಿಕಾರ**ದ ನೆಲೆಯಲ್ಲಿರುವ ದುಶ್ಯಂತನ ಮೂಲಕ ಪಾರಂಪರಿಕ ಯಜಮಾನಿಕೆಯನ್ನು ಕಟ್ಟಿಕೊಡುವ ಮಹತ್ವದ ಕೃತಿಯಾಗಿ ಇದು ಕಾಣುತ್ತದೆ. ಹಾಗಾಗಿಯೆ ಶಾಕುಂತಲೆ ಇರುವ ಆಶ್ರಮ ರಾಜನಿಗೆ ಅಚಾನಕ್ಕಾಗಿ ಎದುರಾಗುತ್ತದೆ. ಅಶ್ರಮ ಪ್ರವೇಶಿಸಿದ ಕೂಡಲೆ **ಪೂರ್ವಿಕರನನುಸರಿಸುತಿಹ,** ಪುತ್ರರಿಲ್ಲದ ಇಂದ್ರಸಖ ದುಶ್ಯಂತನಿಗೆ **ಪುರುಕುಲಜರಾರ್ತರಕ್ಶಣ ಯಜ್ಞಬಾರದೀಕ್ಶಿತ**ರಿಂದ **ಚಕ್ರವರ್ತಿ ಪುತ್ರನ ಪಡೆದು** ಬಾಳು ಎಂಬ ಆಶಿರ್ವಾದ ಸಿಗುತ್ತದೆ. ಶಾಕುಂತಲೆಯನ್ನು ಕಂಡು ಶೃಂಗಾರ ರಸವೇ ಮೈ ಪಡೆಯುವಲ್ಲಿ

**ಪುಣ್ಯಾಶ್ರಮ** ದರ್ಶನವಾಗಿ ಕಾಣುತ್ತದೆ. **ಆಕೆ ಅಸವರ್ಣ** ಸ್ತ್ರೀಯಿರಬಹುದೇ ಎಂದು ಶಂಕೆಯುಂಟಾದರೂ **ಮೆರೆವ ಮೈಯೊಳು ಹೂವಿನಂದದ ಹರೆಯವೇ** ದಿಟವಾಗಿರುವುದರಿಂದ **ಆರ್ಯಮೆನಿಸುವ ಬಗೆಯನ್ನು** ಯೋಚಿಸಲಾಗುತ್ತದೆ. **ಧರ್ಮಾಚರಣೆಯಲ್ಲಿ ಕೂಡ ಪರಾಧೀನೆಯಾದ** ಈಕೆ **ಕಾಮಿಗಳ ಮನೋವೃತ್ತಿ ಚೇಷ್ಟೆಗೆ ಪ್ರತಿ ರೂಪ**ವಾಗಿ ಕಾಣುತ್ತಾಳೆ. ದುಶ್ಯಂತನ ಈ ಬಯಕೆಯನ್ನು ಅವನ ಮಿತ್ರನೂ-ಮಹಾಬ್ರಾಹ್ಮಣನೂ-ಆಗಿರುವ ವಿದೂಶಕನು ಹೀಗೆ ವ್ಯಾಖ್ಯಾನಿಸುತ್ತಾನೆ; **ಪಿಂಡಖರ್ಜೂರಗಳನ್ನು ತಿಂದು ಬೆಸರವಾದವನು ಹುಣಿಸೆ ಹಣ್ಣಿಗೆ ಬಾಯಿಬಿಟ್ಟಂತೆ ಆಯಿತು, ಸ್ತ್ರೀರತ್ನಗಳನ್ನು ಭೋಗಿಸುತ್ತಿದ್ದ ನಿನಗೆ ಈ ಬಯಕೆ ಬಂದದ್ದು** ಎಂದು. ದೈವಯೋಗದಿಂದ ಇಂಥ ಅನುರೂಪ ವಸ್ತುವನ್ನು ಶಾಕುಂತಲೆ ಸೇರುವಂತಾಗುತ್ತದೆ. ನನೆಕೊನೆವೋದ ಮಲ್ಲಿಗೆ ಬೀಳಿನಂತಿರುವ ಶಾಕುಂತಲೆಗೆ ದುಶ್ಯಂತ(ರಾಜಾನೋ ಬಹುವಲ್ಲಭಾಃ) ಚಿಗುರಿದ ಮಾಮರವಾಗುತ್ತಾನೆ. ಭಯಗೊಂಡ ಶಾಕುಂತಲೆಗೆ ದುಶ್ಯಂತ **ಗಾಂದರ್ವವಿಧಿಯಿಂದೆ ಕೂರ್ತ್ತವರವರಿಸಿಹರು, ಎನಿತೆನಿತೊ ಮುನಿಸುತೆಯರು, ಅರಸುಕುವರಿಯುರು. ಈ ಕಥೆಯ ಕೇಳ್ದ ಬಳಿಕ ತಂದೆತಾಯಿಯುರು ತಂತಮ್ಮ ಮಕ್ಕಳನ್ನು ಅಭಿನಂದಿಸಿಹರು** ಎಂದು ಸಮಾಧಾನಿಸಿ **ಕಚ್ಚಿಗಾಯಗಳಾಗದಾ ಮೃದು ಮಧುರವಹ ನಿನ್ನಧರ ರಸವನು ಮೆಲ್ಲನೆಲೆ ಚಲುವೆ ಹೊಚ್ಚಹೊಸತಾವರೆಯನು ಎಂತು ಅಳಿಯು ಅಂತು ಬಾಯಾರಿರುವ ನಾನೊಲಿದು ಈಂಟಿ ಕೈ ಬಿಡುವೆ** ಎನ್ನುತ್ತಾನೆ. ಹೀಗೆ ದುಶ್ಯಂತ ಶಾಕುಂತಲೆಯರ ಸಮಾಗಮದ ಸಂದರ್ಭ **ಹೋಮವೇದಿ**ಯಾಗುತ್ತದೆ. **ಯಜಮಾನನ ಕೈಯಿಂದ ಆಹುತಿ ದೈವಯೋಗದಿಂದ ಅಗ್ನಿಯಲ್ಲಿಯೇ ಬಿಳುತ್ತದೆ.**

ಇಶ್ಟು ಘಟನೆಗಳು ನಡೆದ ನಂತರದಲ್ಲಿ ರಾಜ ದುಶ್ಯಂತ ರಾಜದಾನಿಯನ್ನು ಸೇರಿಕೊಳ್ಳುತ್ತಾನೆ. ಶಾಕುಂತಲೆಯ ಮೇಲೆ ಮರೆವಿನ ಶಾಪ ಆವರಿಸುತ್ತದೆ. ಶಾಕುಂತಲೆಯಲ್ಲಿ **ನೆನಪೂ**, ದುಶ್ಯಂತನಲ್ಲಿ **ಮರೆವೂ** ಸ್ಥಾಯಿಗಳಾಗಿ ನಾಟಕದ ಕ್ರಿಯೆಯೊಳಗೆ ಅಧಿಕಾರದ ರಾಜಕಾರಣವೊಂದು ಮುನ್ನೆಲೆಯನ್ನು ಪಡೆದುಕೊಳ್ಳುತ್ತದೆ. ಇದನ್ನು ನಿಭಾಯಿಸಿಕೊಳ್ಳುವುದಕ್ಕಾಗಿ ಈ ನೆನಪು ಮತ್ತು ಮರೆವಿನ ಕೊಂಡಿಯಾಗಿ **ಉಂಗುರ**ವನ್ನು ತರಲಾಗುತ್ತದೆ. ಶಕುಂತಲೆಯನ್ನು ಗಂಡನ ಮನೆಗೆ ಕಳುಹಿಸಿಕೊಡುವ ಏರ್ಪಾಡುಗಳು ನಡೆಯುತ್ತವೆ. ಆಕೆಯನ್ನು ಸಲಹಿದ ಕಣ್ವ ಹೀಗೆ ಹರಸುತ್ತಾನೆ; **ಹಿರಿಯರನು ಓಲೈಸು, ಮತ್ತೆ ನೀಂ ಪ್ರಿಯ ಸಖಿಯ ತೆರದೊಳಿರು ಸವತಿಯರೊಳು, ಮುಳಿದು ನೀಂ ಪ್ರತಿಕೂಲೆಯಾಗದಿರು, ಅಪಚಾರವೆಸಗದಿರು ಪತಿಯ ಹಳಿದು, ಪರಿಜನರ ವಿಶಯದಲಿ ದಾಕ್ಷಿಣ್ಯವಶಳೆನಿಸು, ಭಾಗ್ಯದೊಳು ಬೀಗದಿರು ನೀನು, ಪೆಣ್ಗಳಂತಿರ್ಪವರು**

**ಗರತಿಯಹರು, ತಾವಹರು ಕುಲಪೀಡರಿನ್ನನ್ಯರು** ಎಂದು. ಹೀಗೆ ಪರರೊಡವೆಯಾದ ಹೆಣ್ಣನ್ನು ಕಳುಹಿಸಿಕೊಟ್ಟು ಕಣ್ವ ನಿರಾಳವಾಗುತ್ತಾನೆ. ಆಕೆಯನ್ನು ಕರೆದುಕೊಂಡು ಹೋದ ಕಣ್ವ ಶಿಶ್ಯರಿಗೆ ವೇದೋಕ್ತ ರೀತಿಯ ಸತ್ಕಾರ ಸಿಗುತ್ತದೆ. ಆದರೆ, ಶಕುಂತಲೆ ದುಶ್ಯಂತನಿಗೆ ಪರಪತ್ನಿಯಾಗಿ ಕಾಣುತ್ತಾಳೆ. ಅವನ ಕುಲವನ್ನು ಕೆಡಿಸಲು ಬಂದವಳಾಗುತ್ತಾಳೆ. ಈ ಸಂದರ್ಭದಲ್ಲಿ ಹೆಂಗಸರು ಅಧಿಕಾರಸ್ಥ ಗಂಡಸಿನ ಎದುರಲ್ಲಿ ಪ್ರತ್ಯುತ್ಪನ್ನ ಮತಿಗಳಾಗಿ, ಜೇನುತುಪ್ಪದಂತ ಸವಿಯಾದ ಸುಳ್ಳು ಹೇಳುವವರಾಗಿ, **ದೋಶೈಕದರ್ಶಿನಿಯ**ರಾಗಿ, **ವಂಶಬಾಹಿರೆ**ಯರಾಗಿ ಕಾಣುವುದಲ್ಲದೆ ಮಡದಿಯರ ವಿಶಯದೊಳು **ಗಂಡಂದಿರೊಡೆತನವು ಸರ್ವತೋಮುಖ**ವಾಗಿ ಪ್ರಸ್ತಾಪಿಸಲ್ಪಡುತ್ತದೆ. **ಚಕ್ರವರ್ತಿ ಲಕ್ಶಣವಿರುವ ಮ**ಗನನ್ನು ಹಡೆಯುತ್ತಾಳೆ ಎಂಬ ಭವಿಶ್ಯವಿರುವುದರಿಂದ, ಹಾಗಾದಲ್ಲಿ ಮಾತ್ರ ಅಭಿನಂಧಿಸಿ ರಾಣಿವಾಸಕ್ಕೆ ಕರೆದುಕೊಳ್ಳಬಹುದು ಎಂದಾಗುತ್ತದೆ.

ನೆನಪು ಬಂದ ನಂತರದಲ್ಲಿ, ದುಶ್ಯಂತನ ಪಶ್ಚತ್ತಾಪವೆ ಮುಖ್ಯವಾಗುವುದರಿಂದ, ಅವಮಾನಿತಳಾದರೂ ಶಕುಂತಳೆ ಈತನಿಗಾಗಿ ಹಂಬಲಿಸುವುದೇ **ಯುಕ್ತ**ವಾಗಿ ಕಾಣುತ್ತದೆ. ಈ ಮೂಲಕ **ವಿಧಿ ಬಲವತ್ತರವಾದದ್ದಲ್ಲವೆ? ನಡೆಯಬೇಕಾದದ್ದು ನಡೆದೇ ತೀರುವುದು** ಎಂದು ಸಾಮಾನ್ಯೀಕರಿಸಲಾಗುತ್ತದೆ. ವಿಧಿ ತಪ್ಪಿಸಿತು ಎನ್ನಲಾಗುತ್ತದೆ. ಆದರೆ ಆ ಅವಧಿಯನ್ನು ದುಶ್ಯಂತನ ದೃಶ್ಟಿಯಿಂದ ಸೊಗಸಾದದ್ದು ಎಂಬುದನ್ನು ಚಿತ್ರಪಟದ ಸನ್ನಿವೇಶದ ಮೂಲಕ **ಶೃಂಗಾರಪೂರ್ಣ**ವಾಗಿ ಮರು ನಿರೂಪಿಸಲ್ಪಡುತ್ತದೆ. ಈ ಹೊತ್ತಿಗೆ **ವಂಶದ ಪ್ರಶ್ನೆ**ಯೊಂದು ಮುನ್ನೆಲೆಯನ್ನು ಪಡೆದುಕೊಳ್ಳುತ್ತದೆ. **ಪುತ್ರ, ಪಿತೃ** ಸಂಬಂಧಗಳು ಮುಖ್ಯವಾಗಿ ದುಶ್ಯಂತನ ನಂತರದಲ್ಲಿ ಪಿತೃಗಳಿಗೆ ತರ್ಪಣ ಕೊಡುವವರ ಕುರಿತು ಆಲೋಚನೆಗಳು ಬಿಚ್ಚಿಕೊಳ್ಳುತ್ತವೆ. ಆನಂತರದಲ್ಲಿ ಪತಿವ್ರತಾ ಧರ್ಮವನ್ನು ಉಪದೇಶಿಸುವ ಮಾರೀಚಾಶ್ರಮದಲ್ಲಿ ಮಗ **ಸರ್ವಧಮನ**ನನ್ನು ಎದುರುಗೊಳ್ಳುವಲ್ಲಿ **ಚಕ್ರವರ್ತಿ ಮಗ**ನನ್ನು ಕೊಟ್ಟ ಧರ್ಮಪತ್ನಿ ಶಾಕುಂತಲೆಯೊಂದಿಗೆ ಪುನಸ್ಸಮಾಗಮವಾಗುತ್ತದೆ. ದುಶ್ಯಂತ ತನ್ನ ವಂಶ ಪ್ರತಿಶ್ಟೆಯನ್ನು ಸರ್ವಧಮನನಲ್ಲಿ ಕಂಡಾದ ಕೂಡಲೆ ಸುಕೃತಪ್ರತಿಬಂಧಕವಾದ ಶಾಕುಂತಲೆಯ **ಪುರಾಕೃತ ಕರ್ಮ** ಕಳೆಯುತ್ತದೆ. ಹೀಗೆ ಧರಣಿಪಾಲರು ಜನರ ಹಿತದೊಳು ತೊಡಗಲಿ **ಶ್ರುತಿವಿದೋತ್ತಮರುಕ್ತಿ ಮನ್ನಣೆವಡೆಯಲಿ** ಎನ್ನುವಲ್ಲಿ ಮುಕ್ತಾಯ ಪಡೆಯುತ್ತದೆ.

ಹೀಗೆ ಸಂಸ್ಕೃತ ಪರಂಪರೆಯನ್ನು ಆಧುನಿಕವಾಗಿಸುವ ಪ್ರಕ್ರಿಯೆಯನ್ನು ಅರಗಿಸಿಕೊಳ್ಳುತ್ತಲೇ ಕಲಿಕಾರ್ಥಿಯು ಪಠ್ಯಕ್ಕೆ ಸಂಬಂಧಿಸಿದ ಪ್ರಶ್ನೆಗಳಿಗೆ(೧೯೭೯ರ ವಿದ್ಯಾರ್ಥಿಗಳಿಗಾಗಿ-೧೯೮೦ರ ಏಪ್ರಿಲ್ ಪ್ರಶ್ನೆಪತ್ರಿಕೆ) ಉತ್ತರಿಸಬೇಕಾಗುತ್ತದೆ. ಹಾಗಾಗಿ,

೧. ದುಶ್ಯಂತನು ಶಕುಂತಲೆಯನ್ನು ನಿರಾಕರಿಸಿದ ಸಂದರ್ಭವನ್ನು ಸಂಗ್ರಹಿಸಿ ಬರೆಯುವುದಾಗಲಿ,

೨. ಶಾಕುಂತಲೆಯ ನಾಟಕದಲ್ಲಿ ಬರುವ ಉಂಗುರದ ಪಾತ್ರವನ್ನು ವಿವರಿಸುವುದಾಗಲಿ,

೩. ದುಶ್ಯಂತನು ಶಕುಂತಲೆಯೊಡನೆ ಪುನಸ್ಸಮಾಗಮವಾದ ಸಂದರ್ಭದ ಸ್ವಾರಸ್ಯವನ್ನು ವಿವರಿಸುವುದಾಗಲಿ,

೪. ಪಠ್ಯದೊಳಗಿನ ಪಾತ್ರ ಚಿತ್ರಣಗಳನ್ನು ನಿರೂಪಿಸುವುದಾಗಲಿ,

ಇಂಥ ಪಾರಂಪರಿಕ ಗ್ರಹಿಕೆಗಳ ಮೂಲಕವೇ ನಡೆಯುವಂತೆ ಮಾಡಲಾಗುತ್ತದೆ. ಹೀಗೆ ಮಾಡುವುದಕ್ಕೆ ಬೋಧನೆ ಎನ್ನುವುದನ್ನು ಸಾಧನವಾಗಿ ಬಳಸಲಾಗುತ್ತದೆ. ಬೋಧಕರಿಗೆ, ತರಗತಿಯು ಇದನ್ನೆ ವಿವರಿಸುವ ಪರ್ಸನಲ್ ಸ್ಪೇಸ್ ಆಗುತ್ತದೆ. ಆದ್ದರಿಂದಾಗಿಯೆ ಸಾಹಿತ್ಯದ ವಿದ್ವತ್ತು ಎನ್ನುವುದು ಕನ್ನಡ ಭಾಶೆಯ ಕಲಿಕೆಯ ಸಂದರ್ಭದಲ್ಲೂ ಮಾನ್ಯತೆಯ ಮಾನದಂಡವಾಗಿ ಮೌಲ್ಯವನ್ನು ಗಳಿಸಿಕೊಂಡುಬಿಡುತ್ತದೆ. ಇಂಥ ಪಠ್ಯಗಳ ಭಾಶಿಕ ನಿರೂಪಣೆಯನ್ನು ಗಮನಿಸುವಾಗ, **ಸಂಸ್ಕೃತಭೂಯಿಶ್ಟವಾದ ಹಳಗನ್ನಡ ಶೈಲಿ**ಯೇ ಇಲ್ಲಿ ವಿದ್ವತ್ತಿನ ಹೆಸರಲ್ಲಿ ಪ್ರವೃತ್ತವಾಗಿರುವುದರಿಂದ ಇದನ್ನು ಪದ ಪದ ಬಿಡಿಸಿ ಅರ್ಥ ಹೇಳುವುದು, ವಾಕ್ಯಗಳನ್ನು ಮರು ನಿರೂಪಿಸಿ ಸಾರಾಂಶವನ್ನು ಕಟ್ಟಿಕೊಡುವುದೂ ಆಗಿ ಬೋಧಕರ ವಿದ್ವತ್ತು ಕಲಿಕಾರ್ಥಿಗಳ ತಿಳುವಳಿಕೆಯಲ್ಲಿ ಮಾನ್ಯಗೊಳ್ಳುತ್ತಾ ಹೋಗುತ್ತದೆ. ಬೋಧಕರ ವೈಯುಕ್ತಿಕವಾದ ಅಭಿರುಚಿ, ಮತ್ತು ಶೈಲಿಗಳಿಂದಾಗಿ ಇದು ಮತ್ತಶ್ಟು ವೈಭವೀಕರಣಕ್ಕೆ ಒಳಗಾಗಿ ಮೆಚ್ಚಿ ಅಹುದಹುದೆನಬೇಕು ಎನ್ನುವಂತಾಗುತ್ತದೆ. ಸಂಸ್ಕೃತ ಪರಂಪರೆಯ ಗ್ರಹಿಕೆಯು ಕಲಿತ ಕನ್ನಡ ಜ್ಞಾನವಾಗುತ್ತದೆ. ಕನ್ನಡ ಭಾಶೆಯ ಕಲಿಕೆ ಎನ್ನುವುದು ಮರೆಯಲ್ಲಿಯೇ ಉಳಿದುಬಿಡುತ್ತದೆ. ಈ ಸಾರರೂಪಿ ಬೋಧನೆ ಮತ್ತು ಕಲಿಕೆಯ ನೆಲೆಗಳನ್ನು ಆಧುನಿಕ ರಚನೆಗಳಾದ ಕಥೆ, ಕಾದಂಬರಿಯ ಸಂದರ್ಭದಲ್ಲೂ ಗಮನಿಸಬಹುದಾಗಿದೆ.

ಆಧುನಿಕವಾದ ಕನ್ನಡ ಸಾಹಿತ್ಯದ ರಚನೆ ಮತ್ತು ಸಾಹಿತ್ಯ, ಸಂಸ್ಕೃತಿ ಕುರಿತ ಚಿಂತನೆಗಳ ಕುರಿತಾಗಿ ಅತ್ಯಂತ ಪ್ರಮುಖವಾಗಿ ಗುರುತಿಸಲ್ಪಟ್ಟವರಲ್ಲಿ ಒಬ್ಬರು ಶಿವರಾಮ ಕಾರಂತರು. ಇವರ ರಚನೆಯ ಆಳ-ನಿರಾಳ, ಅಳಿದ ಮೇಲೆ, ಚೊಮನದುಡಿ, ಸರಸಮ್ಮನ ಸಮಾದಿ, ಬೆಟ್ಟದ ಜೀವ ಕಾದಂಬರಿಗಳು, ಬಾಳ್ವೆಯೆ ಬೆಳಕು, ಅರಸಿಕರಲ್ಲ ಮತ್ತು ಆಯ್ದ ಬಿಡಿ ಬರಹಗಳು ಹೆಸರಿನ ಪಠ್ಯಗಳು ಹಲವಾರು ಅವಧಿಗಳಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಪಠ್ಯಕ್ರಮದ ಭಾಗವಾಗಿವೆ. ಈ ಮೂಲಕವೂ ಪ್ರಮುಖವಾಗಿಯೆ ಪರಿಗಣಿತವಾಗಿರುವ ಶಿವರಾಮ ಕಾರಂತರ, ಪ್ರಸಿದ್ಧ

ಕಾದಂಬರಿಗಳಲ್ಲಿ ಒಂದಾದ **ಅಳಿದ ಮೇಲೆ** ಕೃತಿಯನ್ನು ೧೯೭೦-೭೧, ೧೯೮೧-೮೨ ಮತ್ತು ೧೯೯೧-೯೨ರ ಅವಧಿಗಳಲ್ಲಿ ಪಠ್ಯವಾಗಿ ಬಳಸಲಾಗಿದೆ. ಇಲ್ಲಿಯವರೆಗಿನ ಚರ್ಚೆಗೆ ಪೂರಕವಾಗಿ ಇದನ್ನೂ ಸಹ ಇಲ್ಲಿ ಪರಿಶೀಲಿಸಬಹುದಾಗಿದೆ;

**ಅಳಿದ ಮೇಲೆ**(ಶಿವರಾಮ ಕಾರಂತ ೧೯೬೮) ಕಾದಂಬರಿಯ ಹೆಸರೇ ಸೂಚಿಸುವಂತೆ **ವ್ಯಕ್ತಿ**ಯ ಸಾವಿನ ನಂತರದಲ್ಲಿ ಆತನ **ಪೂರ್ವ**ವನ್ನು ಹುಡುಕುವ ಮತ್ತು ಇಂಥ ಪೂರ್ವದ ಶಕ್ತಿಯ ಮೂಲಕ **ವರ್ತಮಾನ**ವನ್ನು ನೋಡುವ ಪರಿಕ್ರಮವೊಂದು ಈ ಪಠ್ಯದ ಮೂಲಕ ಅನಾವರಣಗೊಂಡಿರುವುದನ್ನು ಕಾಣಬಹುದಾಗಿದೆ. **ಬಾಳಿನಲ್ಲಿ ಉಳಿಯುವುದೇನು** ಎಂಬ ಪ್ರಶ್ನೆಯನ್ನಿಟ್ಟುಕೊಂಡು **ಸ್ಮರಣೆ**ಗಳ ಮೂಲಕ ನಡೆಯುವ ವ್ಯಕ್ತಿಯ **ಹೆಜ್ಜೆಯ ಜಾಡಿನ** ಹುಡುಕಾಟವಿದೆ ಇಲ್ಲಿ. **ನಮ್ಮ ಬದುಕಿನಲ್ಲಿ ಅಚ್ಚೊತ್ತಿಹೋದ ಮುದ್ರೆ ಸುತ್ತಣ ಜೀವನದ ಮೇಲೆ ಪರಿಣಾಮವನ್ನು ಮಾಡಿಯೇ ತೀರುತ್ತದೆ. ಸಾವಿರ ಅನ್ಯ ಪ್ರಭಾವಗಳೊಂದಿಗೆ ನಮ್ಮದೂ ಬೆರೆಯುತ್ತದೆ. ಸಾವಿಗೀಡಾದ ಯಾವ ಬಾಳೂ ವ್ಯರ್ಥವಲ್ಲ** ಎನ್ನುವುದನ್ನು ಮುಖ್ಯಮಾಡಿಕೊಂಡು ಇದನ್ನು ಬರೆದುದಾಗಿ ಕಾರಂತರು ಹೇಳುತ್ತಾರೆ.

**ನೆನಪು** ಮತ್ತು **ಪ್ರಯಾಣ**ದ ಮೂಲಕವೇ ನಿರೂಪಿಸಲ್ಪಡುವ ಈ ಪಠ್ಯದಲ್ಲಿ ಸಂಸ್ಕೃತ ಪರಂಪರೆಯ ಮುಖ್ಯ ನೆಲೆಯಾದ **ಪೂರ್ವ**ವನ್ನು ಮತ್ತು ಪೂರ್ವವನ್ನು ಕಟ್ಟಲು ಬೇಕಾಗುವ **ಸ್ಮೃತಿ**ಯನ್ನು ಕಾರಂತರು ಜೀವಂತವಾಗಿಸುತ್ತಾ ಹೋಗುತ್ತಾರೆ. ಆದ್ದರಿಂದಾಗಿ ಕಳೆದು ಅಥವಾ ಅಳಿದು ಹೋದದ್ದರ(ಪರಂಪರೆ) ಬಗ್ಗೆ ಇಲ್ಲಿ ಹೆಚ್ಚು ಕಾಳಜಿಯಿದೆ. ಕಾದಂಬರಿಯಲ್ಲಿನ ನಿರೂಪಕನ ಈ ಮಾತುಗಳನ್ನು ಗಮನಿಸಿ; **ಇಂಥ ಒಂದು ಜೀವ ಇದ್ದಿತ್ತು; ಅದು ಹೋಯಿತಲ್ಲ. ಅದು ಹೋದುದರಿಂದ ನಮ್ಮ ಬಾಳ್ವೆಯ ಸಂಪತ್ತು ಅಷ್ಟೇ ಕ್ಷೀಣವಾಯಿತಲ್ಲ** ಎಂಬ ಚಿಂತನೆಯ ಹಿನ್ನೆಲೆಯಲ್ಲಿ ಅಳಿದ ಮೇಲಿನ ಯಶವಂತರಾಯನನ್ನು ಕುರಿತ ಇಲ್ಲಿನ ಸನ್ನಿವೇಶಗಳು ರೂಪ ಪಡೆಯುತ್ತಾ ಹೋಗುತ್ತವೆ. ಈ ಹಿನ್ನೆಲೆಯಲ್ಲಿ;

> 'ಬದುಕು ಯಾಕೆ?' 'ಬದುಕು ಹೇಗೆ!' ಎಂಬ ಆ ವಿಚಾರದ ಪ್ರಶ್ನೆಗಳು, ತರ್ಕ, ಪಾಂಡಿತ್ಯಗಳಿಗೆ ಸಂಬಂಧಪಟ್ಟಂಥ ವಸ್ತುಗಳಲ್ಲ. ವಿವೇಚನೆಗೆ, ಪ್ರಾಮಾಣಿಕತೆಗೆ ಸಂಬಂಧಪಟ್ಟವು ಅವು. ನಮ್ಮ ನಂಬಿಕೆಯನ್ನೇ ಕುಲುಕಿಸಿ ಕೆಣಕಿಸಿದ ಸಮಸ್ಯೆಗಳು, ಅಂಧಶ್ರದ್ಧೆಯಿಂದ ಉತ್ತರಿಸಲಾರದಂತವು (ಪುಟ ೭).

ಎಂದು ಇಲ್ಲಿನ ನಿರೂಪಕ ತನ್ನ ಈ ಕೆಲಸದ ಮೌಲ್ಯವನ್ನು ಅಧ್ಯಾತ್ಮಿಕವಾಗಿಸುತ್ತಾ ಮುಂದಿಡುವ ಪ್ರಯತ್ನ ಮಾಡುತ್ತಾನೆ.

ಜೀವಕೋಟಿಯ ಈ ಯಾತ್ರೆಯು ಎಂದೇ ತೊಡಗಿದ್ದು ಎಲ್ಲಿಗೋ ಹೋಗುತ್ತಿದೆ; ಪ್ರಯಾಣ ತೊಡಗಿದ ಎಷ್ಟೋ ಎಷ್ಟೋ ಕಾಲದ ಮೇಲೆ, ದಾರಿಯ ರೈಲು ನಿಲ್ದಾಣದಲ್ಲಿ ಬಂಡಿಯನ್ನೇರುವ ಪಯಣಿಗನಂತೆ, ಮನುಶ್ಯ ಎಂಬ ಪ್ರಾಣಿ ಒಳಹೊಕ್ಕ; ಹೊಕ್ಕವನು ಇಳಿದು ಹೋಗಿಯೂ ಆಯಿತು. ಜೀವನ ಪಯಣವಂತೂ ಮುಂದಕ್ಕೆ ಸಾಗಿದೆ. ಅದರ ಗುರಿ ಇಂದಿನವರೆಗೂ ತಿಳಿದಿಲ್ಲ (ಪುಟ ೮).

ಎಂದು ಹಾಗೆ ಪೂರ್ವವನ್ನು ಹುಡುಕುವ ದಾರಿಯ ಪಯಣಿಗನಾಗಿ ತನ್ನನ್ನು ಕಂಡುಕೊಳ್ಳುವ ನಿರೂಪಕ, ಅಕಸ್ಮಾತ್ತಾಗಿ ಆರು ವರ್ಶಗಳ ಹಿಂದೆ ಇಂಥ ತನ್ನ ಪ್ರಯಾಣದಲ್ಲಿಯೇ ಬೇಟಿಯಾದ ಯಶವಂತರಾಯನ ಸಾವಿನ ವಿವರಗಳ ಮೂಲಕವೆ ಅವನ ಪೂರ್ವದ ಕತೆಯನ್ನು ಆರಂಭಿಸುತ್ತಾನೆ. ಗಮನಿಸಿ;

ಯಶವಂತರಾಯನ ನೆನಪು ನನಗೆ ಅತಿ ಪ್ರಿಯವಾದದ್ದು; ಸಿಹಿಯಾದದ್ದು; ಸವಿಯನ್ನು ಮರೆಯಲಾರದ್ದು. ನನ್ನ ಸ್ವಾರ್ಥದ ಉಪಯೋಗಕ್ಕೆ ಆವರು ಇನ್ನು ಸಿಗಲಾರರು. ಆದರೂ ಅವರು ನನ್ನ ಬದುಕಿನಲ್ಲಿ ಅಂಕಿಸಿದಶ್ಟು ನೆನಪು, ಎಂದೆಂದೂ ನನ್ನ ಕೈಗೆ ಸಿಗುವಂತದು. ಅದನ್ನು ನಾನು ಉಳಿಸಬಹುದು; ಮರೆಯಲೂ ಬಹುದು. 'ವ್ಯಕ್ತಿ' ಚಿಹ್ನೆ ಉಳಿಯುವುದೂ ಅಳಿಯುವುದೂ ಅವನ ಚರಿತ್ರೆಯಿಂದ. ಆ ಚರಿತ್ರೆ ನಮ್ಮ ನಮ್ಮ ಸ್ಮರಣೆಗಳನ್ನು ಚೇತನಗೊಳಿಸಿ, ನಮ್ಮ ಬದುಕಿನ ಮೂಲಕ ಜೀವಂತವಾಗಿ ಉಳಿದರೆ, ಬೆಳೆದರೆ, ಮುಂದೆ ಸಾಗಿದರೆ, ಅದೇ ಪುನರ್ಜನ್ಮ ನನಗೆ-ಎನಿಸಿತು (ಪುಟ ೧೯).

ಎಂಬ ತಮ್ಮ ವೈದಿಕ ಚಿಂತನೆಯನ್ನು ಚಾಲನೆಗೊಳಿಸುವ ಮೂಲಕ ಕಾರಂತರು, ಮಾನವ ಜೀವನದ ಲೆಕ್ಕಾಚಾರಗಳನ್ನು, ಹೊತ್ತುಕೊಂಡು ಬಂದಿರುವ ರುಣವನ್ನು, ಅದನ್ನು ಸಲ್ಲಿಸುವಲ್ಲಿ ಆಗುವ ಸಾರ್ಥಕತೆಯನ್ನು ನಿರೂಪಕನ ಮಾತುಗಳಲ್ಲಿ ಹೇಳುತ್ತಾರೆ. ಈ ಹಿನ್ನೆಲೆಯಲ್ಲಿ ಸಂಪತ್ತು ಮತ್ತು ಸಂಬಂಧಗಳನ್ನು ಯಶವಂತರಾಯನ **ನೆನಪಿನ ಮುತ್ತುಗಳ** ಮೂಲಕ ಪರಿಶೀಲಿಸಿಕೊಳ್ಳುತ್ತ ಪೂರ್ವವನ್ನು ರೂಪಿಸುವ ಮಾದರಿಯೊಂದನ್ನೇ ಇಲ್ಲಿ ಮಂಡಿಸುತ್ತಾರೆ. ಇದಕ್ಕಾಗಿ ಯಶವಂತರಾಯನೊಂದಿಗಿನ ಬೇಟಿ, ಸಾಯುವ ಮೊದಲು ಆತ ಕಳುಹಿಸಿಕೊಡುವ ಪತ್ರಗಳು ಮತ್ತು ದಿನಚರಿ, ಆತನು ಬಿಡಿಸಿದ ಚಿತ್ರಗಳು ಪೂರ್ವವನ್ನು ಕಟ್ಟುವ ನಿರೂಪಕನ ಪಯಣದ ಸರಕಾಗುತ್ತದೆ. ಇದರ ಮೂಲಕ **ಪರರ ಇಂಗಿತವನ್ನು ಆಳವಾಗಿ ಅಭ್ಯಸಿಸಿ** ಪೂರ್ವವನ್ನು ರಚಿಸುವ **ಔದಾರ್ಯ**ವನ್ನು ಕಂಡುಕೊಳ್ಳಲಾಗುತ್ತದೆ. ಆನಂತರದಲ್ಲಿ ಯಶವಂತರಾಯ ಮತ್ತು ಮನೆಯ ಆಳು ದಾದಾ(ಕಪ್ಪು-ಬಿಳುಪು), ಯಾವಾಗಲೊ ಒಮ್ಮೆ ತಾನು ಗಮನಿಸಿದ

ರೀಮಾ(ಮಾರಿ) ಮತ್ತು ಯಶವಂತರಾಯನ ನಡುವಿನ ಸಂಬಂಧಗಳನ್ನು ವೈಧಿಕ ಪಾಂಡಿತ್ಯ್‌ದಿಂದಲೇ ಕಟ್ಟತೊಡಗುತ್ತಾರೆ. ಯಶವಂತರಾಯನ ನಿಧನ ವಾರ್ತೆಯನ್ನು ಅವನ ಹೆಂಡತಿಗೆ ತಿಳಿಸಬೇಕಾದ ಆಲೋಚನೆಯ ನಿರೂಪಕನ ಈ ಮಾತುಗಳನ್ನು ಗಮನಿಸಿ;

> ಹೆಂಡತಿಯಾದವಳಿಗೆ ಗಂಡನ ನಿಧನದ ವಾರ್ತೆಯನ್ನು ತಿಳಿಸುವ ಕೆಲಸ ತೀರ ಅಪ್ರಿಯವಾದ ಕಾರ್ಯ. ಆದರಿಂದಲೇ ಯಶವಂತರಾಯರ 'ಜಲಜ' ಸತ್ತುಹೋಗಿದ್ದರೆ 'ಇನ್ನೂ ಚನ್ನ' ಎಂದು ಅವಳ ಸಾವನ್ನು ಹವಣಿಸಿದೆ. ಆ ಗಂಡ ಹೆಂಡಿರಿಗೆ ಯಾವ ಸಂಬಂಧವೂ ಉಳಿದಿಲ್ಲ-ಎಂದು ಊಹಿಸಿಕೊಂಡೆ. ಆದರೆ ಬ್ರಾಹ್ಮಣ ಸಮಾಜದಲ್ಲಿ, ವೈದವ್ಯವು ತಂದೊಡ್ಡುವ ಕಲೆ ಮಾಯುವಂತ ಕಲೆಯಲ್ಲ. ಅದಕ್ಕಲ್ಲವೇ ಸುಮಂಗಲೆಯಾದವರು, ತಮ್ಮ ಪತಿಗಿಂತಲೂ ಮುಂಚೆ ಸಾಯಲಪೇಕ್ಷಿಸುವುದು? (ಪುಟ ೬೬)

ಈ ಮಾತುಗಳು ಕನ್ನಡ ಸಾಹಿತ್ಯದಲ್ಲಿ **ಹುಸಿ ಸೆಕ್ಯುಲರ್**-ನಾನು ಘಜನಿ ಮಹಮ್ಮದನೂ ಅಲ್ಲ. ಪಾರ್ವತಮ್ಮನ ಭಕ್ತಿಯ ಬಳಗದವನೂ ಅಲ್ಲ(೧೨೨)/ಮನುಷ್ಯ ಸ್ವಭಾವವನ್ನು ತಿಳಿಯುವ ಸುಂದರ ಅವಕಾಶಗಳನ್ನೇ ಒದಗಿಸಿಕೊಟ್ಟಿತು(೧೦೮)–ನೆಲೆಗಳಲ್ಲಿ ಪ್ರವೃತ್ತವಾಗಿರುವ ಸಂಸ್ಕೃತ ಪರಂಪರೆಯ ಸ್ಥಾಪಿತ ನೆಲೆಯನ್ನೇ ಪ್ರಕಟಿಸುತ್ತವೆ. ಇದು ಚೊಚ್ಚಲುಮನೆ ಪಾರ್ವತಮ್ಮ ಮತ್ತು ಬೆನಕನ ಗುಡಿ, ಯಶವಂತರಾಯನಿಗೆ ಮುಳುವಾದ ದಾಯಾದಿತನದ ನಡುವಿನ ಶಾಪ, ವಿಶ್ಣುಪಂತ ಘಾಟೆಯ 'ನಮ್ಮ ಧರ್ಮಶಾಸ್ತ್ರ ವಿಚಾರ'ಪುಸ್ತಕ ಮೊದಲಾದ ಸಂಬಂಧಗಳಲ್ಲಿ ಮತ್ತಶ್ಟು ಪ್ರಕಟವಾಗುತ್ತದೆ. ಆದ್ದರಿಂದಾಗಿ;

೧. ಯಶವಂತರಾಯರು ಅಳಿದ ಮೇಲೆ ಅವರ ಇಚ್ಚೆಯನ್ನು ಕಾದಂಬರಿಕಾರರು ನೆರವೇರಿಸಿದ ಬಗೆ ಹೇಗೆ? ವಿವರಿಸಿ

೨. ಯಶವಂತರಾಯರು ಬರೆದ ಚಿತ್ರಗಳಲ್ಲಿ ಊಹಿಸಬಹುದಾದ ಅವರ ಜೀವನದ ಘಟನೆಗಳನ್ನು ನಿರೂಪಿಸಿ.

೩. ಸೀತಾರಾಮ ಹೆಗ್ಗಡೆ, ಹೊನ್ನಗದ್ದೆ ಮಂಜಯ್ಯ, ಪಾರ್ವತಿ, ಇಂದುಮತಿ ಇವರಲ್ಲಿ ಇಬ್ಬರ ಪಾತ್ರ ಪರಿಚಯ ಮಾಡಿಕೊಡಿ

ಎಂದು ಪ್ರಶ್ನೆಗಳನ್ನು(೧೯೮೨ರ ನವಂಬರ್/ಡಿಸೆಂಬರ್ ಪ್ರಶ್ನೆಪತ್ರಿಕೆ) ಕೇಳುವಾಗ್ ಬಿದಿರಿನ ಬೇರಿನಶ್ಟೆ ಅದರ ಬೇರೂ ಬಲವಾಗಿ ಬಿಡದಿರುವ ಹಿರಿಯರ ಶಾಪ(ಪುಟ ೮೬), ಪಾರ್ವತಿಯ ಶಾಪಗ್ರಸ್ಥ ಸ್ಥಿತಿ, ಇದರಿಂದಾಗಿ ಅವಳಿದ್ದ ಮನೆಯೇ ಹೋಗಿದ್ದು, ಯಶವಂತ ಊರು ಬಿಟ್ಟದ್ದು, ಮನೆ, ಮಳೆ ಗಾಳಿಗಳಿಗೆ ಕುಸಿದು ಮಣ್ಣು ಮುದ್ದೆಯಾಗಿ ಬಿದಿರ ಮೆಳೆ ಬೆಳೆದದ್ದು(ಪುಟ ೮೭),

ಇದನ್ನು ಒಬ್ಬೊಬ್ಬರ ಜನನಾವಸ್ಥೆ(ಪುಟ ೯೭) ಎಂದು ವಿವರಿಸುತ್ತಾ ಹೋಗುವುದು, ನಾನೂ, ನೀನೂ, ಎಲ್ಲರೂ ಒಂದು ಗಳಿಗೆಗೆ ಬಂದು ಹೋಗುವವರು. ಆದರೆ ಈ ಮನುಶ್ಯ ಜನ್ಮವೆಂಬುದು ಹಾಗಲ್ಲ ನೋಡು. ನಿನಗೆ ನಿನ್ನ ಅಪ್ಪ ಇದ್ದರು; ಹಾಗೆಯೇ ಹಿಂದಹಿಂದಕ್ಕೆ ಹೋಗುತ್ತದೆ. ಹಾಗೆಯೇ, ನಾಳೆಯೂ ನಿನ್ನ ಸಂತಾನ ಮುಂದಕ್ಕೆ ಹೋಗುತ್ತಿರುತ್ತದೆ. ನಾನೂ, ನೀನೂ, ಇಲ್ಲವಾದರೂ ನಾವು ನಂಬಿದ್ದು ಮಾತ್ರ ಉಳಿದುಕೊಳ್ಳುತ್ತದೆ(ಪುಟ೧೦೫) ಎಂದು ಪೂರ್ವದ ಚಿಂತನೆಯನ್ನು ಮರು ನಿರೂಪಿಸುವುದು, ಆ ಗುಡಿ ಜೀರ್ಣೋದ್ಧಾರವಾದದನ್ನು ಕಂಡು, ಆಕೆ ಶಾಂತಿಯಿಂದ ಸತ್ತರೆ, ಯಶವಂತರೇ ಅವಳ ಶ್ರಾದ್ಧ ಮಾಡಿಸಿದಶ್ಟು ಸತ್ಕಾರ್ಯವಾದೀತು(ಪುಟ೧೧೧) ಎಂಬ ನಿರ್ಧಾರ ತಾಳುವುದು, ಯಶವಂತರ ಬಗ್ಗೆ ಮತ್ತೊಂದು ಬೆನಕನ ಗುಡಿಯನ್ನು ಕಟ್ಟಲೇ ಬೇಕೆನಿಸಿತು. ಅದೆಂದರೆ –ವಿಶ್ಣುಪಂತರ ಗ್ರಂಥ ಪ್ರಕಾಶನಕ್ಕೆ ಯಶವಂತರ ಹೆಸರಿನಲ್ಲಿ ಮೂರು ಸಾವಿರ ರೂಪಾಯಿಗಳನ್ನು ಒದಗಿಸುವುದು(೨೩೧) ಮೊದಲಾಗಿ ನೆನಪಾಗಿಸಿಕೊಂಡ ಪಠ್ಯದ ವಿವರಗಳನ್ನು ಬರೆಯುವುದರ ಮೂಲಕ ಕಲಿಕಾರ್ಥಿ ತನ್ನ ಸಾಮರ್ಥ್ಯವನ್ನು ಸಾಬೀತು ಪಡಿಸಬೇಕಾಗುತ್ತದೆ.

ವೈದಿಕ ಪರಂಪರೆಯನ್ನು ಕಟ್ಟುವ ಇಂಥ ಅನೇಕ ಪ್ರಸ್ತಾಪಗಳು ಕಾದಂಬರಿಯುದ್ದಕ್ಕೂ ಮತ್ತೆ ಮತ್ತೆ ನಿರೂಪಣೆಗೊಳ್ಳುತ್ತಾ ಹೋಗುವುದರಿಂದ, ಅಥವಾ ಇದನ್ನು ಹೀಗೂ ಹೇಳಬಹುದು; ಅಂಥ ನಂಬಿಕೆಗಳೇ ಕಾದಂಬರಿಯ ಕ್ರಿಯೆಗಳನ್ನು ಮುನ್ನಡೆಸುತ್ತವೆಯಾದ್ದರಿಂದ, ಆ ಮೂಲಕ ಪೂರ್ವವನ್ನು ಗಟ್ಟಿಗೊಳಿಸಿಕೊಳ್ಳುತ್ತಾ ಮನುಶ್ಯ ಪಾರಮ್ಯವನ್ನು ಸಂಸ್ಕೃತ ಪರಂಪರೆಯ ನೆಲೆಯಲ್ಲಿ ಸಾಧಿಸಿಕೊಳ್ಳುವುದು ಕಾಣುತ್ತದೆ. ಧರ್ಮ ವಿಚಾರಗಳನ್ನು ಕುರಿತ ವಿಶ್ಣುಪಂತರ ಬೇಟಿಯ ಸಂದರ್ಭದ, ಪೂರ್ವದ ಧರ್ಮ ವಿಚಾರಗಳು ಮತ್ತು ಆಧುನಿಕತೆ ಕುರಿತ ಕಾರಂತರ ಈ ವ್ಯಂಗ್ಯದ ನಿರೂಪಣೆಯು ಇದನ್ನು ಮತ್ತಶ್ಟು ಸ್ಪಶ್ಟವಾಗಿಸುತ್ತದೆ;

> ನೋಡಿ ನಾನು ಕಥೆ ಕಾದಂಬರಿಯನ್ನು ಬರೆಯುವವನು. ಕತೆ ಬರೆದರೆ ಜನರು ಓದುತ್ತಾರೆ. ಇದನ್ನು ಬರೆದರೆ ಜನ ಹೇಗೆ ಓದಬೇಕು ಹೇಳಿ. ನಮ್ಮ ಜನಗಳ ಆಧುನಿಕತೆಯೆಂದರೆ– ಇಂಥದು. ಆಕಾಶದಿಂದಲೇ ಎರಗಿ ಭೂಮಿಯ ಮೇಲೆ ಬಂದು ಕುಳಿತಂಥ ಆಧುನಿಕತೆ. ಅದೂ ಎಂದು? ನಾವು ಇಲ್ಲಿ ಏನು ಬೆಳೆದಿದ್ದರೂ, ಎಶ್ಟು ಆಧುನಿಕವಾದರೂ, ಬೀಜ ಬೇರುಗಳ ಸಹಾಯದಿಂದ ಗಿಡ, ರೆಂಬೆಯೊಡೆದು ಅದರಲ್ಲಿ ಹೂವಾದಂತೆ–ಎಂದು ತಿಳಿಯುವುದಿಲ್ಲ ಜನರು(೨೩೧).

ಆದ್ದರಿಂದಾಗಿ ವೈದಿಕ ಪರಂಪರೆಯ **ಸಾಚಾ** ನೆನಪುಗಳನ್ನು(ನೆನಪು ಹೋಗುತ್ತದೆಯೇ ಮಗು, ಸಾಚಾ ನೆನಪಾದರೆ?-ಪುಟ೧೧೫) ಆಧುನಿಕ ಬದುಕಿನ ಭಾಗವಾಗಿಯೂ ಗಟ್ಟಿಯಾಗಿಸುವ ಕೆಲಸವು ತಾನೇ ತಾನಾಗಿ ಸಂಭವಿಸುತ್ತಿರುತ್ತದೆ. ಪರೀಕ್ಷೆಯಲ್ಲಿ ಯಾವ ಪ್ರಶ್ನೆಯನ್ನು ಕೇಳಿದರೂ ಕಲಿಕಾರ್ಥಿಯು ಈ ಚೌಕಟ್ಟಿನೊಳಗಡೆಯೇ ನಿಂತು ಉತ್ತರಿಸಬೇಕಾಗಿರುವುದರಿಂದ ಇದು, ಸಂಸ್ಕೃತ **ಪರಂಪರೆ**ಯೆಂಬ ಹೊರೆಯನ್ನು ಹೊರುವ ಹೊಣೆಗಾರಿಕೆಯೇ ಆಗುತ್ತದೆ. ಈ ಹೊರೆಯನ್ನು ಕನ್ನಡ ಭಾಶೆಯ ನೆಪದಲ್ಲಿ ಸಾಮಾಜೀಕರಣಗೊಳಿಸುವ ಕೆಲಸವೇ ಇದಾಗುವುದರಿಂದ, ಈ ಮೂಲಕ ಬಿಎಂಶ್ರೀ ಎಂದಂತೆ **ಆರ್ಯಭೂಮಿಯಾಗಿಸುವ ಕೆಲಸ** ಇಪ್ಪತ್ತನೆ ಶತಮಾನದ ಉದ್ದಕ್ಕೂ, ಆನಂತರವೂ ನಿರಂತರವಾಗಿ ಕಾಪಾಡಿಕೊಂಡು ಬಂದ ವಿದ್ಯಮಾನವೇ ಆಗಿ ಕಾಣುತ್ತದೆ. ಅನಂತಮೂರ್ತಿಯವರ 'ಭಾರತೀಯ ಸಂಸ್ಕೃತಿ ಮತ್ತು ಲೇಖಕ' ಎಂಬ ಲೇಖನವನ್ನು ವೈದಿಕ ಸಂಪ್ರದಾಯದ ಪ್ರಾತಿನಿಧಿಕ ಲೇಖನವಾಗಿ ಗುರುತಿಸುತ್ತಾ ೧೯೭೦ರಲ್ಲಿ ಪೂರ್ಣಚಂದ್ರ ತೇಜಸ್ವಿ[೧೧]ಯವರು 'ಭಾರತದ ಸಂಸ್ಕೃತಿಗಳನ್ನು ಅಖಂಡ ಸಂಸ್ಕೃತಿ ಎಂದು ನಾವು ಪರಿಭಾವಿಸ ಹೊರಟರೆ ನಮಗೆ ಆಗ ಪ್ರಾತಿನಿಧಿಕವಾಗಿ ದೊರೆಯುವುದು ಬ್ರಾಹ್ಮಣ ದರ್ಮ ಮತ್ತು ವೈದಿಕ ಸಂಸ್ಕೃತಿ ಮಾತ್ರವೇ ಎಂಬುದನ್ನು ಬ್ರಾಹ್ಮಣರು ಅರಿತಿದ್ದಾರೆ' ಎಂದು ವ್ಯಾಖ್ಯಾನಿಸುತ್ತಾರೆ. 'ವೈದಿಕ ಸಂಸ್ಕೃತಿಗೆ ತನ್ನದೇ ಆದ ಪ್ರಾದೇಶಿಕತೆ ಇಲ್ಲ. ತನ್ನ ಅಸ್ತಿತ್ವಕ್ಕೆ ಅದು ಸಂಕುಚಿತ ಮನೋವೃತ್ತಿ, ಸಂಪ್ರದಾಯವಾದ ಮುಂತಾದ ನೇತ್ಯಾತ್ಮಕ ಮಾರ್ಗ ಹಿಡಿದಿದೆ'(ಪೂರ್ಣಚಂದ್ರ ತೇಜಸ್ವಿ ೨೦೦೯) ಎನ್ನುವ ಮಾತನ್ನು ಇಲ್ಲಿ ಪ್ರಸ್ತಾಪಿಸಬಹುದಾಗಿದೆ. ಹೀಗಾಗಿ ಸಾಹಿತ್ಯ, ಶಿಕ್ಶಣ, ಭಾಶೆ ಮತ್ತು ಸಂಸ್ಕೃತಿಯ ವಕ್ತಾರಿಕೆಯನ್ನು ನಿಭಾಯಿಸಿಕೊಂಡು ಬಂದಿರುವ ಸಂಸ್ಕೃತ ಪರಂಪರೆಯ ಮೌಲ್ಯಗಳ ಮೂಗಿನ ನೇರಕ್ಕೇ ನೋಡುವ ಚಾಳಿಯೊಂದು ನಮ್ಮ ನಡುವೆ ತಾನೇ ಚಾಲನೆಯಲ್ಲಿರುವಂತಾಗಿದೆ. ಆದ್ದರಿಂದಾಗಿ ಪಠ್ಯಕ್ರಮದ ರಚನೆ ಮತ್ತು ಪಠ್ಯಗಳ ನಿರ್ಧಾರದ ನೆಲೆಯಲ್ಲಿರುವವರು ತಮ್ಮನ್ನು ಇಂಥ ಪರಂಪರೆಯನ್ನು ಮುಂದುವರಿಸುವ ಬಾರವನ್ನು ಹೊತ್ತುಕೊಂಡವರೆಂದೇ ಭಾವಿಸುತ್ತಾರೆ. ಇದನ್ನೇ, ತರಗತಿಯ ಬೋಧನೆಯ ಮೂಲಕ ಸ್ಥಿರೀಕರಿಸುವುದಾಗಿ **ಭಾಶೆಯ ಬೋಧನೆ**ಯೆಂಬುದು ಏನು ಎಂಬುದನ್ನು ವಿವರಿಸಿಕೊಳ್ಳಲಾಗದೆ **ಸಾಹಿತ್ಯ,** ಸಾಹಿತ್ಯವನ್ನು ಗ್ರಹಿಸುವ ಇಲ್ಲಿಯವರೆಗಿನ **ವಿಮರ್ಶೆ**ಯ ತತ್ವಗಳೇ ಬೋಧನೆಯ ಮಾನದಂಡಗಳಾಗಿ ಅಭಿವ್ಯಕ್ತಿಯನ್ನು ಪಡೆದುಕೊಳ್ಳುತ್ತಿರುತ್ತವೆ. ಕಲಿಕಾರ್ಥಿಯ ಕಲಿಕೆ ಮತ್ತು ಕಲಿಕೆಯನ್ನು ಕುರಿತ ಪ್ರತಿಕ್ರಿಯೆಯೂ ಸಹ ಇದೇ ಆಗುತ್ತದೆ. ಇದೇ ಮೌಲ್ಯಮಾಪನದ ಮಾನದಂಡವೂ ಆಗಿ ನಿರಂತರವಾಗಿ ಜಾರಿಯಲ್ಲಿರುತ್ತದೆ. ವಿಮರ್ಶೆ, ಸಾಹಿತ್ಯ ಮತ್ತು ಕನ್ನಡ

ಪಠ್ಯಕ್ರಮದ ಅನೈತಿಕ ಸಂಬಂಧಗಳ ಕುರಿತಾಗಿ ಮತ್ತೊಂದು ವಿಶೇಶವಾದ ಅಧ್ಯಯನವನ್ನೆ ಮಾಡಲು ಸಾಧ್ಯವಿದೆ.

ಕಾಮರ್ಸ್ ಕೋರ್ಸಿನ ಸಂದರ್ಭದ ಎರಡನೆ ವರ್ಶದ ಅವದಿಯ ಕನ್ನಡ ಕಲಿಕೆಯಲ್ಲಿ ಪತ್ರವ್ಯವಹಾರ, ಸಂಕ್ಶಿಪ್ತ ಬರವಣಿಗೆ, ವರದಿ ರಚನೆಗಳನ್ನು ಪಾರಂಪರಿಕ ಪಠ್ಯಗಳ ಜೊತೆಯಲ್ಲಿಯೇ ಗಮನಿಸಿಕೊಳ್ಳುವಂತೆ ಬಹು ಹಿಂದಿನಿಂದಲೂ ಯೋಜಿಸಿರುವುದು ಕಾಣುತ್ತದೆ. ಆದರೆ ಇಲ್ಲಿ ಕನ್ನಡವನ್ನು ಭಾಶಿಕವಾಗಿ ಬಳಸಬೇಕಾದ ಕೌಶಲದ ವಿಚಾರಗಳು ಪ್ರಾಸಂಗಿಕವಾಗಿದ್ದು, ಪತ್ರ ಮತ್ತು ವರದಿ ರಚನೆಗಳಲ್ಲಿ ಯಾವ ಅಂಶಗಳು ಎಲ್ಲೆಲ್ಲಿ ಬರಬೇಕು, ಬ್ಯಾಂಕಿಂಗ್ ವ್ಯವಹಾರ ಹೇಗೆ, ಕಂಪನಿ ಕಾರ್ಯದರ್ಶಿಯ ಕರ್ತವ್ಯಗಳು ಯಾವುವು ಎನ್ನುವುದನ್ನೇ ಮುನ್ನೆಲೆಗೆ ತರಲಾಗಿದೆ. ಕಳೆದ ಶತಮಾನದ ಕೊನೆಯ ದಶಕದಲ್ಲಿ ಶುರುವಾದ ಬಿ.ಬಿ.ಎಮ್ ನಂಥಹ ಮ್ಯಾನೇಜ್‌ಮೆಂಟ್ ಕೋರ್ಸಿನ ಸಂದರ್ಭದಲ್ಲಿ ಇಂಥದೇ ವಿದ್ಯಮಾನವನ್ನು ಕಾಣಬಹುದಾಗಿದೆ. ಬದಲಾಗುತ್ತಿರುವ ಜಾಗತಿಕ ವಿದ್ಯಮಾನಗಳ ಹಿನ್ನೆಲೆಯಲ್ಲಿ **ಸಂವಹನ ಕನ್ನಡ** ಎಂಬ ಭಾಗವನ್ನು ಇತರೆ ಸಾಹಿತ್ಯ ಪಠ್ಯಗಳೊಂದಿಗೆ ಸೇರಿಸಲಾಗುತ್ತದೆ. ಆದರೆ, ಇಲ್ಲಿಯೂ ಸಹ ಮಾಧ್ಯಮಗಳನ್ನು ಮುಖ್ಯಮಾಡಿಕೊಂಡು ಚಾರಿತ್ರಿಕ ನೆಲೆಗಳನ್ನು ಕಟ್ಟಿಕೊಡುವ ಪಾರಂಪರಿಕ ಮಾದರಿಯೇ ಮುಖ್ಯವಾಗಿ ಕಾಣುತ್ತದೆ. ಹೊರತಾಗಿ, ಮಾಧ್ಯಮಗಳ ಸಂದರ್ಭದಲ್ಲಿ ಕನ್ನಡದ ಬಳಕೆ ಯಾವ ಬಗೆಯದೆಂಬುದು ಹಿಂದೆಯೇ ಉಳಿದು ಕಾವ್ಯ, ಕಥನ ಪಠ್ಯಗಳೇ ಕನ್ನಡ ಕಲಿಕೆಯನ್ನು ನಿರ್ಧರಿಸುವಂತಾಗುತ್ತದೆ(ನೋಡಿ ಅನುಬಂಧ-[illegible]). ಇದರಿಂದಾಗಿ, ಕನ್ನಡ ಕಲಿಕೆಯ ಒಟ್ಟು ವಿದ್ಯಮಾನವು ಸಂಸ್ಕೃತ ಪರಂಪರೆಯನ್ನು ನವ ಆಧುನಿಕ ನೆಲೆಗಳಲ್ಲಿ ಪುನರ್‌ಸ್ಥಾಪಿಸಲು ಅನುವು ಮಾಡಿಕೊಟ್ಟು ಕನ್ನಡ ಭಾಶೆ ಕೀಳರಿಮೆಯಲ್ಲೇ ಉಳಿಯುವಂತೆ ಅಥವಾ ಇಲ್ಲವಾಗುವಂತೆ–ಸದ್ಯಕ್ಕೆ ಶಿಕ್ಶಣದಲ್ಲಿ–ಒತ್ತಡವನ್ನು ತರುತ್ತದೆ.

ಈ ಹಿನ್ನೆಲೆಯಲ್ಲಿ, ಕನ್ನಡದ ನೆಪದಲ್ಲಿ ಕಟ್ಟಿಕೊಟ್ಟ ಇಂಥ ಚಿಂತನೆಯಿಂದಾಗಿ ಕನ್ನಡ ಕಲಿಕೆಯಲ್ಲಿ ಆಗಿರುವ ತೊಡಕುಗಳನ್ನು ಮುಂದಿನ ಅಧ್ಯಾಯದಲ್ಲಿ ಗುರುತಿಸಿಕೊಳ್ಳಲಾಗುತ್ತದೆ.

**ಅಡಿ ಟಿಪ್ಪಣಿಗಳು**

---

೧. ಮಧ್ಯಕಾಲೀನ ಕನ್ನಡ ಕವಿತೆ-೧, ಮತ್ತು ೨ನೆ ಸಂಕಲನಗಳು ಕ್ರಮವಾಗಿ ೧೯೭೮. ೧೯೮೦ರಲ್ಲಿಯೂ ಮತ್ತು ಪ್ರಾಚೀನ ಕಾವ್ಯ ಮಾರ್ಗ-೧, ೨: ೧೯೮೨, ೧೯೮೭ ರಲ್ಲಿಯೂ ಪ್ರಸಾರಾಂಗ, ಬೆಂಗಳೂರು

ವಿಶ್ವವಿದ್ಯಾಲಯದಿಂದ ಜಿ.ಎಸ್.ಶಿವರುದ್ರಪ್ಪನವರ ಪ್ರಧಾನ ಸಂಪಾದಕತ್ವದಲ್ಲಿ ಪ್ರಕಟವಾಗಿವೆ. ಇದನ್ನು ಅನುಸರಿಸಿ ೧೯೯೨, ೧೯೯೯ರಲ್ಲಿ ೩ ಮತ್ತು ೪ನೇ ಸಂಕಲನಗಳನ್ನು ಪ್ರಕಟಿಸಲಾಗಿದೆ.

೨. ಸಮಕಾಲೀನ ಕನ್ನಡ ಕವಿತೆ-೧ ಮತ್ತು೨ ಸಂಕಲನಗಳು ೧೯೬೮, ೧೯೮೦ರಲ್ಲಿ ಪ್ರಕಟವಾಗಿದ್ದು ಇದನ್ನು ಅನುಸರಿಸಿ ೧೯೮೬, ೧೯೯೩ರಲ್ಲಿ ೩ ಮತ್ತು ೪ನೆ ಸಂಕಲನಗಳನ್ನು ಪ್ರಕಟಿಸಲಾಗಿದೆ.

೩. ಈ ನಿಟ್ಟಿನಲ್ಲಿ ೧೯೬೦ರಲ್ಲಿ ಮೈಸೂರು ವಿಶ್ವವಿದ್ಯಾಲಯ ಬಿಎ, ಬಿಎಸ್ಸಿ ತರಗತಿಗಳಿಗಾಗಿ ಕೆ.ವಿ.ಪುಟ್ಟಪ್ಪ ನವರ ಪ್ರಧಾನ ಸಂಪಾದಕತ್ವದಲ್ಲಿ ಪ್ರಕಟಿಸಿದ 'ಕನ್ನಡ ಕಾವ್ಯವಲ್ಲರಿ' ಮತ್ತು ೧೯೬೧ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯವು ಆರ್.ಸಿ ಹಿರೇಮಠರ ನೇತೃತ್ವದಲ್ಲಿ ಪ್ರಕಟಿಸಿರುವ 'ಕಾವ್ಯಕುಂಜ' ಸಂಕಲನಗಳನ್ನು ಗಮನಿಸಬಹುದಾಗಿದೆ. ಈ ಸಂಕಲನಗಳು ಪ್ರಾಚೀನ ಮತ್ತು ಆಧುನಿಕ ಕವಿತೆಗಳ ಸಂಯೋಜಿತ ಪಠ್ಯಕ್ರಮಗಳಾಗಿವೆ. ಮಂಗಳೂರು ವಿಶ್ವವಿದ್ಯಾಲಯ ೨೦೦೩ರಲ್ಲಿ ಬಿ.ಎ. ವಿವೇಕರೈ ಯವರ ಪ್ರಧಾನ ಸಂಪಾದಕತ್ವದಲ್ಲಿ ಪ್ರಕಟಿಸಿರುವ 'ಕಡಲಸಿರಿ' ಮತ್ತು 'ಬನದ ಸಿರಿ' ಪಠ್ಯಕ್ರಮಗಳು ಸಹ ಇದೇ ಕ್ರಮವನ್ನು ಅನುಸರಿಸಿವೆ.

೪. ಇಲ್ಲಿ ನೀಡಲಾಗುತ್ತಿರುವ ಅಂಕಿ ಅಂಶಗಳು ಲಭ್ಯ ಮಾಹಿತಿಯನ್ನು ಅನುಸರಿಸಿವೆ. ಯಾಕೆಂದರೆ, ಬೆಂಗಳೂರು ವಿಶ್ವವಿದ್ಯಾಲಯದ ಆರಂಭದ ವರುಶಗಳ ಪಠ್ಯಕ್ರಮದ ಮಾಹಿತಿಗಳು ಸರಿಯಾಗಿ ದೊರೆಯದ ಕಾರಣ ಆ ಕಾಲದ ಪ್ರಶ್ನೆ ಪತ್ರಿಕೆಗಳನ್ನು ಸಂಪಾದಿಸಿಕೊಂಡು ಪಠ್ಯಕ್ರಮವನ್ನು ಮರುರೂಪಿಸಲಾಗಿದೆ. ಪಠ್ಯಕ್ರಮದ ಮಾಹಿತಿ ಕುರಿತಾದ ಅಸ್ಪಶ್ಟತೆ ಎದುರಾದಾಗಲೆಲ್ಲ ಹಿರಿಯ ಅಧ್ಯಾಪಕರೊಂದಿಗೆ ಚರ್ಚಿಸಿ ತೀರ್ಮಾನಕ್ಕೆ ಬರಲಾಗಿದೆ.

೫. ಪ್ರಸ್ತುತ ಚರ್ಚೆಯು ಎಸ್.ವಿ. ಪರಮೇಶ್ವರ ಭಟ್ಟರ ಕನ್ನಡ ಅಭಿಜ್ಞಾನ ಶಾಕುಂತಲ ನಾಟಕವನ್ನು ಆಧರಿಸಿದೆ.

೬. ಶಿವರಾಮ ಕಾರಂತ: ೧೯೬೮, ಅಳಿದ ಮೇಲೆ, ಹರ್ಶ ಪ್ರಕಟಣಾಲಯ ಪುತ್ತೂರು

೭. ನಾನು ಅವರ ವಶದಲ್ಲಿದ್ದೆ. ನನ್ನ ಮನಸ್ಸು ಮಾತ್ರ ನನ್ನ ವಶದಲ್ಲಿರಲಿಲ್ಲ. ಅದು ಯಶವಂತರಾಯನ ವ್ಯಕ್ತಿ ಪ್ರಭಾವದಿಂದ.(ಪುಟ೩೮)

೮. 'ರೀಮಾ' ಮೇರಿ ಎಂಬುವವಳು ; 'ಸೀಲು' ಅವಳ ತಾಯಿಯಾದಂತ ಲೂಸಿ-ಇಶ್ಟು ತನ್ನಂತೆ ಹೊಳೆಯಿತು. ದಾದಾ- ಅವರ ಆಳು ಗಣಪತಿ. 'ಜಲಜ' ಎಂಬ ಪದವನ್ನು ತಿರುಗು ಮರುಗು ಮಾಡಿದರೂ, ಅದೇ ಶಬ್ದ ಉತ್ಪನ್ನವಾಗುತ್ತದೆ. ತಮ್ಮ ಹೆಂಡತಿಯ ಹೆಸರನ್ನು ಇದ್ದಕ್ಕಿದ್ದಂತೆ ಅವರು ಬರೆದಾರು-ಎಮ್ದು ನನಗನಿಸಿರಲಿಲ್ಲ. ತಮ್ಮ ಭಾವ ಜೀವನವನ್ನು ಅವರು ಚಿತ್ರಿಸುವಾಗ, ಸಂಕೇತ ಮತ್ತು ಸಂಜ್ಞೆಗಳಿಗೇನೆ ಹೆಚ್ಚಿನ ಸ್ಥಾನ ಕೊಟ್ಟಿರುತ್ತಾರೆ. ಜಲಜ ಎಂಬುದು ಅವರ ಹೆಂಡತಿಯ ನಿಜವಾದ ಹೆಸರಿರದೆ ಸಾಂಕೇತಿಕ ಪದವಿರಬಹುದು. 'ಕಮಲ' ಎಂದಿರಬಹುದೆ? 'ಪಂಕಜ' ಎಂದಿರಬಹುದೆ? 'ವನಜ' ಎಂದಿರಬಹುದೆ? ಎಂಬ ಹತ್ತಾರು ಅನುಮಾನಗಳಿಗೆ ಗುರಿಯಾದೆ. ಅವರು ನನಗೆ

ಒದಗಿಸಿಕೊಟ್ಟಿರುವ ನಾಲ್ಕಾರು ವಿಳಾಸಗಳಿಂದ, ಆ ವ್ಯಕ್ತಿಗಳನ್ನು ಸಂಧಿಸಿ ಅವರ ಪೂರ್ವಜೀವನದ ಇತಿಹಾಸವನ್ನು ತಿಳಿಯಬೇಕೆಂಬ ಕುತೂಹಲ ನನಗಿದ್ದೇ ಇತ್ತು.

೯. ೧೯೮೨ರ ನವಂಬರ್/ಡಿಸೆಂಬರ್ ಪ್ರಶ್ನೆಪತ್ರಿಕೆಯ ಪ್ರಶ್ನೆಗಳು.

೧೦. ಕೆ.ಪಿ. ಪೂರ್ಣಚಂದ್ರ ತೇಜಸ್ವಿ: ೨೦೦೯, ವಿಮರ್ಶೆಯ ವಿಮರ್ಶೆ, ಪುಸ್ತಕ ಪ್ರಕಾಶನ ಮೈಸೂರು.

ಅಧ್ಯಾಯ–೬

## ಪದವಿಯಲ್ಲಿ ಕನ್ನಡಭಾಷಿಕ ಶಿಕ್ಷಣ: ಹೊಣೆಗಾರಿಕೆಯ ತೊಡಕುಗಳು

ಆಧುನಿಕ ಶಿಕ್ಷಣ ಪದ್ಧತಿಯ ಭಾಗವಾಗಿ ಸಾಹಿತ್ಯ ಕೃತಿಗಳನ್ನು ಹುಡುಕಿ ಓರಿಯೆಂಟಲ್ ಮತ್ತು ದೇಶೀ ಸಂಸ್ಕೃತ ಪರಂಪರೆಯ ತಿಳುವಳಿಕೆಗಳಲ್ಲಿ ಕಟ್ಟಲಾಯಿತು. ಹೀಗೆ ಕಟ್ಟಿಕೊಂಡ ಕೃತಿಗಳನ್ನು ಸ್ಥಳೀಯತೆಯ ನೆಪದಲ್ಲಿ ಪಠ್ಯಕ್ರಮದೊಳಗೆ ತಂದು ನೀತಿಸಹಿತವಾದ ಪಠ್ಯದ ಆಶಯ ಮತ್ತು ಪಾಠಸಾರವನ್ನು ಗ್ರಹಿಸುವುದು ಶಿಕ್ಷಣ ಕಲಿಕೆಯ ತಿಳುವಳಿಕೆಯಾಗಿ ಜಾರಿಗೊಳಿಸಲಾಯಿತು. ಕನ್ನಡಭಾಷಿಕ ಶಿಕ್ಷಣ, ಕನ್ನಡಸಾಹಿತ್ಯ ಪಠ್ಯಗಳ ಸಾರವನ್ನು ಅರಿಯುವುದು ಎಂದಾಗಿ ಸಂಸ್ಕೃತ ಪರಂಪರೆಯ ಸ್ಮೃತಿಯು ಪರೀಕ್ಷೆಯ ಮಾನದಂಡವಾಯಿತು. ಇಂಥ ಕಲಿಕೆ ಮತ್ತು ಗ್ರಹಿಕೆಯ ಪರೀಕ್ಷೆಗಳಿಗಾಗಿ ಪಂಡಿತಮಾನ್ಯ ವಿಧಾನದ ಅಭ್ಯಾಸಕ್ರಮ ಬೆಳೆದು ಸಂಸ್ಕೃತ ಪರಂಪರೆಯ ವ್ಯಾಕರಣ ಮತ್ತು ನಿಘಂಟುಗಳಿಗೆ ಅನುಗುಣವಾಗಿ ಕನ್ನಡವನ್ನು ಸಂಘಟಿಸಲಾಯಿತು. ಓರಿಯಂಟಲಿಸ್ಟರ ಅಧ್ಯಯನಗಳ ಪರಿಣಾಮವಾಗಿ ಇಂಗ್ಲಿಶ್ ವ್ಯಾಕರಣವೂ ಸಹ ಕನ್ನಡವನ್ನು ಸಂಘಟಿಸುವಲ್ಲಿ ಪ್ರಭಾವಿಸಿತು. ಅಲ್ಲದೆ, ಸಂಸ್ಕೃತ ಪರಂಪರೆಯಿಂದ ಬಂದವರೆ ಇಂಗ್ಲಿಶ್ ಅಭ್ಯಾಸವನ್ನು ಮಾಡಿ ಆಧುನಿಕವಾಗಿ ಕನ್ನಡವನ್ನು ಸಂಘಟಿಸುವ ಕೆಲಸದಲ್ಲಿ ತೊಡಗಿಕೊಂಡಿದ್ದರಿಂದ ಯಜಮಾನ ಭಾಷೆಯಾದ ಇಂಗ್ಲಿಶ್, ಪರಂಪರೆಯ ಭಾಷೆಯಾದ ಸಂಸ್ಕೃತ, ತರಗತಿಗಳಲ್ಲಿ ಕನ್ನಡ ಭಾಷೆಯನ್ನು ಸಂಘಟಿಸುವಲ್ಲಿ ಪ್ರಮುಖ ಪಾತ್ರವನ್ನು ನಿಭಾಯಿಸಿದವು. ಈ ಕಾರಣವಾದ ವಿದ್ಯಮಾನಗಳಿಂದಾಗಿ ವಸಾಹತುವನ್ನು ರಾಜಕೀಯವಾಗಿ ಎದುರಿಸಲು ಬೇಕಾದ ಸಾಂಸ್ಕೃತಿಕ ಶಕ್ತಿಯೊಂದು ಸ್ಥಳೀಯ ನೆಲೆಗಳಲ್ಲಿಯೇ ರೂಪುಗೊಳ್ಳತೊಡಗಿತಾದರೂ, ಇದರ ಪರಿಣಾಮವಾಗಿ ಏರ್ಪಟ್ಟ, ಸಂಸ್ಕೃತ ಪರಂಪರೆಯ ಸಂಪ್ರದಾಯ ಮತ್ತು ಆಧುನಿಕತೆಯ ನಡುವಿನ ಸಂಘರ್ಷದಿಂದ ವಿಚಿತ್ರವಾದ ಶೈಕ್ಷಣಿಕ

ಸನ್ನಿವೇಶವೊಂದು ಹುಟ್ಟಿಕೊಂಡಿತು. ಯು.ಆರ್. ಅನಂತಮೂರ್ತಿಯವರು, ಭಾರತೀಯ ಭಾಷಾ ಸಂಸ್ಥಾನದವರಿಗಾಗಿ ಸಂಪಾದಿಸಿದ **ಕನ್ನಡ ಸಾಹಿತ್ಯ ಸಂಕಲನಕ್ಕೆ** ಬರೆದ ಮುನ್ನುಡಿಯಲ್ಲಿ **ಕನ್ನಡ ಸಾಹಿತ್ಯ ನಡೆದು ಬಂದ ದಾರಿ**ಯನ್ನು 'ಈಗ ಬದುಕುತ್ತಿರುವ ಕನ್ನಡ ಸಾಹಿತ್ಯದ ಬೇರುಗಳನ್ನು ಅದರ ಹಿಂದಿನ ಇತಿಹಾಸದಲ್ಲಿ ಗುರುತಿಸುವುದು ಹಳಗನ್ನಡ ಸಾಹಿತ್ಯದಿಂದ ನಾನು ಆರಿಸಿದ ಭಾಗಗಳಲ್ಲಿ ಸಾಧ್ಯವಾದರೆ ನನ್ನ ಉದ್ದೇಶ ಸಫಲವಾದಂತೆ(ಅನಂತಮೂರ್ತಿ ೧೯೮೦)' ಎಂದು ಪರಂಪರೆಗೆ ಮರಳುತ್ತಾರೆ. ಈ ಮೂಲಕ ಅವರು 'ಕನ್ನಡ ಸಾಹಿತ್ಯದಲ್ಲಿ ಕಾಣುವ ಅತ್ಯುತ್ತಮ ಗುಣ'ವನ್ನು 'ಗದ್ದಲವಿಲ್ಲದಂತೆ ಬದುಕನ್ನು ಅವಲೋಕಿಸುವ ಶಕ್ತಿ ಮತ್ತು ಆ ಶಕ್ತಿಯ ಹಿಂದೆ ಇರುವ ಕನ್ನಡಿಗರಿಗೆ ಸಹಜವಾದ ವಿನಯ'ದ ಮೂಲಕ ಕಾಣುತ್ತಾರೆ. ಅದನ್ನು; ನಮ್ಮ ಅತ್ಯುತ್ತಮ ಸಾಹಿತ್ಯ ಪ್ರವಾದಿಯಂತೆ ಕೈಗಳನ್ನೆತ್ತಿ ಏನನ್ನೂ ಘೋಶಿಸುವುದಿಲ್ಲ. ತೋರುಗಾಣಿಕೆಯ ಭಂಗಿಗಳೆಂದರೆ ನಾಚುವ ಲೇಖಕರೇ ನಮ್ಮಲ್ಲಿ ಹೆಚ್ಚು. ತಮ್ಮ ಆಸಕ್ತಿಗಳನ್ನು ದೊಡ್ಡ ಗಂಟಲಲ್ಲಿ ಕೂಗಿಕೊಳ್ಳದೆ ಒಳಗಿನಿಂದ ನೋಡುವ ಆಪ್ತತೆ, ವೈಯುಕ್ತಿಕವಾದ ಒಳನೋಟದ ಎಚ್ಚರ ಕನ್ನಡದಲ್ಲಿ ನನಗೆ ಪ್ರಿಯವಾದ ಗುಣ. ನಾನು ಭಾರತೀಯನಾಗಿದ್ದಾರೂ ಮೂಲತಃ ಕನ್ನಡಿಗ ಕೂಡ ಎನ್ನುವ ಪ್ರಜ್ಞೆಯಿಂದಾಗಿ ನಮ್ಮ ಸಾಹಿತ್ಯದಲ್ಲಿ ವಿಶಿಶ್ಟವಾದೊಂದು ಗುಣ ಕಾಣಿಸುತ್ತದೆ ಎಂದು ನನ್ನ ಭಾವನೆ' ಎಂದು ವಿವರಿಸುತ್ತಾ, ಇದಕ್ಕೆ ಕಾರಣವನ್ನು ' ಒಂದು ಭಾಶೆ ಇಡೀ ಸಂಸ್ಕೃತಿಯ ಹಿಂದಿರುವ ಮನಸ್ಸಿಗೆ ದ್ಯೋತಕವಾಗುವುದರಿಂದ ನಮ್ಮ ಭಾಶೆ ಕನ್ನಡತನವನ್ನು ಕಳೆದುಕೊಳ್ಳದಂತೆ ಸಂಸ್ಕೃತವನ್ನು ಬಳಸಿಕೊಳ್ಳುತ್ತ ಬಂದ ಕ್ರಮ ವಿಶೇಶವಾದ ಅವಗಾಹನೆಗೆ ಅರ್ಹವೆಂದು ನನ್ನ ಭಾವನೆ' ಎಂದು ಗುರುತಿಸಿಕೊಳ್ಳುತ್ತಾರೆ. ಅಂದರೆ, ಸಂಸ್ಕೃತ ಪರಂಪರೆಯಿಂದ ಬಂದವರಿಗೆ ತಮ್ಮ **ಸ್ವ** ಅನ್ನು ದ್ಯಾನಿಸಲು ಕನ್ನಡ ನೆಪವಾಗಿ ಮಾತ್ರವೇ ಕಾಣತೊಡಗಿತು. ಆದ್ದರಿಂದಾಗಿ ಸಂಸ್ಕುತವನ್ನು ಬಳಸಿಕೊಳ್ಳುವ ಕ್ರಮಗಳೇ ಮುಖ್ಯವಾದವು.

ಏಕೀಕೃತ ಕರ್ನಾಟಕದ ಸಂದರ್ಭದಲ್ಲಿ ಪರ್ಯಾಯ ಯಜಮಾನಿಕೆಯಾಗಿ ವಸಾಹತುವನ್ನು ಎದುರಿಸಲು ಬಳಸಲಾಗಿದ್ದ ಸಂಸ್ಕೃತ ಪರಂಪರೆಯೇ ಹೀಗೆ ಮುಂದುವರಿಯಿತಾದ್ದರಿಂದ ಕನ್ನಡವನ್ನು **ಮಾತೃ**ಭಾಶೆಯಾಗಿಸಿಕೊಂಡು ಸಂಸ್ಕೃತ ಪರಂಪರೆಯನ್ನು **ಪಿತೃ**ವಾಗಿಯೇ ಸ್ಥಾಪಿಸುತ್ತಾ ಬರಲಾಯಿತು. ಏಕೀಕೃತ ಕರ್ನಾಟಕ ಮತ್ತು ಏಕೀಕೃತ ಕನ್ನಡದ ಮೂಲಕ ಇದು ಈಗಾಗಲೇ ರೂಢಿಸಿಕೊಂಡ ವಿದ್ಯಮಾನವಾಗಿದ್ದರಿಂದ ಪ್ರಭುತ್ವಕ್ಕೆ ಇದು ಸುಲಭವೂ ಆಗಿ ಕಂಡಿತು. ಇದರಿಂದಾಗಿ ಬದಲಾದ ಆಡಳಿತದ ಸಂದರ್ಭದಲ್ಲಿಯೂ ಸಹ ಕನ್ನಡವನ್ನು

ಆಡಳಿತಾತ್ಮಕವಾಗಿ ನಿರೂಪಿಸಿಕೊಳ್ಳುವುದು ಕಾಣುವುದಿಲ್ಲ[೧]. ಆದ್ದರಿಂದಾಗಿ, ಆಡಳಿತದ ಭಾಗವಾಗಿ ಹೊಸದಾಗಿ ಕನ್ನಡ ನಿರೂಪಣೆಗೊಳ್ಳದ್ದರಿಂದ, ಕನ್ನಡದ ಮೇಲಿನ ಯಜಮಾನಿಕೆಯನ್ನು ಸಾಂಸ್ಕೃತಿಕವಾಗಿ ಸಂಸ್ಕೃತ ಪರಂಪರೆಯೇ ಪ್ರಾಚೀನ ಪಠ್ಯಗಳ ಮೂಲಕ ಮತ್ತಷ್ಟು ನಿಭಾಯಿಸಿಕೊಳ್ಳತೊಡಗಿತು. ಕೆ.ವಿ. ನಾರಾಯಣ ಅವರು ಹೇಳುವಂತೆ, ಈ ಎಲ್ಲಾ 'ಚಾರಿತ್ರಿಕ ವಿನ್ಯಾಸಗಳಿಂದಾಗಿ ೨೦ನೆ ಶತಮಾನದ ಉತ್ತರಾರ್ಧದಲ್ಲಿ ಕನ್ನಡದ ಸಾಧ್ಯತೆಗಳನ್ನು ವಿಸ್ತರಿಸಿಕೊಳ್ಳಲು ಸಂಸ್ಕೃತದ ನೆರವನ್ನು ಪಡೆಯುತ್ತಾ ಸಂಸ್ಕೃತಭಾಶೆಯ ಮರುಸ್ಥಾಪನೆ ಆಗುವುದನ್ನು ನೋಡುತ್ತೇವೆ. ಇದರಿಂದಾಗಿ ಶುದ್ಧ ಕನ್ನಡವೆಂದರೆ ಸಂಸ್ಕೃತಮಯ ಕನ್ನಡ ಎನ್ನುವ ತರ್ಕ ನೆಲೆಗೊಂಡಿತು'[೨].

ಕನ್ನಡ ಭಾಶೆಯ ಪಠ್ಯಕ್ರಮವಾಗಿ ಕನ್ನಡಸಾಹಿತ್ಯ ಪಠ್ಯಗಳನ್ನು ಆಧುನಿಕ ಶಿಕ್ಶಣ ಸಂದರ್ಭದ ಸುದೀರ್ಘವಾದ ಕಲಿಕೆಯಲ್ಲಿ ಬಳಸುತ್ತಾ ಬಂದಿರುವುದು ಸರಿಯಶ್ಟೆ. ಹೀಗೆ, ಈ ಪಠ್ಯಕ್ರಮಗಳನ್ನು ಬಳಸುತ್ತಿರುವುದು ಕರ್ನಾಟಕ ಏಕೀಕರಣ ಪೂರ್ವದಲ್ಲೂ ಮತ್ತು ಏಕೀಕರಣೋತ್ತರದಲ್ಲೂ ನಡೆದುಬಂದ ವಿದ್ಯಮಾನವೇ ಆಗಿದೆ. ಆ ಮೂಲಕ ಬ್ರಿಟಿಶ್ ಆಡಳಿತಾವಧಿ ಮತ್ತು ನಂತರದ ಸ್ವತಂತ್ರಭಾರತ ಸಂದರ್ಭದ ಏಕೀಕೃತ ಕರ್ನಾಟಕ ಆಡಳಿತಾವಧಿಗಳಲ್ಲಿ ಇದು ವಿಸ್ತರಿಸಿದೆ. ಪ್ರಸ್ತುತ, ಜಾಗತೀಕೃತವಾಗಿ ಬದಲಾಗುತ್ತಿರುವ ಸಾಮಾಜಿಕ ಸಂದರ್ಭದ ಹೊಸ ಪದವಿ ಕೋರ್ಸುಗಳ ಸಂದರ್ಭದಲ್ಲೂ ಮುಂದುವರಿದ ವಿದ್ಯಮಾನವೇ ಆಗಿದೆ. ಈ ಹಿನ್ನೆಲೆಯಲ್ಲಿ, ಕನ್ನಡಭಾಶಿಕ ಶಿಕ್ಶಣಕ್ಕೆ ಸಂಬಂಧಿಸಿದಂತೆ ನಡೆದ ಒಟ್ಟು ಈ ವಿದ್ಯಮಾನಗಳಲ್ಲಿನ ಕನ್ನಡ ಭಾಶೆಯ ಹೊಣೆಗಾರಿಕೆಯ ತೊಡಕುಗಳನ್ನು ಗುರುತಿಸಿಕೊಳ್ಳಬೇಕಾದ ಅನಿವಾರ್ಯತೆ ಕನ್ನಡಕ್ಕೆ ಎದುರಾಗುತ್ತಿರುವ ಆತಂಕಗಳ ಕಾರಣವಾಗಿ ಮುಖ್ಯವಾದುದಾಗಿದೆ.

ಬೌಗೋಳಿಕ ಕರ್ನಾಟಕ ಮತ್ತು ಭಾಶಿಕ ಕರ್ನಾಟಕ ಸಂಬಂಧದ ಹೋರಾಟದ ಪ್ರಶ್ನೆಯು[೩] ೧೯ನೇ ಶತಮಾನದ ಕೊನೆಯ ಭಾಗದಿಂದಲೇ ಪ್ರವೃತ್ತವಾಗಿರುವುದರಿಂದಾಗಿ ಶಿಕ್ಶಣದ ಜೊತೆ ಜೊತೆಯಲ್ಲಿಯೇ ನಾಡು ನುಡಿಯ ಪ್ರತಿನಿಧೀಕರಣವಾಗಿಯೂ ಕನ್ನಡಸಾಹಿತ್ಯವನ್ನು ಬಹುಮುಖ್ಯ ಪರಿಕರವನ್ನಾಗಿ ಕಟ್ಟಿಕೊಳ್ಳಲಾಗಿದೆ[೪]. ಸಾಂಸ್ಕೃತಿಕ ದ್ರವ್ಯವಾಗಿ ಬಳಸಲಾಗಿದೆ. ಹೀಗಾಗಿ ಪ್ರಾಚೀನ ಕನ್ನಡ ಪಠ್ಯಗಳ ಹುಡುಕಾಟ, ಅದನ್ನು ಓರಿಯಂಟಲ್ ಜ್ಞಾನದ ಮೂಲಕ ಚಾರಿತ್ರಿಕವಾಗಿ ಕಟ್ಟಿಕೊಂಡ ಕ್ರಮ ಮತ್ತು ಪಠ್ಯಕ್ರಮವಾಗಿ ಭಾಶೆಯ ಕಲಿಕೆಯಲ್ಲಿ ಪ್ರವೇಶ ಪಡೆದದ್ದನ್ನು[೫] ಇಲ್ಲಿಯವರೆಗಿನ ವಿಶ್ಲೇಶಣೆಯಿಂದ ಗ್ರಹಿಸಬಹುದಾಗಿದೆ. ಈ ಮೂಲಕ, ಡಿ.ಆರ್. ನಾಗರಾಜ್[೬] ಹೇಳುವ ಹಾಗೆ, 'ವೇದಾಂತದ ಗರ್ಭದಿಂದಲೇ ಪರದೇಸಿ ದಬ್ಬಾಳಿಕೆಯನ್ನು ವಿರೋಧಿಸುವ

ಚೈತನ್ಯ'ವು ಹುಟ್ಟಿಕೊಂಡಿತಲ್ಲದೆ, ಈ ಪ್ರಕ್ರಿಯೆಯಲ್ಲಿ 'ನಿರ್ದಿಷ್ಟ ಘಟ್ಟದ ಜಾತಿ–ವರ್ಗದ ಒಕ್ಕೂಟಗಳು ತಮಗೆ ಅಗತ್ಯವಾದ ದರ್ಶನಗಳನ್ನು ಆಯ್ದುಕೊಂಡು ಅದರ ಮೂಲಕ ಮುನ್ನಡೆದವು. ಪಾರಂಪರಿಕವಾಗಿ ದತ್ತವಾಗಿದ್ದ ಸಾಮಾಜಿಕ ಅವಕಾಶವನ್ನು ಬಳಸಿಕೊಂಡು ಆಧುನಿಕವಾಗಿಯೂ ಕಟ್ಟಿಕೊಂಡ ಅಧಿಕಾರಕ್ಕೆ, ಯಜಮಾನ್ಯಕ್ಕೆ ಹಾತೊರೆದವು.

ಕನ್ನಡ ಮತ್ತು ಕರ್ನಾಟಕವನ್ನು ಏಕೀಕೃತಗೊಳಿಸಲು ಪ್ರವೃತ್ತವಾದ ಹೋರಾಟ ಮತ್ತು ಚಿಂತನೆಗಳಲ್ಲಿ ತೊಡಗಿದ್ದವರು ಸಂಸ್ಕೃತ ಪರಂಪರೆಯಿಂದ ಬಂದ ಮೇಲ್‌ಮಧ್ಯಮ ವರ್ಗದವರೇ ಆಗಿದ್ದರಿಂದ ಹೊಸಕಾಲಮಾನದ ಭೌಗೋಳಿಕ ಕರ್ನಾಟಕಕ್ಕೆ ಬೇಕಾದ ಕನ್ನಡ ಭಾಶೆಯನ್ನು ತಮ್ಮ ಪಾರಂಪರಿಕ ವಿದ್ವತ್ತಿನ ಮೂಲಕವೇ ರೂಪಿಸಲು ಪ್ರಯತ್ನಿಸುವುದು ಮತ್ತೂ ಸುಲಭವಾಯಿತು. ಇದರಿಂದಾಗಿ ಕನ್ನಡ, ಕರ್ನಾಟಕದ ಗುರುತುಗಳು ಸಂಸ್ಕೃತ ಪರಂಪರೆಯ ಮೂಲಕವೇ ಮಂಡಿಸಲ್ಪಟ್ಟವು[i]. ಭಾರತ ಮತ್ತು ಸಂಸ್ಕೃತ ಎರಡೂ ಸಮಾನವಾಚಿಗಳಾದವು. ಕನ್ನಡದಲ್ಲೂ ಈ ಚಿಂತನೆ ಬಲವಾಗಿ ಬೇರೂರಿತ್ತು. ಆದ್ದರಿಂದಾಗಿ, ಸಂಸ್ಕೃತ ಕಾವ್ಯಮೀಮಾಂಸೆಯನ್ನು ಭಾರತೀಯ ಕಾವ್ಯಮೀಮಾಂಸೆ ಎನ್ನಲಾಯಿತು. ಸಂಸ್ಕೃತ ಭಾಶೆಯ ವ್ಯಾಕರಣ ಚೌಕಟ್ಟನ್ನು ಕನ್ನಡ ಭಾಶೆಗೆ ಅನ್ವಯಿಸಲಾಯಿತು. ಬಹುಮುಖ್ಯವಾದ ಎಲ್ಲ ಚರ್ಚೆಗಳಲ್ಲೂ ಹೀಗೆ ಸಂಸ್ಕೃತವನ್ನು ದೇಶವ್ಯಾಪೀ ಚಿಂತನೆಗೆ ಸೂಚಕವನ್ನಾಗಿ ಮಾಡಿಕೊಳ್ಳಲಾಯಿತು[ii]. ಇದು, ಶಿಕ್ಶಣದ ಸಂದರ್ಭದಲ್ಲಿ ಕನ್ನಡದ ನೆಪದಲ್ಲಿ ಸಂಸ್ಕೃತ ಪರಂಪರೆಯ ಪಾಂಡಿತ್ಯವೇ ಮುಖ್ಯವಾದ ಕನ್ನಡ ಪಂಡಿತರ ಉತ್ಪಾದನೆಗೆ ದಾರಿ ಮಾಡಿಕೊಟ್ಟಿತು. ಹೀಗೆ ಉತ್ಪಾದನೆಯಾದ ಕನ್ನಡ ಅಧ್ಯಾಪಕರು–ಪಾಂಡಿತ್ಯ ಪಡೆದ ಗಂಡಸರು- ಎಂದಾಗಿ, ಇವರನ್ನು ಕನ್ನಡ ಸಾಹಿತ್ಯ, ಭಾಶೆ, ಸಂಸ್ಕೃತಿಯ ವಕ್ತಾರರನ್ನಾಗಿ ಪ್ರತಿನಿಧೀಕರಿಸಿ ಬಿಂಬಿಸುವಂತಾಯಿತು. ಇದನ್ನೇ ಡಿ.ಆರ್.ನಾಗರಾಜ್ ಅವರು 'ಭಾರತೀಯ ಸಂಸ್ಕೃತಿ ಎಂದರೆ ಮತಾಂಧ ಮೂರ್ಖರ(ಓಕ್, ಓಕ್!) ಕ್ರೀಡಾಂಗಣ' ಎನ್ನುವುದು. ಹಾಗಾಗಿ, ಇಂದಿಗೂ ಈ ವಿದ್ವತ್ತು, ಪಾಂಡಿತ್ಯವನ್ನು ಕನ್ನಡ ಭಾಶೆಯ ಕಲಿಕೆಯಲ್ಲಿಯೂ ಧ್ಯಾನಿಸುವುದು ಸಹಜ ಎನ್ನುವಂತೆಯೇ ಆಗಿಬಿಟ್ಟಿದೆ. ಹಿರಿಯ ಅಧ್ಯಾಪಕರ ಈ ಮಾತುಗಳನ್ನು ಗಮನಿಸಿ:

> ನಂದೆಲ್ಲಾ ಓಲ್ಡ್ ಲಿಟರೇಚರ್ರು. ಕ್ಲಾಸಿಕ್ಸನ್ನೆ ನಾನು ಪಾಠ ಮಾಡೋದು. ಅದಕ್ಕೊಂದು ಕಾರಣ ಇರ್ತಾ ಇತ್ತು. ಡಿಎಲ್‌ಎನ್, ತೀನಂಶ್ರೀ, ಅವರೆಲ್ಲ ಬಂದಮೇಲೇನೆ ನಮಗೆಲ್ಲ ವಿಮರ್ಶೆ ಅಂದ್ರೆ ಏನು ಅಂತ ಗೊತ್ತಾಗಿದ್ದು. ಅಲ್ಲಿವರೆಗೆ ಪುಟ್ಟಪ್ಪ, ಏನೊ ಕಲ್ಪನಾಂಶ, ಆ ಅಂಶ ಈ ಅಂಶ ಅಂತಾ ಹೇಳೋರು. ನಿಜವಾಗಿ ವಿಮರ್ಶೆ ಶುರುವಾಗಿದ್ದು ನಮ್ಮ ಬ್ಯಾಚಿನ

ನಂತರದಲ್ಲಿ. ನಮಗೆಲ್ಲ ಡಿ ಎಲ್ ನರಸಿಂಹಾಚಾರ್ ಅವರೆ..(ಶ್ರೀನಿವಾಸ ಶರ್ಮರು ಸಂದರ್ಶನದಲ್ಲಿ– ಬೆಂಗಳೂರು ವಿ.ವಿ ವ್ಯಾಪ್ತಿ)

ಕನ್ನಡ ಪಠ್ಯಕ್ರಮಗಳಲ್ಲಿ ಸಣ್ಣದಾಗಿಯಾದರೂ ಬದಲಾವಣೆಯನ್ನು ಬಯಸುವ ಅಪೇಕ್ಷೆಗಳು ಎದುರಾದಾಗ, ಇದರಿಂದಾಗಿ ತೀವ್ರ ವಿರೋಧಗಳೂ ಸಹ ವ್ಯಕ್ತವಾಗಿವೆ. ಬದಲಾಗುತ್ತಿರುವ ಸಂದರ್ಭದಲ್ಲಿ ತನ್ನನ್ನು ಕಂಡುಕೊಳ್ಳಲಾಗದ ಕನ್ನಡ ಅಧ್ಯಾಪನ ಕೆಲಸವು ಪರಂಪರೆಯ ಪಠ್ಯಗಳ ಅನುಸಂಧಾನಕ್ಕೆ ಹಾತೊರೆಯುವುದನ್ನು ಅದಕ್ಕೆ ಬೇಕಾದ ಸಹಾಯಕ ಪರಿಕರಗಳನ್ನು ಊರುಗೋಲಾಗಿ ಮಾಡಿಕೊಂಡಿರುವುದನ್ನು ಗಮನಿಸಬಹುದಾಗಿದೆ;

ಬೇರೆ ಯಾವ ಟೆಕ್ಸ್ಟ್ ಏನೇನಾದ್ರೂ ಯಾರಿಗೂ ನಷ್ಟ ಆಗೋದಿಲ್ಲ. ಆದರೆ ಭಾಶಾ ಪಠ್ಯಗಳು ಸರಿಯಿಲ್ಲ ಅಂದ್ರೆ ಇಡೀ ಒಂದು ಸಮಾಜವೇ ಇದಾಗುತ್ತೆ, ಈಗ ಆಗ್ತಾಯಿದೆ. ಎಲ್ಲಾ ಯೂನಿವರ್ಸಿಟಿಗಳ ಪಠ್ಯಗಳಲ್ಲಿರುವಂತಹ ದೊಡ್ಡ ದೋಶ ಅಂತ ಹೇಳಿದ್ರೆ ನಾವು ಕ್ಲಾಸಿಕ್ಸ್‌ನಿಂದ ಹಿಂದೆ ಹೋಗಿ, ಈ ಕಂಪ್ಯೂಟರ್ ಕಲಿಸ್ತೇವೆ, ಅದು ಕಲಿಸ್ತೇವೆ, ಇದು ಕಲಿಸ್ತೇವೆ ಅಂತ ಹೋಗಿ– ನಮ್ಮ ಪಠ್ಯ ಪುಸ್ತಕ ಕಮಿಟಿಯಲ್ಲಿ ಮೆಂಬರ್ ಆಗಿದ್ದೀನಿ ನಾನು, ಬೋರ್ಡ್ ಆಫ್ ಸ್ಟಡೀಸ್‌ನಲ್ಲಿದ್ದೀನಿ, ನಾನು ಎಶ್ಟು ಹೋರಾಟ ಮಾಡಿದ್ದೀನಿ ಗೊತ್ತಾ–ಕೆಲವು ಒತ್ತಾಸೆಗೆ ಮಣಿದು, ಕೆಲವು ಸರ್ಕಾರದ ಒತ್ತಾಯಗಳಿಗೆ ಮಣಿದು, ಪಠ್ಯ ಪುಸ್ತಕದ ಸ್ವರೂಪ ಬದಲಾಗಿದೆ. ನಾವು ಲಿಟರೇಚರ್‌ನಿಂದ ಸಂಪೂರ್ಣ ಬದಲಾಗಿದ್ದೀವಿ. ಭಾಶೆ ಮತ್ತು ಲಿಟರೇಚರ್‌ನ ಕಡೆಗಣಿತದಿಂದಾಗಿ ಇವತ್ತು ನಮ್ಮ ಹುಡುಗರಿಗೆ ಎರಡು ವಾಕ್ಯ ಬರೆಯುವುದಕ್ಕೆ ಬರುವುದಿಲ್ಲ. ಆ ಸ್ಥಿತಿಯಾಗಿದೆ. ಎಲ್ಲಾ ಮೂರು ಮಾರ್ಕಿನ ಪ್ರಶ್ನೆ, ಎರಡು ಮಾರ್ಕಿನ ಪ್ರಶ್ನೆ, ಐದು ಮಾರ್ಕಿನ ಪ್ರಶ್ನೆ.(ಹೊಸ್ಕೆರೆ ಶಿವಸ್ವಾಮಿ–ಮಂಗಳೂರು ವಿ.ವಿ. ವ್ಯಾಪ್ತಿ)

ಪಾಠ ಮಾಡಲಿಕ್ಕೆ, ಈ ಪಂಪ ರನ್ನ ಇಂತವರನ್ನ ಅವಶ್ಯಕವಾಗಿ ಪಾಠ ಮಾಡೋರಿಗೆ ನೀವು ಟಿಪ್ಪಣಿಗಳನ್ನ ಕೊಡದೇ ಇದ್ದರೆ ಅವರು ಹ್ಯಾಗೆ ಪಾಠ ಮಾಡ್ತಾರೆ. ಈಗ ತಾನೇ ವೃತ್ತಿಗೆ ಬಂದಿರ್ತಾರೆ ಅವರು. ಆದ್ದರಿಂದ ಟಿಪ್ಪಣಿಗಳನ್ನ ನಾವು ವಿವರವಾಗಿ ಕೊಡ್ಲೇಬೇಕು... ನಾವು

ವಿದ್ವಾಂಸರಲ್ಲ, ಅಷ್ಟು ದೊಡ್ಡವರಲ್ಲಾ, ಆದರೆ ಅಟ್‌ಲಿಸ್ಟ್ ಅವರನ್ನ ಆದರ್ಶವಾಗಿ ಇಟ್ಕೊಂಡು ಅದನ್ನ ಮುಟ್ಟಲಿಕ್ಕೆ ಪ್ರಯತ್ನ ಮಾಡಬೇಕು ನಾವು(ರೇಣುಕಾ ಪ್ರಸನ್ನ–ಮೈಸೂರು ವಿ.ವಿ.ವ್ಯಾಪ್ತಿ)

ಈ ಒತ್ತಾಸೆ ಕರ್ನಾಟಕದ ಯಾವುದೇ ವಿಶ್ವವಿದ್ಯಾಲಯದ ಸಂದರ್ಭದಲ್ಲಿಯೂ ಗಮನಿಸಬಹುದಾದ ಸಂಗತಿಯೇ ಆಗಿದೆ. ಈ ಬಗೆಯ ವಿದ್ವತ್ತನ್ನು ಕನಸುವುದನ್ನು ಕಾಣತ್ತಲೇ ಇದ್ದೇವೆ;

> ಹೊಸ ತಲೆಮಾರಿನ ಬಗ್ಗೆ ನನ್ನ ಅನಿಸಿಕೆ ಏನುಂತಂದ್ರೆ, ಅಧ್ಯಯನಶೀಲತೆ ಬಹಳ ಕಮ್ಮಿ ಇದೆ. ಅಥವಾ ಚೆನ್ನಾಗಿ ಆಲೋಚನೆ ಮಾಡ್ತಾ ಇರೋರು ಇದಾರೆ ಅಂದ್ರೆ ಅವರು ಒಂದೆರಡು ಸೆಮಿನಾರುಗಳಲ್ಲಿ ಭಾಗವಹಿಸಿದ ನಂತರ ಅವರು ಸ್ವಯಂಭು ಆಗ್ಬಿಡ್ತಾರೆ. ಇನ್ನು ನಾನು ತಿಳುಕೊಳ್ಳಬೇಕಾದ್ದು ಏನೂ ಇಲ್ಲ ಅಂತ. ಹಿಂದಿತ್ತಲ್ಲ, ನಮ್ಮ ಬಿಎಂಶ್ರೀ, ತೀನಂಶ್ರೀ, ಡಿಎಲ್ ಎನ್ ಅವರೆಲ್ಲ ಅವರ ಜೀವನದ ಕೊನೆಯ ಉಸಿರಿರೊತನಕ ಅಧ್ಯಯನಶೀಲರಾಗಿದ್ರು. ಅಧ್ಯಯನಶೀಲತೆ ಇಲ್ಲದ ಬರೀ ಬುದ್ಧಿ ಬಹಳ ದಿನ ಓಡಲ್ಲ. ಡ್ರೈವಿಂಗ್ ಸ್ಕಿಲ್ ಇದ್ರೆ ಹೋಗ್ಬಹುದು, ಆದ್ರೆ ಪೆಟ್ರೋಲ್ ಬೇಕಲ್ಲ. ಆದ್ದರಿಂದ ಹೊಸ ತಲೆಮಾರಿನಲ್ಲಿ ಆ ಸನ್ನದ್ಧತೆ ಮತ್ತು ವ್ಯಾಪಕವಾದ ನಿರಂತರತೆ ಇಲ್ಲ. ಅಮೇಲೆ ಅಧ್ಯಯನ ಅಗತ್ಯ ಅನ್ಸಿಲ್ಲ. ಇದೊಂದು ದೊಡ್ಡ ಟ್ರ್ಯಾಜಿಡಿ.(ಸಿ.ಪಿ.ನಾಗರಾಜು– ಮೈಸೂರು ವಿ.ವಿ. ವ್ಯಾಪ್ತಿ)

ಇಂಥ ಸ್ಥಾಪಿತ ಅಭಿಪ್ರಾಯಗಳು ಬಹುಪ್ರಬಲವಾಗಿಯೇ ಚಾಲನೆಯಲ್ಲಿವೆ. ಅಥವಾ ಇಂಥ ಅಭಿಪ್ರಾಯಗಳು ಸಾಹಿತ್ಯದ ಓದು ಕಟ್ಟಿಕೊಡುವ ವೈಚಾರಿಕ ಆಕೃತಿಗಳಿಂದ ಮೂಡಿದ ತಿಳುವಳಿಕೆ ಮಾತ್ರದಿಂದ ಹುಟ್ಟಿದವುಗಳಾಗಿವೆ.

> ಮೊದಲು ಲಾಂಗ್ವೇಜ್ ಟೆಕ್ಸ್ಟ ನಾನು ಯಾವುದನ್ನು ಓದಿದ್ದೀನಿ ಅನ್ನುವುದು ನನಗೆ ನೆನಪಿಲ್ಲ. ಆಮೇಲೆ ಅದರಿಂದ ಆಗಿರುವ ಉಪಯೋಗಗಳು ನೆನಪಲ್ಲಿಲ್ಲ ನನಗೆ. ಡಿಗ್ರಿಲಿ ಏನೇನ್ ಓದಿದೆ, ಏನೇನ್ ಮಾಡಿದೆ, ಯಾವ ಯಾವ ಟೆಕ್ಸ್ಟ ಓದಿದೆ ಎನ್ನುವುದು ಏನೇನೂ ನೆನಪಿಲ್ಲ ನನಗೆ, ಆದರೆ ನೆನಪಲ್ಲಿರುವುದು ಕನ್ನಡ ಮೇಸ್ಟ್ರುಗಳು. ಅವರ ಜೊತೆ ವೈಯುಕ್ತಿಕವಾಗಿ ಸಂಬಂಧ ಹೇಗಿತ್ತು ಅನ್ನುವುದು ಮಾತ್ರ ನೆನಪಲ್ಲಿದೆ. ಪ್ರಯೋಜನ ಹೆಂಗಾಗಿದೆ ಅಂದ್ರೆ ಮೇಸ್ಟ್ರುಗಳಿಂದ ಅವರ ಚರ್ಚೆಗಳಿಂದ ಪ್ರಯೋಜನ ಆಗಿತ್ತು. ಅವರು ಪಾಠದ ಮಧ್ಯೆ ಬೇರೆ ಬೇರೆಯೆಲ್ಲಾ ಹೇಳ್ತಿದ್ರಲ್ಲಾ, ಅದು ಬೇರೆ ಯಾರೂ ಹೇಳದೇ

ಇರುವುದನ್ನ ಕನ್ನಡ ಮೇಸ್ಟ್ರುಗಳು ಮಾತ್ರ ಹೇಳ್ತಿದ್ರು. ಸೋಶಿಯಾಲಜಿ, ಎಕಾನಾಮಿಕ್ಸ್‌ನವರೆಲ್ಲಾ-ಅವರ ಮಾಧ್ಯಮ ಇಂಗ್ಲೀಶಾಗಿತ್ತು. ಬಹುಶಃ ಇಂಗ್ಲಿಶ್ ಮಾಧ್ಯಮದಲ್ಲೇ ಓದಿರಬೇಕು. ಯಾವ ಸಾಂಸ್ಕೃತಿಕ ರಾಜಕಾರಣವನ್ನೂ ಮಾತನಾಡುವುದು ಗೊತ್ತಿರಲಿಲ್ಲ. ಅವರಿಗೆ ಯಾವ ತತ್ವವೂ ಗೊತ್ತಿರಲಿಲ್ಲ. ಯಾವ ಗಾಂಧಿಯೂ ಗೊತ್ತಿರಲಿಲ್ಲ, ಯಾವ ನೆಹರೂನು ಗೊತ್ತಿರಲಿಲ್ಲ. ಯಾವ ಲೋಹಿಯಾನೂ ಗೊತ್ತಿರಲಿಲ್ಲ. ನಾನು ಸೋಶಿಯಾಲಜಿ, ಎಕಾನಾಮಿಕ್ಸ್ ಮತ್ತೆ ಪೊಲಿಟಿಕಲ್ ಸೈನ್ಸ್ ಸ್ಟೂಡೆಂಟ್ ಆಗಿದ್ದವನು. ನನಗೆ ಇವಾಗಲೂ ಆಳವಾಗಿ ನಿಂತಿರುವುದು ಕನ್ನಡದಿಂದ, ಕನ್ನಡ ಸಾಹಿತ್ಯ ಓದಿದ್ದರಿಂದ ಏನು ನನಗೆ ಅರ್ಥ ಆಗಿದೆ. ಸಮಾಜವನ್ನ ಪ್ರೀತಿಸುವ ವಿಧಾನ ರೀತಿ ನೀತಿ...(ಸಿ.ಜಿ.ಲಕ್ಶ್ಮೀಪತಿ-ಸಮಾಜಶಾಸ್ತ್ರಜ್ಞ)

ಈ ಬಗೆಯ ವೈಚಾರಿಕ ತಿಳುವಳಿಕೆಯ ಭಾಗವಾಗಿ ಕನ್ನಡ ಸಾಹಿತ್ಯ ಕುರಿತ ವಿದ್ವತ್ತು ಕನ್ನಡ ಅಧ್ಯಾಪನದಲ್ಲಿ ಮುಖ್ಯ ನೆಲೆಯಾಗಿ ತರಗತಿಗಳಲ್ಲಿ ಕಾಣಿಸಿಕೊಳ್ಳುವಂತದೇ ಆಗಿತ್ತು. ಈಗಲೂ ಸಹ ಕನ್ನಡ ಅಧ್ಯಾಪನ ಕನ್ನಡ ಬೊಧನೆಯ ತರಗತಿಗಳಲ್ಲಿ ತನ್ನನ್ನು ಸ್ಥಾಪಿಸಿಕೊಳ್ಳುವ ವಿಧಾನವನ್ನಾಗಿಯೆ ಇದನ್ನು ಬಳಸುತ್ತದೆ. ಆದ್ದರಿಂದಾಗಿ, ಬದಲಾಗುತ್ತಿರುವ ಮಾರುಕಟ್ಟೆಯ ಸಂಬಂಧಗಳು, ತಂತ್ರಜ್ಞಾನದ ಬೆಳವಣಿಗೆ ಮತ್ತು ಬಳಕೆ, ಇದರಿಂದಾಗಿ ವಿಸ್ತರಿಸಿಕೊಂಡ ಮಾಧ್ಯಮ ಸಂಬಂಧಿ ವಿನ್ಯಾಸಗಳಲ್ಲಿ ಕನ್ನಡ ಭಾಶಿಕವಾಗಿ ಮೈಲಿಗೆಯ ನೆಲೆಯಲ್ಲಿಯೇ ಉಳಿಯುವಂತಾಯಿತು ಎಂಬುದನ್ನು ಗ್ರಹಿಸಬೇಕಾಗಿದೆ.

ಹೀಗೆ ಸಂಸ್ಕೃತ ಪರಂಪರೆಯ ಅನುಕರಣದಲ್ಲಿ ಪ್ರಜ್ಞಾಪೂರ್ವಕವಾಗಿ-ಕೆಲವೊಮ್ಮೆ ಅಭ್ಯಾಸ ಬಲದಿಂದಾಗಿಯೂ ತೊಡಗಿರುವುದರಿಂದಲೇ ಹೊಸ ಸಂದರ್ಭವನ್ನು ನಿರ್ವಹಿಸಿಕೊಳ್ಳುವುದು ಸವಾಲಾಗಿ ಪರಿಣಮಿಸಿದೆ. ಬದಲಾಗುತ್ತಿರುವ ಜಾಗತೀಕೃತ ವಿದ್ಯಮಾನಗಳಿಂದಾಗಿ ಪದವಿ ಶಿಕ್ಶಣದಲ್ಲಿ ತಾಂತ್ರಿಕ(ಬಿಸಿಎ) ಮತ್ತು ನಿರ್ವಹಣೆಯ(ಬಿಬಿಎಮ್) ಕೋರ್ಸುಗಳು ಶುರುವಾದಾಗ ಕನ್ನಡವನ್ನು ಬಹುಮಟ್ಟಿಗೆ ಇವುಗಳಿಂದ ಹೊರಗಿಡುವ ಪ್ರಯತ್ನವೇ ನಡೆದದ್ದನ್ನೂ ಸಹ ಈ ಹಿನ್ನೆಲೆಯಲ್ಲಿಯೇ ಗ್ರಹಿಸಬೇಕಾಗುತ್ತದೆ. ಬ್ಯುಸಿನೆಸ್ ಮ್ಯಾನೇಜ್‌ಮೆಂಟ್(ಬಿಬಿಎಮ್)ನಂಥ ಕೋರ್ಸುಗಳ ಸಂದರ್ಭದಲ್ಲಿ ಇದನ್ನು ಒಂದು ವರುಶಕ್ಕೆ ಸೀಮಿತಗೊಳಿಸಲಾದರೆ, ಬಿಸಿಎ ಕೋರ್ಸಿನಿಂದ ಕನ್ನಡವನ್ನು ದೂರವೇ ಇರಿಸಲಾಯಿತು. ಇದರ ಜೊತೆಯಲ್ಲಿಯೇ ಭಾಶೆಯ ಕಲಿಕೆ ಪದವಿಯ ಮೂರು ವರುಶಗಳಲ್ಲಿ ಯಾಕಿಲ್ಲ ಎಂಬ ಪ್ರಶ್ನೆಯನ್ನೂ ತಾತ್ವಿಕವಾಗಿ

ಕೇಳಿಕೊಳ್ಳಬೇಕಾಗುತ್ತದೆ[೧೦]. ಇದರಿಂದಾಗಿ ಹೊಸ ಬಗೆಯ ಕೋರ್ಸುಗಳಿಗೆ ಪ್ರವೇಶ ಪಡೆದ ಹೊಸತಲೆಮಾರಿನ ಕಲಿಕಾರ್ಥಿಗಳನ್ನು ಎದುರಿಸುವಲ್ಲಿ ಆದ ಪರಿಣಾಮಗಳೆಂದರೆ ಒಂದು; ಸಾಹಿತ್ಯವನ್ನೇ ಕಲಿತು ಬಂದ ಕನ್ನಡ ಅಧ್ಯಾಪನ ಸಮುದಾಯ ತಮ್ಮನ್ನು ಬದಲಾದ ತರಗತಿಗಳ ಸನ್ನಿವೇಶದಲ್ಲಿ ಹೇಗೆ ಪ್ರೆಸೆಂಟ್ ಮಾಡಿಕೊಳ್ಳಬೇಕೆಂಬುದು. ಎರಡು; ಹೊಸದಾಗಿ ಅಧ್ಯಾಪನದಲ್ಲಿ ಪ್ರವೇಶ ಪಡೆದವರು ತಮ್ಮನ್ನು ನಗಣ್ಯಗೊಳಿಸಿದ ಸಂದರ್ಭವನ್ನು ತೀವ್ರವಾಗಿ ಎದುರಿಸಬೇಕಾಗಿ ಬಂದದ್ದು. ಮೂರು; ಪಾರಂಪರಿಕ ದ್ಯಾನದ ಮುಂಪರಿನಲ್ಲಿದ್ದ-ಇನ್ನೂ ಇರುವ, ಹಿರಿಯ ಕನ್ನಡ ಅಧ್ಯಾಪಕರು, ಕನ್ನಡ ಪಠ್ಯಕ್ರಮ ನಿರ್ಧಾರಕರಿಂದ ಅವಹೇಳನಕ್ಕೆ ಒಳಗಾಗಬೇಕಾಗಿದ್ದು. ಇದರೊಂದಿಗೆ ಸಂಸ್ಕೃತ ಪರಂಪರೆಯ ಅಧ್ಯಾಪಕರು ಮತ್ತು ಅವರ ಶಿಷ್ಯ ಪರಂಪರೆಯ ಅಧ್ಯಾಪನವನ್ನು ವೈಭವೀಕರಿಸಲ್ಪಡುವ ಕೆಲಸವೇ ಮುಂದುವರಿಯುವಂತಾಗಿದ್ದರಿಂದಾಗಿ ಉಂಟಾದ ಈ ಪರಿಣಾಮಗಳ ಜೊತೆಗೆ, ಪದವಿ ಹಂತದಲ್ಲಿ ಕಲಿಸಬೇಕಾದ ಕನ್ನಡ ಭಾಷೆಯ ಸಾಮಾಜಿಕತೆಯನ್ನು ಗುರುತಿಸಿಕೊಳ್ಳುವುದು ಇಲ್ಲಿಯೂ ಹಿಂದೆಯೇ ಉಳಿಯಿತು. ಇದರಿಂದಾಗಿ, ಹೊಸ ಕೋರ್ಸುಗಳ ಪಠ್ಯಕ್ರಮಗಳಲ್ಲಿ ಕನ್ನಡ ಭಾಷಾ ಕಲಿಕೆಯ ಪಠ್ಯಗಳ ಸಾಮಾಜಿಕ ಪ್ರತಿನಿಧೀಕರಣವನ್ನು ಪಾರಂಪರಿಕ ಮಾದರಿಯಲ್ಲಿಯೇ ಉಳಿಸಿಕೊಳ್ಳಲಾಯಿತು.

ಈ ಪಂಡಿತಮಾನ್ಯ ಪರಂಪರೆಯನ್ನು ವಿರೋಧಿಸುವ ನೆಲೆಯಲ್ಲಿ, ವರ್ತಮಾನದ ವಿದ್ಯಮಾನಗಳಿಗೆ, ರಾಜಕಾರಣಕ್ಕೆ ಮುಖಾಮುಖಿಯಾಗುವ ಪಠ್ಯಗಳು, ಜಾಗತಿಕ ಮಟ್ಟದಲ್ಲಿ ನಡೆಯುತ್ತಿರುವ ವಾಗ್ವಾದಗಳನ್ನು ಪರಿಚಯಿಸುವ ಪಠ್ಯಗಳು, ಸ್ಥಳೀಯ ಪರಂಪರೆಯ ದ್ರವ್ಯವನ್ನು ಪರಿಚಯಿಸುವ ಪಠ್ಯಗಳು ಇರಬೇಕು(ಸುಮ.ಬಿ.ಯು) ಎಂದು ಸಾಮಾಜಿಕ ಪ್ರತಿನಿಧೀಕರಣವನ್ನು ಪ್ರಜಾಪ್ರಭುತ್ವೀಕರಿಸುವ ಆಲೋಚನೆಗಳನ್ನು ಮುಂದಿಡಲಾಗುತ್ತದೆ. ಸಾಹಿತ್ಯ ಸಂಸ್ಕೃತಿಯ ವಿಶಯಕ್ಕೆ ಬಂದರೆ, ಪ್ರಾಥಮಿಕ ಹಂತದಿಂದ ಪದವಿ ಹಂತದವರೆಗೆ ನಮ್ಮ ಪಠ್ಯಗಳು ಹೆಚ್ಚಿನ ಮಟ್ಟಿಗೆ ಸಾಹಿತ್ಯ ಪ್ರಧಾನವಾಗಿವೆ. ಕನ್ನಡಂಗಳು ಇರುವಂತೆ ಸಂಸ್ಕೃತಿಗಳು ಇವೆ. ಮಾಸ್ತಿ, ಕಾರಂತ, ಅಡಿಗ, ಪುತಿನ, ಜಿಎಸ್ಎಸ್, ಕಣವಿ, ಶ್ರೀರಂಗ, ಬೇಂದ್ರೆ ಮುಂತಾದವರ ಪಠ್ಯಗಳು ಯಾವ ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ? ಹೀಗಾಗಿ ನಮ್ಮ ಪಠ್ಯಗಳು ಕನ್ನಡದ ಎಲ್ಲಾ ಬೇದಗಳನ್ನು ಮತ್ತು ಸಂಸ್ಕೃತಿಗಳನ್ನು ಪ್ರತಿನಿಧಿಸುತ್ತವೆ ಎಂದು ಹೇಳುವಂತಿಲ್ಲ. ಹೊಸ ಹೊಸ ಜ್ಞಾನಶಿಸ್ತುಗಳನ್ನು ಪರಿಚಯಿಸುವ ಮತ್ತು ಸಂವೇದನಾಶೀಲತೆ, ಕುತೂಹಲಕ್ಕೆ ಅವಕಾಶ ನೀಡುವಂತ ಪಠ್ಯಗಳಿರಬೇಕು. ಬರಡು ಪಠ್ಯಗಳು ಎಲ್ಲವನ್ನು ಹಾಳುಮಾಡುತ್ತವೆ(ಎಂ.ಜಿ. ಚಂದ್ರಶೇಖರಯ್ಯ) ಎಂಬ ಅಭಿಪ್ರಾಯಗಳು ಮುನ್ನೆಲೆ ಪಡೆದುಕೊಂಡಿವೆ.

ಇದರೊಂದಿಗೆ ಕೈಗೆತ್ತಿಕೊಳ್ಳಬೇಕಾದ ಮತ್ತೊಂದು ಪ್ರಶ್ನೆಯೆಂದರೆ, ಭಾಶೆ ಮತ್ತು ಸಾಹಿತ್ಯದ ಅಭ್ಯಾಸದ ಪ್ರತ್ಯೇಕತೆಯನ್ನು ಕುರಿತದ್ದು. ಇಲ್ಲಿ ಅಭ್ಯಾಸದ ಪತ್ರಿಕೆಗಳು ಬೇರೆ ಬೇರೆ ಎನ್ನುವುದರ ಹೊರತಾಗಿ ಪಠ್ಯಗಳ ಪ್ರಮಾಣದಲ್ಲಿ ಮಾತ್ರವೇ ವ್ಯತ್ಯಾಸ ಕಾಣಬಹುದಾಗಿದೆ. 'ಇವ್ರಿಗೆ ನಾಲ್ಕು ಪುಸ್ತಕ ಇದೆ. ಅವ್ರಿಗೆ ಎಂಟು ಪುಸ್ತಕ ಇದೆ ಅಂತ ಅನ್ನೋದೆ ಒಂದು ಮಾನದಂಡ ಆದ್ರೆ, ಸುಮ್ಮನೆ ಇವರಿಗೆ ಪ್ರಮಾಣದಲ್ಲಿ ೧೨ಪದ್ಯ ಇದೆ ಅವರಿಗೆ ೨೪ ಪದ್ಯ ಇದೆ ಅಂತ ಅಂದ್ರೆ, ಅಲ್ಲಿಯೂ ಕೂಡ ನಾವು ತಪ್ಪಿದ್ದೇವೆ(ನರಸಿಂಹ ಮೂರ್ತಿ; ಮಂಗಳೂರು ವಿ.ವಿ ವ್ಯಾಪ್ತಿ) ಎನ್ನುವುದು.

ಪದವಿಯಲ್ಲಿ ಕನ್ನಡ ಕಲಿಕೆಯ ಭಾಶಿಕ ನೆಲೆಗಳನ್ನು ಒಳಗೊಳ್ಳಬೇಕು ಎನ್ನುವಾಗ, ವಿಜ್ಞಾನದ ವಿದ್ಯಾರ್ಥಿಗಳಿಗೆ ಕೊಡುವ ಕನ್ನಡ ಮತ್ತು ವಾಣಿಜ್ಯ ವಿದ್ಯಾರ್ಥಿಗಳಿಗೆ ಕೊಡುವ ಕನ್ನಡ ಅದರ ಒಟ್ಟು ಆಕಾರದಲ್ಲಿ ಭಿನ್ನತೆ ಇರಬೇಕು ಅಂತ(ಮಹಾಲಿಂಗ ಭಟ್) ಯೋಚಿಸುವುದು ಕಾಣುತ್ತದೆ. ಈ ಕಾರಣವಾಗಿ ಆದ ಬದಲಾವಣೆಯೆಂದರೆ, ಕರ್ನಾಟಕ/ಭಾರತಕ್ಕೆ ಸಂಬಂಧಿಸಿದ ಸಾರ್ವಜನಿಕ ಮಾಧ್ಯಮಗಳ ಚಾರಿತ್ರಿಕ ವಿನ್ಯಾಸಗಳನ್ನು ಗ್ರಹಿಸುವ ಮಾಹಿತಿ ಪ್ರಧಾನ ವಿಚಾರಗಳು ಮಾತ್ರ ಕಲಿಕೆಯ ಪಠ್ಯಕ್ರಮಗಳಲ್ಲಿ ಸೇರಿಸಲ್ಪಟ್ಟವು. ಅಶ್ಟಲ್ಲದ ಹೊರತು ಸಮೂಹ ಮಾಧ್ಯಮ ಮತ್ತು ಭಾಶೆಯ ಸಂಬಂಧದ ಸವಾಲುಗಳನ್ನು ಕನ್ನಡ ಕಲಿಕೆ ಮತ್ತು ಬೋಧನೆಯ ವಿದ್ಯಮಾನಗಳು ಒಳಗೆ ಬಿಟ್ಟುಕೊಳ್ಳಲೇ ಇಲ್ಲ.

ಹೀಗಾಗಿ, ಕನ್ನಡ ಭಾಶಾ ತಿಳುವಳಿಕೆಯ ಮೂಲಕ **ವರ್ತಮಾನದ** ಅಪೇಕ್ಶೆಗಳನ್ನು ನಿಭಾಯಿಸಿಕೊಳ್ಳುವ **ಹೊಣೆ** ಪದವಿ ಕನ್ನಡ ಪಠ್ಯಕ್ರಮಗಳಿಂದ ಈಗಲೂ ಹೊರಗಡೆಯೇ ಉಳಿಯುವಂತಾಯಿತು. ಕನ್ನಡ ಮತ್ತಶ್ಟು ಕೀಳರಿಮೆಯ ಕಡೆಗೆ ದಬ್ಬಲ್ಪಟ್ಟಿತು. ಇದರಿಂದಾಗಿ, ಸಂಸ್ಕೃತ ಪರಂಪರೆಯಿಂದ ಬಂದಿರದ ಅಥವಾ ಇಂಗ್ಲಿಶ್ ಶಿಕ್ಶಣವನ್ನು ಪ್ರವೇಶಿಸಲಾಗಿರದ ಬಹುಸಮುದಾಯಗಳು ಸಾಮಾಜಿಕ ಅವಕಾಶದಲ್ಲಿ ಈ ಕೀಳರಿಮೆಯನ್ನೇ ಅನುಭವಿಸುವಂತಾಯಿತು. ಯಾರು ಅಧಿಕಾರ ಸ್ಥಾನದಲ್ಲಿದ್ದಾರೆ, ಬಳಕೆ ಸ್ಥಾನದಲ್ಲಿದ್ದಾರೆ, ಮತ್ತು ಟ್ರಾನ್ಸ್‌ಫರ್ಮ್ ಮಾಡುವ ಸ್ಥಾನದಲ್ಲಿದ್ದಾರೆ, ಇವರು ಯಾರೂ ಭಾಶೆಯ ಬಗ್ಗೆ ಸ್ಪೆಸಿಫಿಕ್ ಆಗಿ ಯೋಚನೆ ಮಾಡುತ್ತಿಲ್ಲ. ಆ ಉದ್ದೇಶವೆ ಮರೆಯಾಗಿರುವುದರಿಂದ ನಾವು ಪರಿಕರವನ್ನೆ ಬೋಧನೆಯ ವಿಶಯ ಅಂತ ಗೊಂದಲ ಮಾಡಿಕೊಂಡಿದ್ದೇವೆ. ಸಿಲೆಬಸ್‌ನೊಳಕ್ಕೂ ಟ್ರಾನ್ಸ್‌ಫರ್ಮ್ ಮಾಡುತ್ತಿದ್ದೇವೆ. ಈ ಗೊಂದಲವನ್ನು ನಾವು ವಿದ್ಯಾರ್ಥಿಗಳಿಗೂ ಟ್ರಾನ್ಸ್‌ಫರ್ಮ್ ಮಾಡುತ್ತಿದ್ದೇವೆ(ಎಚ್.ಎಸ್.ಶ್ರೀಮತಿ) ಎನ್ನುವುದನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ.

ಹಿಂದಿನಿಂದಲೂ ಕನ್ನಡಪರವಾದ ಹೋರಾಟಗಳನ್ನು ಸಂಸ್ಕೃತ ಪರಂಪರೆಯಿಂದ ಬಂದವರೇ ಮುನ್ನಡೆಸಿದ್ದರಿಂದಾಗಿ ಬಹು ಸಮುದಾಯಗಳಿಗೆ ಕನ್ನಡ ಭಾವನಾತ್ಮಕ ನೆಲೆಯಲ್ಲಿ ಮಾತ್ರವೇ ಉಳಿಯಿತು. ಇದರಿಂದ, ಸಂಸ್ಕೃತ ಪರಂಪರೆಯ ಸ್ಥಾಪಿತ ಅಧಿಕಾರ ಮತ್ತಷ್ಟು ಅಧಿಕೃತವಾಗುತ್ತಾ ಹೋಯಿತು. ತಳ ಸಮುದಾಯಗಳಿಂದ ಬಂದವರು ಬದುಕಿನ ಸಾಮಾಜಿಕ ಅವಕಾಶಗಳನ್ನು ದಕ್ಕಿಸಿಕೊಳ್ಳುವ ತಳಮೂಲ ಹೋರಾಟಗಳಲ್ಲಿ ತೊಡಗಿದ್ದರಿಂದಾಗಿ ಭಾಶಿಕ ಹೋರಾಟದಿಂದ ದೂರವೇ ಉಳಿಯುವಂತಾಗಿತ್ತು. ಇದರಿಂದಾಗಿ, ಶಿಕ್ಶಣವನ್ನೇ ಮುಖ್ಯವಾಗಿಸಿಕೊಂಡು ನಡೆದ ಹೋರಾಟಗಳೂ ಸಹ ಸಾಮಾಜಿಕವಾಗಿ ದೊರೆಯಬೇಕಾಗಿದ್ದ ಅವಕಾಶಗಳಿಗೆ ಸೀಮಿತವಾಗಿದ್ದವು. ಶಿಕ್ಶಣರಂಗದ ಖಾಸಗೀಕರಣವು ಈ ಬದಲಾದ ಸಂದರ್ಭದಲ್ಲಿ ಉದ್ಯೋಗದ ಮೀಸಲಾತಿಯ ನಿಯಂತ್ರಣಗಳನ್ನು ನಗಣ್ಯಗೊಳಿಸಿಕೊಳ್ಳಲು ಆರಂಭಿಸಿತ್ತು. ಆದ್ದರಿಂದಾಗಿ ಸಾಮಾಜಿಕವಾದ ಹೋರಾಟಗಳೂ ಸಹ ವೈಚಾರಿಕ ಆಕೃತಿಗಳಲ್ಲಿ ತಳ ಸಮುದಾಯಗಳು ತಮ್ಮನ್ನು ಗುರುತಿಸಿಕೊಳ್ಳಲು ನಡೆಯುತ್ತಿದ್ದವಾದ್ದರಿಂದ ಶಿಕ್ಶಣ, ಪಠ್ಯಕ್ರಮಗಳನ್ನು ಭಾಶಿಕ ನೆಲೆಯಲ್ಲಿ ಕೈಗೆತ್ತಿಕೊಳ್ಳಲಿಲ್ಲ.

ಕಲಿಕಾರ್ಥಿಯನ್ನು ದೂರಕ್ಕೆ ದಬ್ಬಲ್ಪಟ್ಟ ಕಲಿಕೆಯ ಪಠ್ಯಕ್ರಮಗಳಿಂದಾಗಿ ಹೊಸ ತಲೆಮಾರಿನ ಅಧ್ಯಾಪನ ಸಮುದಾಯದ ಮೇಲೆ ಇದರಿಂದ ಮತ್ತೊಂದು ಬಗೆಯ ಪರಿಣಾಮ ಆಯಿತು. ಉನ್ನತ ಶಿಕ್ಶಣದಲ್ಲಿ ಪ್ರವೇಶ ಪಡೆದು ವಿಶ್ವವಿದ್ಯಾಲಯಗಳಿಂದ ಕನ್ನಡ ಎಂಎ ಮುಗಿಸಿ ಬಂದ ಹೊಸ ತಲೆಮಾರಿಗೆ ಬದಲಾಗುತ್ತಿದ್ದ ಹೊಸ ಸಂದರ್ಭಗಳಲ್ಲಿ ಉದ್ಯೋಗವಕಾಶಗಳು ಕನಿಶ್ಟವಾಗಿತ್ತು. ಬದಲಾಗುತ್ತಿದ್ದ ಸಾಮಾಜಿಕ ಸನ್ನಿವೇಶದಲ್ಲಿ ಮೇಲ್‌ಮಧ್ಯಮವರ್ಗ ಮತ್ತೂ ಉನ್ನತವಾದ ತಾಂತ್ರಿಕ ಹಿನ್ನೆಲೆಯ ವೃತ್ತಿಗಳತ್ತ ಮುಖಮಾಡಿದ್ದರಿಂದಾಗಿ ಹೀಗೆ ಕನ್ನಡ ಎಂಎ ಮುಗಿಸಿ ಈ ಪರಿಣಾಮಕ್ಕೆ ಸಿಕ್ಕವರಲ್ಲಿ ತಳಸಮುದಾಯಗಳಿಂದ ಬಂದವರೇ ಹೆಚ್ಚಿದ್ದರು. ಬಹುಮಟ್ಟಿಗೆ ಈ ಕನ್ನಡ ಅಧ್ಯಾಪಕರಿಗೆ ಕೆಲಸವೇ ಇಲ್ಲವಾಯಿತು. ಇದ್ದರೂ, ತಾವು ದುಡಿಯುವ ಸಂಸ್ಥೆಗಳಲ್ಲಿ ದಿನಗೂಲಿ ನೌಕರರಿಗಿಂತಲೂ ಕಡೆಯಾಗಿ ಪರಿಗಣಿತವಾದರು. ವಾರದ ತರಗತಿಯ ಅವಧಿಗಳು ವ್ಯವಸ್ಥೆಯ ಗಮನಕ್ಕೆ ಬರದಂತೆ ಸಂಕುಚಿತಗೊಂಡವು. ಶಿಕ್ಶಣದ ತೀವ್ರವಾದ ಖಾಸಗೀಕರಣವು ಉಸಿರು ಬಿಗಿ ಹಿಡಿಯುವ ವಾತಾವರಣವನ್ನೇ ಸೃಶ್ಟಿಸಿತು.

ಈ ಎಲ್ಲಾ ಒಟ್ಟು ವಿದ್ಯಮಾನಗಳಿಂದಾಗಿ, ಜಾಗತೀಕೃತವಾದ ಇಂದಿನ ಮಾರುಕಟ್ಟೆ ಮತ್ತು ತಂತ್ರಜ್ಞಾನದ ಸಂದರ್ಭಕ್ಕೆ ಬೇಕಾದ ಕನ್ನಡವನ್ನು ಕನ್ನಡ ಭಾಶೆಯ ಬಳಕೆಯ ನೆಲೆಯಿಂದ ರೂಡಿಸಿಕೊಳ್ಳುವ ಹೊಣೆಗಾರಿಕೆಯನ್ನು ಕಲ್ಪಿಸಿಕೊಳ್ಳಲೂ ಸಾಧ್ಯವಾಗದಂತೆ

ಗೊಂದಲಗೊಳಿಸಲಾಗಿದೆ. ಇದರ ಹಿಂದೆ ನಿರ್ದಿಷ್ಟ ಉದ್ದೇಶಗಳು ಇರುವುದು ಸ್ಪಷ್ಟವಾಗಿ ಕಾಣುತ್ತದೆ. ವಸಾಹತು ಯಜಮಾನಿಕೆಯ ಇಂಗ್ಲಿಶನ್ನು ತಳಸಮುದಾಯಗಳು ಈಗ ಬಿಡುಗಡೆಯ ಸಾಧನವಾಗಿ ಕನಸುವಂತೆ ಮಾಡಿರುವುದನ್ನು ಗಮನಿಸದರೆ ಈ ಅನುಮಾನ ಮತ್ತಷ್ಟು ಗಟ್ಟಿಗೊಳ್ಳುತ್ತದೆ. ಈ ಹಿನ್ನೆಲೆಯಲ್ಲಿಯೇ ಸದ್ಯದ ಕನ್ನಡ ಭಾಷಾ ಕಲಿಕೆಯಲ್ಲಿನ ತೊಡಕುಗಳಿಂದ ಬಿಡುಗಡೆಯನ್ನು ಪಡೆಯುವ ನೆಲೆಗಳನ್ನೂ ಗ್ರಹಿಸಬೇಕಾಗುತ್ತದೆ.

> ಮೌಲ್ಯ ಮಾಪನಕ್ಕೆ ಹೋದಾಗ ತಲೆ ಚಚ್ಚಿಕೊಳ್ಳುವ ಹಾಗೆ ಆಗಿಬಿಡುತ್ತೆ. ಇಡೀ ಅಷ್ಟೂ ಬಂಡಲ್‌ಗಳನ್ನು ನೋಡಿದಾಗ ಒಂದೇ ಒಂದು ಪತ್ರಿಕೆನೂ–ಅದ್ಭುತವಾದ ಉತ್ತರಗಳು ಇಲ್ಲದೇ ಇದ್ರೂ ಹೋಗ್ಲಿ– ತಪ್ಪುಗಳಿಲ್ಲದ ಸುಂದರವಾದ ಬರವಣಿಗೆ ಅನ್ನುವಂತ ಪೇಪರ್ಸ್ ಇರೋದಿಲ್ಲ. ಹಾಗಾದ್ರೆ ಏನ್ ಮಾಡುತ್ತಾ ಇದ್ದೀವಿ, ಎಲ್ಲಿಗೆ ಹೋಗ್ತಾ ಇದ್ದೀವಿ ಅಂತ ಗೊತ್ತಾಗುವುದಿಲ್ಲ (ನರಸಿಂಹ ಮೂರ್ತಿ; ಮಂಗಳೂರು ವಿ.ವಿ.ವ್ಯಾಪ್ತಿ).

ಎನ್ನುವ ಗೊಣಗಾಟಗಳನ್ನೂ ಪ್ರಶ್ನೆಯನ್ನಾಗಿ ಮಾಡಿಕೊಂಡು ಇಂಥ ಹತಾಶೆಗಳಿಂದ ಬಿಡಿಸಿಕೊಳ್ಳುವ ದಾರಿಗಳನ್ನು ಕಂಡುಕೊಳ್ಳಬೇಕಾಗುತ್ತದೆ. ಯಾಕೆಂದರೆ, ಇಂದು ಜಾಗತಿಕವಾದ ನವ ವಸಾಹತುಶಾಹಿ ತನ್ನ ಬಾಹುಗಳನ್ನು ವಿಸ್ತರಿಸಿಕೊಳ್ಳುವುದನ್ನು ತಡೆಯಲೂ ಆಗದೆ, ಅದನ್ನು ಅರಗಿಸಿಕೊಳ್ಳಲೂ ಸಾಧ್ಯವಿಲ್ಲದೆ ತಳಸಮುದಾಯಗಳು ಬಡತನ ರೇಖೆಯತ್ತ ಚಲಿಸುತ್ತಿರುವುದನ್ನು ಗಮನಿಸಿದರೆ ಈ ಆತಂಕದ ಅರಿವಾಗುತ್ತದೆ. ಈ ಸಂದರ್ಭದಲ್ಲಿ **ಇಂಗ್ಲಿಶ್** ಭಾಷೆಯು ಹಿಂದೆಂದಿಗಿಂತ ಹೆಚ್ಚಾಗಿ ನವ ವಸಾಹತುಗಳಿಗೆ ಬೇಕಾದ ನೌಕರರನ್ನು ಸೃಷ್ಟಿಸುವ ಕಾರ್ಖಾನೆಯೇ ಆಗುತ್ತಿದೆ. ಈ ಪ್ರಕ್ರಿಯೆಗೆ ಒಳಗಾಗುತ್ತಿರುವ ಕರ್ನಾಟಕದ ಜನಸಮುದಾಯಗಳು ಯಾರು ಮತ್ತು ಆ ಮೂಲಕ ತೆರೆದುಕೊಳ್ಳುತ್ತಿರುವ ಸಾಮಾಜಿಕ ಅವಕಾಶ ಯಾವ ಬಗೆಯದು ಎನ್ನುವ ಪ್ರಶ್ನೆಯು ಇಲ್ಲಿ ಮುಖ್ಯವಾಗುತ್ತದೆ. ಹೀಗಾಗಿ ಇದು, ಹೊಸದಾಗಿ ರೂಪುಗೊಳ್ಳುತ್ತಿರುವ ಮಧ್ಯಮ ಮತ್ತು ಮೇಲ್‌ಮಧ್ಯಮ ವರ್ಗದ ಕುರಿತಾಗಿ ಅಂಚಿಗೆ ಸರಿಸಲ್ಪಟ್ಟ ತಳಸಮುದಾಯಗಳಲ್ಲಿ ಆತಂಕಗಳನ್ನು ಹುಟ್ಟಿಸುವಂತದ್ದೇ ಆಗಿದೆ ಎನಿಸುತ್ತದೆ. ಯಾಕೆಂದರೆ, ಬದುಕುಗಳು ತೀವ್ರವಾದ ಬದಲಾವಣೆಗಳಿಗೆ ಒಳಗಾಗುತ್ತಿರುವ ಈ ಸಂದರ್ಭದಲ್ಲಿ ಹೊಸಬಗೆಯ ಸಾಮಾಜಿಕ ಶ್ರೇಣೀಕರಣವೊಂದು ರೂಪುಗೊಳ್ಳುತ್ತಿರುವುದು ಜಾಗತಿಕ ಬೆಳವಣಿಗೆಗಳಿಂದ ಪ್ರೇರಿತವಾದ ಸ್ಥಳೀಯ ವಿದ್ಯಮಾನಗಳನ್ನು ಸೂಕ್ಷ್ಮವಾಗಿ ಗಮನಿಸಿದಲ್ಲಿ ತಿಳಿಯುತ್ತದೆ.

ಈ ದೃಷ್ಟಿಯಿಂದ ತರಗತಿಗಳಲ್ಲಿ ನೀಡುವ ಸಂವಹನ ಕೌಶಲಗಳು ಅತಿ ಕನಿಷ್ಟ ನೆಲೆಯವು. ಆದ್ದರಿಂದಾಗಿ ಕನ್ನಡವನ್ನು ಸಂದರ್ಭಕ್ಕೆ ತಕ್ಕಂತೆ ಬಳಸಲು ಆಗುತ್ತಿಲ್ಲ. ಬಳಸುತ್ತಿರುವ ಕನ್ನಡ ಸಂದರ್ಭಕ್ಕೆ ಹೊಂದಿಕೆಯಾಗುತ್ತಿಲ್ಲ. ವಿವಿಧ ಸಂದರ್ಭಗಳಿಗೆ ಬೇಕಾದ ವಿವಿಧ ಬಗೆಯ ಕನ್ನಡಗಳ ತಿಳಿವು ಇಲ್ಲ. ಒಂದೇ ಬಗೆಯ ಕನ್ನಡವನ್ನು ಎಲ್ಲಾ ಉದ್ದೇಶಕ್ಕೆ ಬಳಸುವುದು ಇಂದಿನ ಶಿಕ್ಷಿತರ ಕನ್ನಡ ಬಳಕೆಯ ಸಮಸ್ಯೆಗಳಾಗಿವೆ(ಕೆ.ವಿ. ನಾರಾಯಣ ೨೦೦೭) ಎಂಬ ಮಾತುಗಳನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ. ಆದ್ದರಿಂದ ಇದನ್ನು, ನಾಳಿನ ದಿನಗಳಲ್ಲಿ ಕನ್ನಡ ಸಮಾಜ ಭಾಶಿಕವಾಗಿ ನಿರ್ವಹಿಸಿಕೊಳ್ಳಲೇಬೇಕಾದ ಅನಿವಾರ್ಯತೆ ಅತ್ಯಂತ ತೀವ್ರವಾಗುತ್ತದೆ ಎಂದೇ ಗ್ರಹಿಸಬೇಕಾಗುತ್ತದೆ. ಇದು ಸದ್ಯದ ಪರಿಸ್ಥಿತಿಯಲ್ಲಿ ಮತ್ತೊಂದು ಅಧ್ಯಯನದ ವಸ್ತುವೇ ಆಗಬಲ್ಲದು.

ಈ ಹಿನ್ನೆಲೆಯಲ್ಲಿ ಸದ್ಯದ ಪದವಿ ಕನ್ನಡ ಕಲಿಕೆಯಲ್ಲಿನ ಹೊಣೆಗಾರಿಕೆಯ ತೊಡಕುಗಳನ್ನು ಹೀಗೆ ಗುರುತಿಸಿಕೊಳ್ಳಬಹುದಾಗಿದೆ;

**೧. ಉನ್ನತ ಶಿಕ್ಷಣದ ಕುರಿತ, ಅತ್ಯಂತ ಅಗತ್ಯ ಮತ್ತು ಅನಿವಾರ್ಯದ ಸಂಕೀರ್ಣ ಸಾಮಾಜಿಕ ಸಂದರ್ಭಗಳಲ್ಲಿಯೂ ಸಹ ಕನ್ನಡ ಭಾಶೆಯ ಕಲಿಕೆಯನ್ನು ಕುರಿತಾದ ಸ್ಪಶ್ಟ ನಿಲುವುಗಳನ್ನು ವಿವರಿಸಿಕೊಳ್ಳುವ ಬದ್ಧತೆಯನ್ನು ಪ್ರದರ್ಶಿಸಲೇ ಇಲ್ಲ. ಇದಕ್ಕೆ ಸಂಬಂಧಿಸಿದ ನಿರ್ದಿಶ್ಟ ಶಿಕ್ಶಣ ತತ್ವವನ್ನು ರೂಪಿಸಿಕೊಳ್ಳುವ ಒತ್ತಾಯಗಳನ್ನು ನಿರ್ವಹಿಸಿಕೊಳ್ಳಲೇ ಇಲ್ಲ. ಇದರಿಂದಾಗಿ,**

**೨. ವಸಾಹತು ಜ್ಞಾನದಿಂದ ಕಟ್ಟಿಕೊಂಡ ಸಂಸ್ಕೃತ ಪರಂಪರೆಯ ಮೂಲಕವೇ ಗ್ರಹಿಸಲಾದ ಭಾರತೀಯ ಸಂಸ್ಕೃತಿಯ ಚಿಂತನೆಗಳು ಕನ್ನಡವನ್ನು ಸಂಘಟಿಸಿವೆ. ಇಂಥ ಪರಂಪರೆಯ ಪ್ರಜ್ಞೆಯಯನ್ನು ತರಗತಿಗಳಲ್ಲಿಯೂ ಮೂಡಿಸಬೇಕೆಂಬ ಆಶಯ ಇವತ್ತಿಗೂ ಕನ್ನಡ ಕಲಿಕೆಯಲ್ಲಿ ಸ್ಪಶ್ಟವಾಗಿ ಪ್ರವೃತ್ತವಾಗಿದೆ. ಇದರಿಂದಾಗಿ,**

**೩. ವಿದ್ವತ್ತು ಮತ್ತು ಪಾಂಡಿತ್ಯದ ಬಗೆಗಿನ ಹಳ ಹಳಿಕೆಗಳು ಅಧ್ಯಾಪನ ಸಮುದಾಯವನ್ನು ಕನ್ನಡ ಭಾಶೆಯ ಜಾಯಮಾನದಿಂದ ಹೊರಗಡೆಯೇ ಉಳಿಯುವಂತೆ ಮಾಡಿದೆ. ಈ ಕಾರಣದಿಂದಾಗಿ,**

**೪. ಕನ್ನಡ ಭಾಶೆಯ ಕಲಿಕೆಯಲ್ಲಿ ಸಾಹಿತ್ಯವು ಯಶಸ್ಸಿನ ಮಾನದಂಡವೆಂದು ಪರಿಗಣಿತವಾಗಿ ಕನ್ನಡ ಸಾಹಿತ್ಯದ ಬಗ್ಗೆ ಆಸಕ್ತಿ ಮೂಡಿಸುವುದು,**

ಸಾಹಿತ್ಯಾಭಿರುಚಿಯನ್ನು ಬೆಳೆಸುವುದು ಎನ್ನುವುದು ಕನ್ನಡ ಕಲಿಕೆಯನ್ನು ನಿಯಂತ್ರಿಸುವ ಮುಖ್ಯ ಧೋರಣೆಯೇ ಆಗಿ ಪ್ರವೃತ್ತವಾಗಿದೆ. ಇದು,

೫. ಕನ್ನಡಭಾಶಿಕ ಶಿಕ್ಷಣ ಮತ್ತು ಕನ್ನಡಸಾಹಿತ್ಯ ಶಿಕ್ಷಣದ ಸಂಬಂಧ ಮತ್ತು ವ್ಯತ್ಯಾಸಗಳನ್ನು ಸ್ಪಶ್ಟಪಡಿಸಿಕೊಳ್ಳಲಾಗದಂತೆ ಮತ್ತಶ್ಟು ಗೊಂದಲವನ್ನೇ ಹುಟ್ಟು ಹಾಕಿದೆ. ಇದರಿಂದಾಗಿ,

೬. ಕನ್ನಡ ಭಾಶೆಯನ್ನು ಅಭ್ಯಾಸ ಮಾಡುವ ಅವಧಿಯ-ಒಂದು ಅಥವಾ ಎರಡು ವರುಶಕ್ಕೆ ಸೀಮಿತವಾಗಿರುವ ತಾರತಮ್ಯಗಳನ್ನು ಯಾಕೆ, ಹೇಗೆ ಎಂದು ಪ್ರಶ್ನಿಸಿಕೊಳ್ಳಲು ಸಹ ಸಾಧ್ಯವಾಗದಂತೆ ಬಂಧಿಸಿದೆ.

೭. ಕನ್ನಡ ಬೋಧನೆ ಮಾಡುವವರಿಗೆ ಬೇಕಾದ ಪರಿಕರಗಳನ್ನು, ಬೋಧನೆಗೆ ಅರ್ಹತೆಯಾಗಿರುವ ಎಂ.ಎ ತರಗತಿಗಳಲ್ಲಿ ಸೃಶ್ಟಿಸುವ, ಪರಿಚಯಿಸುವ ಯೋಜನೆಗಳು ರೂಪುಗೊಳ್ಳದಂತೆ ತಡೆದಿದೆ. ಇದರಿಂದಾಗಿ,

೮. ಇತರೆ ಪಠ್ಯಪುಸ್ತಕಗಳಿಗಿಂತ ಕನ್ನಡ ಸಾಹಿತ್ಯ ಪಠ್ಯಗಳು, ಕನ್ನಡ ಅಧ್ಯಾಪಕರ ಘನತೆಯ ಪ್ರತಿನಿಧೀಕರಣವಾಗಿ ಕಂಡಿದ್ದು, ಈ ಘನತೆಯನ್ನು ಕಡಿಮೆ ಮಾಡದ, ವಿಮರ್ಶೆಯ ಕ್ಷೇತ್ರದಲ್ಲಿ ಮನ್ನಣೆ ಪಡೆದ ಸಾಹಿತ್ಯದ ಪಠ್ಯಗಳನ್ನು ಮಾತ್ರ ನಿಯಮಿಸಬೇಕು ಎನ್ನುವ ಒತ್ತಾಯಗಳು ಪ್ರೇರಿತವಾಗುವಂತೆ ಮಾಡಿದೆ. ಇದು,

೯. ಸ್ಪರ್ಧೆಯನ್ನು ಸೃಶ್ಟಿಸಿದ್ದು, ಪಠ್ಯಕ್ರಮದ ಭಾಗವಾಗಿ ಲೇಖಕರ ವೈಯುಕ್ತಿಕ ಕೃತಿಗಳು ಪ್ರವೇಶ ಪಡೆಯುವ ವಿದ್ಯಮಾನವು ಒಂದು ದಂದೆಯಾಗಿ ಮಾರ್ಪಟ್ಟಿದೆ. ಹೀಗಾಗಿ,

೧೦. ಪ್ರಕಾಶನದ ಹೆಸರಲ್ಲಿ ಖಾಸಗಿ ಬಂಡವಾಳಗಾರರು ಕಲಿಕೆಯ ಆರ್ಥಿಕ ರಾಜಕಾರಣದೊಳಗೆ ಪ್ರವೇಶ ಪಡೆಯುವುದರಿಂದ ಏರ್ಪಡುವ ಒಪ್ಪಂದಗಳಿಂದಾಗಿ ಕಲಿಕೆಯ ನಿಯಂತ್ರಣವನ್ನು ಇವರ ಕೈಗೆ ಒಪ್ಪಿಸಿಕೊಟ್ಟಂತಾಗಿದೆ. ಇದರಿಂದಾಗಿ,

೧೧. ಕಲಿಕಾರ್ಥಿಗೆ ಬೇಕಾದ ಪಠ್ಯಕ್ರಮ, ಬೋಧನೆ, ಪರೀಕ್ಶೆಗಳನ್ನು ರೂಪಿಸುವ ಹೊಣೆಯು ಕನ್ನಡ ಅಧ್ಯಾಪನ ಸಮುದಾಯದ್ದಾಗಿ, ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಗಳದ್ದಾಗಿ ಮಾತ್ರವೇ ಉಳಿದಿಲ್ಲ. ಇದೂ ಕಾರಣವಾಗಿ,

೧೨. ಒಂದು ಭಾಶೆಯ ಅಸ್ತಿತ್ವ ಮತ್ತು ಬೆಳವಣಿಗೆಗೆ ಬೇಕಾದ ಸಾಮಾಜಿಕ ಪ್ರಯೋಜನಗಳ ಪಠ್ಯಕ್ರಮ ಇಲ್ಲವಾಗಿದೆ.

೧೩. ಬೋಧನೆ, ಕಲಿಕೆ, ತರಗತಿ, ಪ್ರಶ್ನೆ ಪತ್ರಿಕೆ, ಪರೀಕ್ಶೆ ಮತ್ತು ಮೌಲ್ಯಮಾಪನ ಕುರಿತಾದ ಆಪಾದನೆಗಳು ಈ ವಲಯದಲ್ಲಿ ಸಹಜವಾಗಿಯೇ ಹುಟ್ಟಿಕೊಂಡಿವೆ.

೧೪. ಸಂಸ್ಕೃತ ಮತ್ತು ಹಿಂದಿಭಾಶೆಗಳ ಆಯ್ಕೆಗೆ ಇರುವ ಅವಕಾಶವು ಕನ್ನಡ ಭಾಶೆಯನ್ನು ಕಲಿಯುವ ಹೊಣೆಯಿಂದ ಜಾರಿಕೊಳ್ಳುವ ದಾರಿಯನ್ನೂ ಸುಲಭವಾಗಿಸಿದೆ. ಇಲ್ಲಿ ಇಂಗ್ಲಿಶನ್ನು ಪರ್ಯಾಯವಾಗಿಟ್ಟುಕೊಂಡು ಕನ್ನಡವನ್ನು ನೋಡುವ ಕ್ರಮವೊಂದು ಜಾರಿಗೊಂಡಿದೆ. ಇದರಿಂದಾಗಿ,

೧೫. ನಿರ್ದಿಶ್ಟ ವರ್ಗ ಮತ್ತು ಜಾತಿಯ ಹಿತಾಸಕ್ತಿಗಳೇ ಕನ್ನಡ ಕಲಿಕೆಯನ್ನು ನಿರ್ಧರಿಸುತ್ತಿವೆಯಾದ್ದರಿಂದ, ಕಲಿಕಾರ್ಥಿಯು ಸ್ವತಂತ್ರವಾಗಿ ತನ್ನನ್ನು ಅಭಿವ್ಯಕ್ತಿಸಿಕೊಳ್ಳುವ ಅವಕಾಶವನ್ನು ಕಲಿಕೆಯು ಒದಗಿಸಿಕೊಡುವುದಿಲ್ಲ.

ಪಠ್ಯಗಳನ್ನು ಸವಿಸ್ತರ-ಅವಿಸ್ತರ ಎಂದು ನಿರ್ಧರಿಸುವುದು, ಪಠ್ಯ ಕೃತಿಗಳನ್ನು ವಕಾಲತ್ತು ವಹಿಸಿ ನಿರ್ಧರಿಸುವುದು, ಕಾಗುಣಿತದ ತಪ್ಪುಗಳಿಗೆ ವ್ಯಾಕರಣ ಕಲಿಕೆಯನ್ನು ಮುನ್ನೆಲೆಗೆ ತಂದು ಚರ್ಚಿಸುವುದು, ಪಠ್ಯಗಳ ಬೋಧನೆ ಮತ್ತು ಮೌಲ್ಯಮಾಪನದ ನೈತಿಕತೆಯನ್ನು ಕುರಿತು ಮಾತನಾಡುವುದು, ಇದಕ್ಕಾಗಿ ಶಿಬಿರಗಳನ್ನೇರ್ಪಡಿಸಿ ತರಬೇತು ಕೊಡಬೇಕೆನ್ನುವುದು ಮೊದಲಾದ ವಿದ್ಯಮಾನಗಳು ಕಲಿಕೆಯಲ್ಲಿನ ಈ ಗೊಂದಲವನ್ನು ಹಾಗೆಯೇ ಉಳಿಸಿಕೊಂಡು ಸಾಮಾಜಿಕ ಅಧಿಕಾರ ಸಂಬಂಧಗಳನ್ನು ಇನ್ನಶ್ಟು ಸ್ಥಿರವಾಗಿಸಿಕೊಳ್ಳುವ ಉಪಾಯಗಳಾಗಿಯೇ ಬಳಕೆಯಾಗುತ್ತವೆ. ಕನ್ನಡ ಭಾಶೆಯ ಕಲಿಕೆಯ ನೆಲೆಯನ್ನು ಅಸ್ಪಶ್ಟವಾಗಿಯೇ ಉಳಿಯುವಂತೆ ಮಾಡಿ ಸೃಶ್ಟಿಯಾಗಿರುವ ಈ ಗೊಂದಲವು ಸಾಂಸ್ಕೃತಿಕ ಯಜಮಾನಿಕೆಯನ್ನು ಉಳಿಸಿಕೊಳ್ಳುವ ಉಪಾಯದ ಕಡೆಗೆ, ಆ ಮೂಲಕ ಸಾಮಾಜಿಕ ಅಧಿಕಾರ ವ್ಯವಸ್ಥೆಯನ್ನು ಸ್ಥಿರಗೊಳಿಸುವ ಕಡೆಗೆ ಮುಖಮಾಡುತ್ತದೆ ಎಂಬುದನ್ನು ಸ್ಪಶ್ಟವಾಗಿ ಗ್ರಹಿಸಬೇಕಾಗುತ್ತದೆ. ಆದ್ದರಿಂದಾಗಿ, ಕಲಿಕಾರ್ಥಿಯು ಪಡೆಯಬೇಕಾದ ಕನ್ನಡಭಾಶಿಕ ಜ್ಞಾನಕ್ಕೂ, ಸಾಹಿತ್ಯಕ್ಕೂ ನಂಟು ಬೆಳೆಸಿ ಕನ್ನಡ ಕಲಿಕೆಯ ವಲಯವನ್ನೆ ಅನುಕೂಲಸಿಂಧು ವಾತಾವರಣವನ್ನಾಗಿ ಮಾಡಿಕೊಂಡಿರುವುದು ಸ್ಪಶ್ಟವಾಗಿ ಕಾಣುತ್ತದೆ. ಈ ಹಿನ್ನೆಲೆಯಲ್ಲಿ, ಪ್ರಯೋಜನಗಳ ದೃಶ್ಟಿಯಿಂದ ಆಲೋಚಿಸುವಾಗ ಕಲಿಕಾರ್ಥಿಯನ್ನು, ಬೇಕಾದ ಭಾಶಿಕ ತಿಳುವಳಿಕೆಯಿಂದ ದೂರವಿರಿಸಿ ನಿಜವಾದ ಅರ್ಥದಲ್ಲಿ

ಹೊರದಬ್ಬಿ ನೋಡಲಾಗುತ್ತಿದೆ. ಇದರಿಂದಾಗಿ ಉನ್ನತ ಶಿಕ್ಷಣದ ಪದವಿ ಹಂತದಲ್ಲಿನ ಕನ್ನಡಭಾಷಿಕ ಕಲಿಕೆಯ ಕುರಿತಾಗಿ ಸ್ಪಷ್ಟವಾದ ನಿಯಮಗಳನ್ನು ರೂಪಿಸಿಕೊಳ್ಳುವುದು ಅತ್ಯಂತ ಅನಿವಾರ್ಯವಾಗಿದೆ.

**ಅಡಿ ಟಿಪ್ಪಣಿಗಳು**

---

೧. ೧೯೫೬ರ ನವಂಬರ್ ೧ರಂದು ಕರ್ನಾಟಕ ಒಂದು ರಾಜ್ಯವಾಗಿ ರೂಪುಗೊಂಡ ೭ ವರುಶಗಳ ನಂತರ ಕನ್ನಡ ಅಧಿಕೃತ ಭಾಶೆಯಾಗಿ ಸ್ಥಾನ ಪಡೆಯಿತು. ಶಿಕ್ಷಣ ಸರ್ಕಾರದ ಒಂದು ಕಾರ್ಯಕ್ರಮವಾಗಿ ರೂಪುಗೊಂಡಿತ್ತಾದ್ದರಿಂದ ಪಠ್ಯಗಳಲ್ಲಿ ಬಳಕೆಯಾಗುವ ಕನ್ನಡದಲ್ಲಿ ಒಂದು ಸಾಮಾನ್ಯ ರೂಪವನ್ನು ತರುವುದು ಸರಕಾರದ ನೀತಿಯಾಯಿತು. ಈ ನಿರ್ಣಯ ದೂರಗಾಮಿಯಾದ ಪರಿಣಾಮಗಳಿಗೆ ದಾರಿಯಾಯಿತು. ಕರ್ನಾಟಕದ ಸಂದರ್ಭದಲ್ಲಿ ನಿರ್ದಿಷ್ಟ ಭಾಶಾ ನೀತಿಯೊಂದು ಎಲ್ಲೂ ದಾಖಲಾಗಿಲ್ಲ. (ಕೆ.ವಿ.ಎನ್.೨೦೦೭)

೨. ಕೆ.ವಿ.ನಾರಾಯಣ ೨೦೦೭

೩. ಸಿ.ಗೋವಿಂದರಾಜು ಅವರ ಕರ್ನಾಟಕ ಏಕೀಕರಣ ಮತ್ತು ಕನ್ನಡ ಸಾಹಿತ್ಯ, ಸೂರ್ಯನಾಥ ಕಾಮತರ ಕರ್ನಾಟಕ ಏಕೀಕರಣ ಇತಿಹಾಸ ಕೃತಿಗಳನ್ನು ಗಮನಿಸಬಹುದಾಗಿದೆ.

೪. ಮತ-ಧರ್ಮದ ಕಾರಣವಾಗಿ ನಡೆಯುತ್ತಿದ್ದ ಸಾಹಿತ್ಯದ ಓದು ೧೯ನೆ ಶತಮಾನದ ನಡುಭಾಗದ ಹೊತ್ತಿಗೆ ಸಾಹಿತ್ಯಾಧ್ಯಯನದ ಆಧುನಿಕ ಅರ್ಥ ಪಡೆದುಕೊಂಡದ್ದು ಶಿಕ್ಷಣಪದ್ಧತಿಯ ಆಧುನೀಕರಣದ ಭಾಗವಾಗಿ(ಎಚ್.ಎಸ್.ಶ್ರೀಮತಿ ೧೯೯೩; ಪುಟ ೧೬).

೫. ಶ್ರೀನಿವಾಸ ಹಾವನೂರರ ಹೊಸಗನ್ನಡ ಅರುಣೋದಯ ಕೃತಿಯ ಪೂರ್ವಾರ್ಧ ಭಾಗದ 'ಶಿಕ್ಷಣರಂಗ ಮತ್ತು ಸಾಹಿತ್ಯ ವಿಕಾಸ' ಮತ್ತು ಉತ್ತರಾರ್ಧ ಭಾಗದ 'ಭಾಶಾಭ್ಯಾಸ' ಅಧ್ಯಾಯಗಳನ್ನು ಗಮನಿಸಬಹುದಾಗಿದೆ.

೬. ಮೆಖಾಲೆಯ ಮಕ್ಕಳು-ಡಿ.ಆರ್. ನಾಗರಾಜ್: ೨೦೦೨, ಸಂಸ್ಕೃತಿ ಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

೭. ಸಂಸ್ಕೃತ, ಕನ್ನಡಗಳಲ್ಲಿಯ ಅನೇಕ ಪ್ರಾಚೀನ ಕೃತಿಗಳನ್ನು ಟೀಕೆ, ಟಿಪ್ಪಣಿ, ಗದ್ಯಾನುವಾದಗಳೊಡನೆ ಸಂಪಾದಿಸಿ ಮುದ್ರಿಸಲಾಯಿತು. ಸ್ವಧರ್ಮಾಭಿಮಾನ, ಪಠ್ಯಪುಸ್ತಕಗಳ ಬೇಡಿಕೆ ಮತ್ತು ಪರಂಪರಾನುಗತವಾಗಿ ತಾವು ಕಂಡ ವಿದ್ಯೆಯನ್ನು ಜನತೆಗೆ ತಿಳಿಸಿಕೊಡಬೇಕೆನ್ನುವ ಅಪೇಕ್ಷೆ- ಇವು ಇಂಥ ಕೃತಿಗಳ ಪ್ರಕಟಣೆಗೆ ಪ್ರೇರಣೆಯಿತ್ತವು(ಶ್ರೀನಿವಾಸ ಹಾವನೂರು: ಪುಟ೩೩೩)
ಕೆ.ವಿ.ನಾರಾಯಣ ೨೦೦೪: ಪುಟ೧೪೩)

೯. ಮಂಗಳೂರು ವಿಶ್ವವಿದ್ಯಾಲಯ ಶುರುವಾಗಿದ್ದು ೧೯೮೨ ರಲ್ಲಿ. ಒಟ್ಟು ೨೭ ವರುಶ ಆಯ್ತು. ಈ ೨೭ ವರುಶಗಳಲ್ಲಿ, ಕಳೆದ ಆರು ವರುಶಗಳಿಂದ ನಾವು ಪಠ್ಯಗಳನ್ನ ಮಾಡ್ತಾ ಇದೇವೆ. ಸುಮಾರು ೨೨ ವರುಶ ನಮ್ಮದೇ ಟೆಕ್ಸ್ಟ್ ಗಳು ಇರಲಿಲ್ಲ. ನಾವು ಆಗ ಹೆಚ್ಚಾಗಿ ಮೈಸೂರು ಅಥವಾ ಬೆಂಗಳೂರು ಯೂನಿವರ್ಸಿಟಿಯ ಟೆಕ್ಸ್ಟ್ ಗಳನ್ನ ಹೆಚ್ಚಾಗಿ ಬಳಸ್ತಾ ಇದ್ವಿ. ಮೈಸೂರು ಯೂನಿವರ್ಸಿಟಿಯ ಸಂಬಂಧ ಹಾಗೇ ಕಂಟಿನ್ಯೂ ಆಯ್ತು. ಆಮೇಲೆ ಸ್ಥಳೀಯ ಪಠ್ಯಗಳನ್ನ- ಕಾದಂಬರಿ ಸಣ್ಣಕತೆ ನಾಟಕಕ್ಕೆ ಸಂಬಂಧಪಟ್ಟ ಹಾಗೆ ನಿಗದಿ ಮಾಡುವಾಗ.. ವಿಮರ್ಶೆಯ ದಾರಿ ಮೊದಲಾದ ಗದ್ಯಕ್ಕೆ ಸಂಬಂಧಪಟ್ಟ ಹಾಗೆ ಬೆಂಗಳೂರು ಯೂನಿವರ್ಸಿಟಿಯ ಪಠ್ಯಗಳನ್ನ ಇಡುವ ಪದ್ದತಿ ಇತ್ತು.(ಸತ್ಯನಾರಾಯಣ ಮಲ್ಲಿಪಟ್ನ- ಮಂಗಳೂರು ವಿ.ವಿ.ವ್ಯಾಪ್ತಿ)

೧೦. ಭಾಶೆ ಕಲಿಕೆಯನ್ನು ಯಾಕೆ ಎರಡೇ ವರುಶಕ್ಕೆ ನಿಲ್ಲಿಸಬೇಕು, ಮೂರನೇ ವರುಶಕ್ಕೆ ಯಾಕಿರಬಾರದು ಅನ್ನುವುದು ನನ್ನ ಪ್ರಶ್ನೆ. ಅದನ್ನು ಕೂಡ ಸ್ವಲ್ಪ ಗಂಭೀರವಾಗಿ ಯೋಚನೆ ಮಾಡಬೇಕು. ಇದರ ನಂತರದ ಡೆವಲಪ್‌ಮೆಂಟ್ ಏನಾಯ್ತು ಅಂದ್ರೆ ಇದ್ದಕಿದ್ದ ಹಾಗೆ ಈ ಬಿಬಿಎಂ, ಬಿಸಿಎ, ಇಂತಹ ಕೋರ್ಸುಗಳು

ಆರಂಭವಾದಾಗ ಒಂದೇ ವರುಶಕ್ಕೆ ಮಿತಿಗೊಳಿಸಿಬಿಟ್ರು. ಬಿಸಿಎ, ಬಿಬಿಎಮ್‌ನವರಿಗೆ ಮಾತ್ರ ಭಾಶೆ ಬೇಕಾಗಿಲ್ಲ, ಬಿಎ ಓದುವವರಿಗೆ ಮಾತ್ರ ಬೇಕು ಅಂದ್ರೆ ಹೇಗೆ ಅದು. ನಮ್ಮಲ್ಲಿ ಈಗಲೂ, ಮುಖ್ಯವಾಗಿ ಕಾಮರ್ಸ್ ಅಧ್ಯಾಪಕರು ತುಂಬಾ ಲಾಭಿ ಮಾಡುವವರು ಇದ್ದಾರೆ. ಬಿಬಿಎಮ್‌ನಲ್ಲೂ ಕನ್ನಡ ಕಿತ್ತಾಕಿರುವವರು ಅವರೇನೆ. ಅದರ ಬದಲು ವಾಣಿಜ್ಯಕ್ಕೆ ಸಂಬಂಧಪಟ್ಟಂತಹ ಇನ್ನೊಂದು ಸೇರಿಸಿದರೆ ಅವರಿಗೆ ಲಾಭವಾಗುತ್ತೆ. ಆದ್ದರಿಂದಾಗಿ ಇದು ವೇಸ್ಟ್ ಆಫ್ ಟೈಮ್ ಅಂತ ಹೇಳೋದು. ಆದ್ರಿಂದ ಇದನ್ನು ಎರಡು ವರುಶದಿಂದ ಒಂದು ವರುಶಕ್ಕೆ ಕಡಿಮೆ ಮಾಡುವುದು, ನಾಲ್ಕು ಗಂಟೆ ಇದ್ದದ್ದನ್ನು ಮೂರು ಗಂಟೆ ಮಾಡಿದ್ದಾರೆ. ಈಗ ಅದನ್ನು ತೆಗೀಬೇಕು ಅಂತ ಪ್ರಯತ್ನ ಮಾಡ್ತಿದ್ದಾರೆ. ಅದನ್ನು ಒಪ್ಪಿಕಕೊಳ್ಳುವಂತದ್ದು ಅಲ್ಲ. ಜಗಳ ಮಾಡುವಂತಹ ವಿಶಯ ಅಲ್ಲ. ಅದು ಟೋಟಲ್ಲಾಗಿ ಬದುಕಿನ ಬಗ್ಗೆ ಆಸಕ್ತಿ ಕೆರಳಿಸುವಂತಹ, ಆಮೇಲೆ ಭಾಶೆ ಎನ್ನುವಂತದ್ದು ಸುಮ್ಮನೆ ಟೈಮ್ ಪಾಸ್ ಅಂತ ತಿಳಿದುಕೊಂಡ್ರೆ ಕಶ್ಟ. ಭಾಶಾ ಕಲಿಕೆ ಅಂದ್ರೆ ನಮಗೆ ಒಂದು ಸ್ಪಶ್ಟ ಕಲ್ಪನೆ ಇರಬೇಕಲ್ಲ. ಪದವೀಧರ ಅಂತ ನಿರ್ಧರಿಸಬೇಕಾದರೆ ಭಾಶಾ ಕಲಿಕೆ ಕುರಿತ ನಿರ್ಧಾರವೂ ಇರಬೇಕು. ಬಿಎ ಬಿಕಾಂ ಬಿಎಸ್‌ಸಿ ಎಲ್ಲವು ಏಕರೂಪವಾಗಿ ಯಾಕೆ ಇರಬಾರದು. ದುರಂತ ಅಂದ್ರೆ ಮರು ಹಂತದಲ್ಲಿ ಆ ಒಂದೊಂದು ವರುಶದಲ್ಲಿಯೂ ಕೂಡ ಅನಿಮಿಯತವಾಗಿ ನಾಲ್ಕು ಗಂಟೆಗಳ ಕಾಲ ಇದ್ದ ಪಾಠ ಮೂರು ಗಂಟೆಯಾಯಿತು. ಇನ್ನೂ ಒಂದು ಕೆಟ್ಟ ಬೆಳವಣಿಗೆ ಏನಾಯ್ತು ಅಂದ್ರೆ ಈ ಸ್ವಾಯತ್ತ ಕಾಲೇಜುಗಳು ಅಂತ ಸ್ಥಾಪನೆಯಾದವು. ನೋಡಿ, ಇಂತಹ ಫೈನಾನ್ಷಿಯಲಿ ಸೌಂಡಾಗಿರುವಂತಹ ರೆಪ್ಯೂಟೆಡ್ ಸಂಸ್ಥೆಗಳು, ಅವರದೇ ಕಾಲಿನಲ್ಲಿ ನಿಲ್ಲಬಲ್ಲಂತಹ ಆದರ್‍ಶಗಳನ್ನ ಅನುಶ್ಟಾನಕ್ಕೆ ತರುವಂತಹ ಶಕ್ತಿಯಿರುವ ಇಂತಹ ಸಂಸ್ಥೆಗಳು ಸ್ವಾಯತ್ತವನ್ನು ಗಳಿಸಿಕೊಂಡ ಮೇಲೆ ಭಾಶಾ ಕಲಿಕೆಗೆ ಸಂಬಂಧಪಟ್ಟಂತೆ ದೊಡ್ಡ ಗದಾ ಪ್ರಹಾರವನ್ನು ಮಾಡ್ತಿದ್ದಾರೆ ಅವರು(ನರಸಿಂಹ ಮೂರ್ತಿ; ಮಂಗಳೂರು ವಿ.ವಿ.ವ್ಯಾಪ್ತಿ).

ಅಧ್ಯಾಯ–೮

## ತೊಡಕುಗಳನ್ನು ಬಿಡಿಸಿಕೊಳ್ಳುವ ಬಗೆ: ಕೊನೆಯ ಮಾತೇನಲ್ಲ

ಪದವಿ ಹಂತದಲ್ಲಿ ಕನ್ನಡಭಾಷೆ ಕಲಿಕೆಯ ಪಠ್ಯಗಳು ಬದಲಾಗಬೇಕೆಂಬ ಒತ್ತಾಯ ತೀವ್ರವಾಗಿಯೆ ಕಾಣಿಸಿಕೊಳ್ಳುತ್ತಿದೆ. ಪಾರಂಪರಿಕ ಪಠ್ಯಕ್ರಮವು ಕಲಿಕಾರ್ಥಿಯನ್ನು ಕನ್ನಡ ಕಲಿಕೆಯಿಂದ ದೂರವಿಡುತ್ತಿದೆ, ಆ ಮೂಲಕ ಕನ್ನಡ ಸಮಾಜದಿಂದ ದೂರವಿಡುತ್ತಿದೆ ಎಂಬ ಅರಿವು ತಡವಾಗಿಯಾದರೂ ತೀವ್ರವಾಗಿ ರೂಪುಗೊಳ್ಳುತ್ತಿದೆ. ಮುಂದುವರಿದ ಈ ವಿದ್ಯಮಾನವು ಕನ್ನಡ ಅಧ್ಯಾಪನ ಸಮುದಾಯವನ್ನೂ ವಂಚಿಸುವಂತಾಗಿದೆ ಎಂಬ ತಿಳುವಳಿಕೆ ಇದರ ಜೊತೆಯಲ್ಲೇ ಗಮನಕ್ಕೆ ಬರುತ್ತಿದೆ. ಶಿಕ್ಷಣದ ಮುಖ್ಯವಾಹಿನಿಯಿಂದ ಕನ್ನಡವನ್ನು ಸಾಧ್ಯವಾದಷ್ಟೂ ಹೊರಗಿಡುವುದರ ಮೂಲಕ ಕನ್ನಡ ಬೋಧಕರನ್ನು ಕನಿಷ್ಟವಾಗಿ ಕಾಣಲಾಗುತ್ತಿರುವುದು ಸ್ಪಷ್ಟವಾಗಿಯೆ ಗೋಚರಿಸುತ್ತಿದೆ. ಹೀಗಾಗಿ, ಕನ್ನಡ ಪಠ್ಯಕ್ರಮವನ್ನು ಬದಲಾಗುತ್ತಿರುವ ಸಾಮಾಜಿಕ ಸಂದರ್ಭಗಳಲ್ಲಿ ಹೊಸದಾಗಿ ರೂಪಿಸಿಕೊಳ್ಳಬೇಕೆಂಬ ಆಶಯವುಳ್ಳವರಿಗೆ ಕನ್ನಡ ಪಠ್ಯಕ್ರಮವನ್ನು ಸ್ಥಾಪಿತ ಪರಂಪರೆಯಿಂದ ಹೇಗೆ ಬಿಡಿಸಬೇಕು ಮತ್ತು ಹೊಸ ಪಠ್ಯಗಳ ಸ್ವರೂಪವು ಯಾವುದಾಗಿರಬೇಕು ಮತ್ತು ಹೇಗಿರಬೇಕು ಎಂಬ ಕುರಿತಾಗಿ ಸವಾಲುಗಳು ಮುಖ್ಯವಾಗುತ್ತವೆ. ಪಾರಂಪರಿಕವಾದ ಬೋಧನೆ ಮತ್ತು ಕಲಿಕೆಯ ಕ್ರಮಗಳಿಂದಾಗಿ ಮತ್ತಷ್ಟು ಸ್ಥಿರಗೊಂಡಿರುವ ಸಾಮಾಜಿಕವಾದ ಅಸಮಾನ ಸಂಬಂಧಗಳ ನಡುವೆ ಸಂವಾದದ ಸಾಧ್ಯತೆಯನ್ನು ಏರ್ಪಡಿಸುವ ಪಠ್ಯಗಳು ಇರಬೇಕೆಂಬ ಒತ್ತಾಯಗಳು ಇದರ ಹಿಂದೆ ಸಹಜವಾಗಿಯೇ ಇರುತ್ತದೆ. ಕರ್ನಾಟಕದ ಬಹುಮಟ್ಟಿನ ವಿಶ್ವವಿದ್ಯಾಲಯಗಳು ಇಂಥ ಸಂಘರ್ಷವೊಂದಕ್ಕೆ ಸದ್ಯದ ಈ ಕಾಲಘಟ್ಟದಲ್ಲಿ ಎದುರಾಗುತ್ತಿವೆ.

**ಪಠ್ಯಕ್ರಮ ಮತ್ತು ಸಾಮಾಜಿಕ ನ್ಯಾಯ,**

ಸಮಾನತೆ ಮತ್ತು ಸಾಮಾಜಿಕ ನ್ಯಾಯದ ಬಗೆಗಿನ ಅರಿವಿನ ಕಡೆಗೆ ಹಿಂದೆಂದಿಗಿಂತ ಇವತ್ತಿನ ದಿನಗಳಲ್ಲಿ ಹೆಚ್ಚಿನ ಹರಿವು ಕಾಣುತ್ತದೆ. ಹಾಗಾಗಿ, ಕನ್ನಡಭಾಷೆ ಮತ್ತು ಸಾಹಿತ್ಯದ

ಕಲಿಕೆಯ ಕುರಿತಾಗಿ ಅತ್ಯಂತ ಸೂಕ್ಷ್ಮ ನೆಲೆಯ ವಾಗ್ವಾದಗಳೂ ಸಾಧ್ಯವಾಗುತ್ತಿವೆ. ಭಾಶೆಯ ಕಲಿಕೆಯಲ್ಲಿ ಈಗಿನ ಪಠ್ಯಕ್ರಮಗಳು ಸಾಹಿತ್ಯವನ್ನೇ ಬೋಧಿಸುವಂತೆ ಮಾಡುತ್ತಿವೆಯಾದ್ದರಿಂದಾಗಿ ಸಾರಾಂಶೀಕರಣ, ಆ ಮೂಲಕ ಆ ಪಠ್ಯಗಳು ಕಟ್ಟಿಕೊಡುವ ವೈಚಾರಿಕತೆಯೇ ಸತ್ಯ ಎನ್ನುವ ತಿಳುವಳಿಕೆಯ ಬಗ್ಗೆ ಅನುಮಾನಗಳು ತೀವ್ರವಾಗುತ್ತಿವೆ. ಈ ಹಿನ್ನೆಲೆಯಲ್ಲಿ, ಪ್ರಾದೇಶಿಕ ಸಮಾಜದ ಸಂಕೀರ್ಣತೆ ಮತ್ತು ಬಹುಮುಖತೆಯನ್ನು ಅರಿಯುವ, ಕನ್ನಡ ಸಮಾಜದ ಹಲವುತನಗಳನ್ನು ಪರಿಚಯಿಸುವ ಪಠ್ಯಗಳಿರಬೇಕು(ಸತ್ಯನಾರಾಯಣ ಮಲ್ಲಿಪಟ್ಣ). ಸ್ಥಳೀಯ ಪರಂಪರೆಗಳು ಪೋಶಿಸಿಕೊಂಡು ಬಂದಿರುವ ಮೌಲ್ಯಗಳ ಮೂಲಕ ವಿಶ್ವವ್ಯಾಪಕತೆಯನ್ನು ಅರಿಯುವಂತಾಗಬೇಕು. ಸಮಾಜೋ–ಸಾಂಸ್ಕೃತಿಕ ಪ್ರತ್ಯೇಕತೆಯನ್ನು ಅನುಭವಿಸಿದ ಸಂಕಥನಗಳು ಸಿಲೆಬಸ್‌ನಲ್ಲಿ ಸೇರ್ಪಡೆಯಾಗಬೇಕು ಎಂಬ ಅಭಿಪ್ರಾಯಗಳೊಂದಿಗೆ, ಈ ಹೊತ್ತಿನ ಬದುಕಿನ ಸ್ವಾಸ್ಥ್ಯಕ್ಕೆ ಸವಾಲಾಗಿರುವ ಕೋಮುವಾದಿ ರಾಜಕಾರಣವನ್ನು ವಿಶ್ಲೇಶಿಸಲು ಅಗತ್ಯವಾದ ಉಪಕರಣಗಳನ್ನು ಕಲಿಕಾರ್ಥಿಗಳಿಗೆ ನೀಡಬೇಕು. ಇದರಿಂದ ಒಟ್ಟು ಸಮಾಜದ ಸ್ವರೂಪವನ್ನು ಗ್ರಹಿಸುವ ಸಾಮರ್ಥ್ಯವನ್ನು ಗಮನದಲ್ಲಿಟ್ಟುಕೊಂಡು ಪಠ್ಯಕ್ರಮಗಳನ್ನು ರೂಪಿಸಬೇಕು(ಬಿ.ಯು.ಸುಮ) ಎನ್ನುವ ಚಿಂತನೆ ಆರಂಭವಾಗಿದೆ. ಅಲ್ಲದೆ, ಇಂದಿನ ಜಗತ್ತಿನಲ್ಲಿ ಹಲವು ಜ್ಞಾನಶಿಸ್ತುಗಳು, ಅವುಗಳಲ್ಲಿ ಸ್ಪೆಶಲೈಸೇಶನ್ ಗಳು ಸೃಷ್ಟಿಯಾಗುತ್ತಿವೆಯಾದ್ದರಿಂದ, ವಿದ್ಯಾರ್ಥಿ ಆರಿಸಿಕೊಳ್ಳುವ ವಿಶಯಗಳನ್ನು **ತನ್ನ ಭಾಶೆ**ಯಲ್ಲಿ ಗ್ರಹಿಸಲು, ಆಲೋಚಿಸಲು, ಬರೆಯಲು ಅಗತ್ಯವಾದ ಭಾಶೆಯನ್ನು ಕಲಿಸುವ ಪಠ್ಯಗಳು ಇರಬೇಕು(ಎಂ.ಜಿ.ಚಂದ್ರಶೇಖರಯ್ಯ) ಎಂಬ ಅಭಿಪ್ರಾಯಗಳು ತೀವ್ರವಾಗಿದ್ದು, ಪಾರಂಪರಿಕ ಪಠ್ಯಗಳ ಎದುರಲ್ಲಿ ಇದನ್ನು ನೀಗಿಸಿಕೊಳ್ಳುವ ಕಾರಣವಾಗಿ ಕನ್ನಡ ಸಮಾಜದ ಭಿನ್ನ ಸಮುದಾಯಗಳ ಸಾಹಿತ್ಯಾಭಿವ್ಯಕ್ತಿಗಳನ್ನು ಪಠ್ಯಕ್ರಮಗಳ ಭಾಗವಾಗಿಸುವ ಪ್ರಯತ್ನಗಳು ಚಾಲನೆಗೊಳ್ಳುತ್ತಿರುವುದು ಕಾಣುತ್ತದೆ.

ಇಂಥ ಚರ್ಚೆಯು, ಈಗಾಗಲೆ ಕಲಿಕೆಯಲ್ಲಿ ಪ್ರವೃತ್ತವಾಗಿರುವ ಏಕೀಕೃತಗೊಂಡ ಪಠ್ಯಕ್ರಮಕ್ಕೆ ಪರ್ಯಾಯವಾಗಿ ಏನೇನು ಇರಬೇಕಾಗಿತ್ತು, ಅದು ಇಲ್ಲ ಎನ್ನುವ ತಿಳುವಳಿಕೆಯಿಂದ ಬಂದುದಾಗಿದೆ. ಇದರಿಂದ, ಕನ್ನಡ ಕಲಿಕೆಯ ಪಠ್ಯಕ್ರಮದ ಮೂಲಕ ಹಲವು ಕನ್ನಡಗಳನ್ನು ಪರಿಚಯಿಸಬಹುದಾಗುತ್ತದೆ. ಕನ್ನಡ ಸಮಾಜದ ಜಾತಿ, ಲಿಂಗ, ಪ್ರದೇಶ ಸಂಬಂಧಿಯಾದ ಕನ್ನಡಗಳು ಭಿನ್ನವಾಗಿವೆ ಎಂಬ ಅರಿವನ್ನು ಇದರಿಂದ ಕಲಿಕಾರ್ಥಿಗೆ ತಂದುಕೊಡಲು ಸಾಧ್ಯವಾಗುತ್ತದೆ ಎಂಬ ಗ್ರಹಿಕೆಯೂ ಇದರ ಹಿಂದೆ ಇದೆ.

ಈ ವಿದ್ಯಮಾನವು ಕನ್ನಡ ಕಲಿಕೆಯ ಸಂದರ್ಭದಲ್ಲಿ ಮುಖ್ಯವಾದುದು ಹೌದು. ಯಾಕೆಂದರೆ ಕಲಿಕೆಯಲ್ಲಿ ವೈವಿಧ್ಯಮಯವಾದ ಜೀವನ ವಿಧಾನಗಳು, ಮೌಲ್ಯಗಳು, ಸಾಂಸ್ಕೃತಿಕ ಆಚರಣೆಗಳು ಕಲಿಕಾರ್ಥಿಯ ಜ್ಞಾನದ ಭಾಗವಾಗುವುದರ ಮೂಲಕ ಕನ್ನಡ ಎನ್ನುವುದು ಒಂದಲ್ಲ, ಒಂದು ಜಾತಿಯದಲ್ಲ, ಒಂದು ಪ್ರದೇಶದ್ದಲ್ಲ, ಒಂದು ಜೀವನಕ್ರಮದ ನಿರೂಪಣೆಯದ್ದಲ್ಲ ಎಂಬ ಗ್ರಹಿಕೆಯನ್ನು ಇದು ಸಾಧ್ಯವಾಗಿಸುತ್ತದೆ. ಇದನ್ನು ಕಲಿಕಾರ್ಥಿಯ ಬದುಕಿನ ಸಂದರ್ಭದೊಂದಿಗಿಟ್ಟು ಪರಿಶೀಲಿಸಿಕೊಳ್ಳಲು ಅವಕಾಶವನ್ನು ಒದಗಿಸುವುದರಿಂದ ಶುದ್ಧ-ಅಶುದ್ಧ ಎಂಬ ಭ್ರಮೆಯನ್ನು ಒಡೆದುಹಾಕಲು ದಾರಿಯನ್ನು ಸೃಷ್ಟಿಸುತ್ತದೆ.

ಭಾಶೆಯ ಕಲಿಕೆಯ ದೃಷ್ಟಿಯಿಂದ ಇಲ್ಲಿಯೂ ತೊಡಕು ಇಲ್ಲವೆಂದಲ್ಲ. ಇಲ್ಲಿಯವರೆಗೆ, ಕಲಿಕಾರ್ಥಿಗೆ ಅಭಿವ್ಯಕ್ತಿಯ ನೆಲೆಯಲ್ಲಿ ಒಂದು ಸಿದ್ಧ ಮಾದರಿಯನ್ನೇ ಅಭ್ಯಾಸ ಮಾಡಿಸುತ್ತಾ(ಹಿಂದಿನ ತರಗತಿಗಳಲ್ಲಿ) ಬಂದಿರುವುದರಿಂದಾಗಿ, ಇದು ಕೊಡುವ ತಿಳುವಳಿಕೆಯನ್ನು ಸಹ ಮತ್ತೆ ಅದೇ ಎರಕದಲ್ಲಿ ಉಯ್ದು ನಿರೂಪಿಸುವಂತೆ ಒತ್ತಾಯಿಸುವಂತಾಗುತ್ತದೆ. ಇದರಿಂದಾಗಿ ಕಲಿಕಾರ್ಥಿಯ ಭಾಶಿಕ ಕೌಶಲ ಎನ್ನುವುದು-ತನ್ನದಲ್ಲದ- ಏಕಮುಖಿಯಾಗಿಯೇ ಉಳಿದು ಇತರೆ ಸಾಮಾಜಿಕ ಸಂದರ್ಭಗಳಲ್ಲಿ ತಾನು ಪಾಲುಗೊಳ್ಳದಂತೆ ತಡೆಯುತ್ತದೆ. ಆದ್ದರಿಂದಾಗಿ, ಒಟ್ಟು ಸಾಮಾಜಿಕ ಅವಕಾಶಗಳನ್ನು ಸಮಾನವಾಗಿ ಅರಿಯುವ ಸಾಧ್ಯತೆಯುಳ್ಳ ಪಠ್ಯಗಳನ್ನು ಜಾರಿಗೊಳಿಸುತ್ತಲೇ, ಕಲಿಕಾರ್ಥಿಯು ಕನ್ನಡಭಾಶೆಯ ವಿಭಿನ್ನ ಕೌಶಲಗಳನ್ನು ತನ್ನದಾಗಿಸಿಕೊಳ್ಳುವ ಕಡೆಗೆ ಪಠ್ಯಕ್ರಮವನ್ನು ಯೋಜಿಸಬೇಕಾಗುತ್ತದೆ.

ಈ ಹಿನ್ನೆಲೆಯಲ್ಲಿ ಉಪನ್ಯಾಸದ, ಭಾಶಣದ ಮಾದರಿಗಳು, ಬ್ಯಾಂಕ್ ವ್ಯವಹಾರದ ಭಾಶೆ, ಆಸ್ಪತ್ರೆಯಲ್ಲಿ ಬಳಸಬಹುದಾದ ಭಾಶೆ, ಕವಿತೆಯೊಂದನ್ನು ರಚಿಸಲು ಬೇಕಾದ ಸೃಜನಶೀಲ ಬರವಣಿಗೆಯ ಭಾಶೆ, ಟೀವಿ ಚಾನಲ್ ಒಂದರ ಆಂಕರಿಂಗ್ ಭಾಶೆ, ಕಾಲ್ ಸೆಂಟರಿನಲ್ಲಿ ಬಳಸುವ ಭಾಶೆ, ರೇಡಿಯೋ ಜಾಕಿಯಾಗಲು ಬೇಕಾದ ಭಾಶೆ, ಆಡಳಿತಾತ್ಮಕ ಕನ್ನಡದ ಮಾದರಿ-ರೆವಿನ್ಯೂ ಇಲಾಖೆಯ ಬರಹ ಮಾದರಿ ಮತ್ತು ಇತರೆ-ಅನುವಾದ, ಹೀಗೆ ಆಡುಭಾಶೆ, ಬರಹಭಾಶೆಗಳೆರಡರ ಬಳಕೆಯ ಭಿನ್ನ ಭಾಶಾ ಮಾದರಿಗಳ ತಿಳುವಳಿಕೆ ಭಾಶಾ ಕಲಿಕೆಯ ತರಗತಿಗಳಲ್ಲಿ ಇರಬೇಕು(ರಾಮಲಿಂಗಪ್ಪ ಟಿ. ಬೇಗೂರು) ಎನ್ನುವ ಅಭಿಪ್ರಾಯಗಳನ್ನು ಕೆಲವು ಅಧ್ಯಾಪಕರೂ ವ್ಯಕ್ತಪಡಿಸಿದ್ದಾರೆ.

ಸಾಹಿತ್ಯವು ಭಾಶೆಯ ಒಂದು ಅಂಗ ಮಾತ್ರ. ಭಾಶಾ ತರಗತಿಯಲ್ಲಿ ಸಾಹಿತ್ಯವನ್ನು ಮಾತ್ರವೇ ಕಲಿಯುವ ವ್ಯವಸ್ಥೆ ಬೇಕಿಲ್ಲ ಎಂಬ ಅಭಿಪ್ರಾಯವೂ ಈ ಸಂದರ್ಭದಲ್ಲಿ ವ್ಯಕ್ತವಾಗಿದೆ.

ಈ ಕಾರಣವಾಗಿ, ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ಸಲಹೆ, ಸೂಚನೆ ಮತ್ತು ನಿರ್ಧಿಷ್ಟ ಅಭಿಪ್ರಾಯಗಳನ್ನು ತಜ್ಞರಿಂದ ಪಡೆದುಕೊಳ್ಳಲಾಗಿದ್ದು, ಇಂಥ ಸೂಚನೆಗಳನ್ನಿಟ್ಟುಕೊಂಡೇ ಪದವಿ ಹಂತದಲ್ಲಿ ಕನ್ನಡ ಕಲಿಕೆಯನ್ನು ಹೇಗೆ ರೂಪಿಸಿಕೊಳ್ಳಬಹುದೆಂಬುದನ್ನು ಯೋಚಿಸಬಹುದಾಗಿದೆ. ಅದಕ್ಕಾಗಿ ಪದವಿಯ ಕನ್ನಡ ಕಲಿಕೆಯಲ್ಲಿ ಮುಖ್ಯವಾಗಿ ಗಮನಿಸಿಕೊಳ್ಳಬೇಕಾದ ಇಂಥ ಅಭಿಪ್ರಾಯ ಮತ್ತು ಸಲಹೆಗಳನ್ನು ಇಲ್ಲಿ ಕ್ರೋಢೀಕರಿಸುವುದರ ಮೂಲಕವೇ ಪಠ್ಯ, ಪಠ್ಯಕ್ರಮಗಳ ತೊಡಕುಗಳನ್ನು ಬಿಡಿಸಿಕೊಳ್ಳುವ ಚಿಂತನೆಯನ್ನು ಬೆಳೆಸಲು ಪ್ರಯತ್ನಿಸಲಾಗಿದೆ.

**ಸತ್ಯನಾರಾಯಣ ಮಲ್ಲಿಪಟ್ಣ;**

ಮಾತುಗಾರಿಕೆ, ಅದು ಇವತ್ತಿನ ಕಲಿಕೆಯಲ್ಲಿ ಡಿಫೈನ್ ಮಾಡುವ ರೀತಿಯಲ್ಲಿ ಇಲ್ಲ. ಮಾತುಗಾರಿಕೆಗೆ ಸಂಬಂಧಿಸಿದ ಹಾಗೆ ಕನ್ನಡ ಬದಲಾಗಿದೆ. ಈ ನಿಟ್ಟಿನಲ್ಲಿ, ಬದಲಾದ ಕನ್ನಡದ ಸ್ವರೂಪವನ್ನು ಕುರಿತು ಆಲೋಚನೆ ಮಾಡುವ ರೀತಿ ಇನ್ನೂ ಬೆಳೆದಿಲ್ಲ. ನಾವು ಇನ್ನೂ ೪೦-೫೦ ವರುಶಗಳ ಮಾದರಿಗಳಲ್ಲೇ ಇದ್ದೇವೆ ಎಂದು ಗುರುತಿಸುತ್ತಾ, ಮಾತನಾಡುವ ಸ್ಕಿಲ್ ಮತ್ತು ಓದುವ ಸ್ಕಿಲ್ ಇದೆಯಲ್ಲ ಅದನ್ನ ಇನ್ನಶ್ಟು ಸಮರ್ಪಕ ಮಾಡಬೇಕು ಎನ್ನುತ್ತಾರೆ.

ಸಾಮಾಜಿಕವಾಗಿ ಭಾಶೆಯ ಬಳಕೆಯ ಬೇರೆ ಬೇರೆ ರೀತಿಗಳನ್ನ ಪ್ರಯೋಗ ಮಾಡಬೇಕು. ಪದಗಳನ್ನ ಸೃಶ್ಟಿ ಮಾಡೋದು, ಸನ್ನಿವೇಶಗಳನ್ನ ಸೃಶ್ಟಿಮಾಡೋದು-ಅಂದ್ರೆ ಇದನ್ನು ಕಲಿಕೆಯ ಟೆಕ್ಸ್ಟ್ ಗೆ ತರೋದು ಆಗ್ಬೇಕು. ಆಗ ತನ್ನನ್ನ ತಾನು ಸಮರ್ಪಕವಾಗಿ ಪ್ರೆಸೆಂಟ್ ಮಾಡಿಕೊಳ್ಳಲಿಕ್ಕೆ ಇನ್ನಶ್ಟು ಸ್ಕಿಲ್ ಬರ್ತದೆ ಎಂದು ಗುರುತಿಸುತ್ತಾರೆ.

ನಾಳಿನ ದಿನಗಳಲ್ಲಿ ಎಕ್ಸಾಮಿನೇಶನ್ನಿಗೆ ಕೂಡ ಕನ್ನಡ ಬರೆಯಬೇಕಾಗಿಲ್ಲ. ಹಾಗಾಗಿ ಬರವಣಿಗೆಯ ಸ್ಕಿಲ್ಲನ್ನ ನಾವು ಹಿಂದೆ ಯೊಚನೆ ಮಾಡುತ್ತಿದ್ದ ಹಾಗೆ ಈಗ ಯೋಚನೆ ಮಾಡುವುದಕ್ಕೆ ಸಾಧ್ಯ ಇಲ್ಲ. ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಕನ್ನಡ ಕಲಿಕೆಯನ್ನು ಯೋಚಿಸಬೇಕು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

**ಎಂ.ಜಿ. ಚಂದ್ರಶೇಖರಯ್ಯ;**

ಇಂದಿನ ಜಗತ್ತಿನಲ್ಲಿ ಹಲವು ಜ್ಞಾನಶಿಸ್ತುಗಳು, ಅವುಗಳಲ್ಲಿ ಸ್ಪೆಶಲೈಸೇಶನ್‌ಗಳು ಸೃಶ್ಟಿಯಾಗುತ್ತಿವೆ. ವಿದ್ಯಾರ್ಥಿ ಆರಿಸಿಕೊಳ್ಳುವ ವಿಶಯಗಳನ್ನು ತನ್ನ ಭಾಶೆಯಲ್ಲಿ ಗ್ರಹಿಸಲು, ಆಲೋಚಿಸಲು, ಬರೆಯಲು ಅಗತ್ಯವಾದ ಭಾಶೆಯನ್ನು ಕಲಿಸುವ ಪಠ್ಯಗಳು ಇರಬೇಕು.

ಭಾಶಿಕ ಕೌಶಲಗಳು ಮತ್ತು ಭಿನ್ನ ಮಾದರಿಗಳನ್ನೆಲ್ಲಾ ತರಗತಿಯಲ್ಲಿ ಯಾರೋ ಕಲಿಸುತ್ತಾರೆ ಎನ್ನುವುದಕ್ಕಿಂತ ವಿದ್ಯಾರ್ಥಿಗಳು ಕಲಿಯುತ್ತಾರೆ. ಅವರು ಬೇರೆ ಬೇರೆ ವಿಶಯಗಳನ್ನು ಅಭ್ಯಾಸ ಮಾಡುವುದರಿಂದ, ಬೇರೆ ಬೇರೆ ಜ್ಞಾನಶಿಸ್ತುಗಳಲ್ಲಿ ಅಗತ್ಯವಾದ ಭಾಶಾ ಮಾದರಿಗಳನ್ನು ಪರಿಚಯಿಸಿಕೊಳ್ಳುತ್ತಾರೆ. ಆದರೆ, ಇದರ ಅಭಿವ್ಯಕ್ತಿಯ ದಾರಿಯನ್ನು ಕುರಿತು ನಾವು ಒಂದೆರಡು ಹೆಜ್ಜೆ ಸಾಗಬೇಕಾಗಿದೆ ಎನ್ನುತ್ತಾರೆ.

ಪಠ್ಯಗಳು ಒಳಗೊಂಡಿರುವುದು ಗ್ರಾಂಥಿಕ ಭಾಶೆಯನ್ನು, ವಿದ್ಯಾರ್ಥಿ ಆಡುವುದು ಆಡುಭಾಶೆಯನ್ನು ಆಗಿರುವುದರಿಂದ ವಿದ್ಯಾರ್ಥಿ ನಿತ್ಯದ ಮಾತನ್ನು ತರಗತಿಯಲ್ಲಿ ಮರೆತು, ಪಠ್ಯದ ಭಾಶೆಯನ್ನು ಅದು ಬಹಳ ದೊಡ್ಡದು ಎಂಬ ಕೀಳರಿಮೆಯಲ್ಲಿ ಕಲಿಯುವಂತಾಗಿದೆ ಎಂದು ಗುರುತಿಸುತ್ತಾರೆ. ಆದ್ದರಿಂದಾಗಿ ಭಾಶಿಕ, ಸಾಂಸ್ಕೃತಿಕ ನೆನಪುಗಳು ಬರುವಂತೆ ಮಾಡುವುದರ ಜೊತೆಗೆ, ಭಾಶೆ ಎನ್ನುವುದು ಕಾಲ, ದೇಶ, ಸಮಾಜವೊಂದರ ಸ್ವರೂಪವನ್ನು ನೀಡುವುದರಿಂದ, ಭಾಶಾ ಪ್ರಯೋಗ- ಈ ಎಲ್ಲವನ್ನೂ ಕಲಿಸುವಂತಿರಬೇಕು ಎಂದು ಅಭಿಪ್ರಾಯ ಪಡುತ್ತಾರೆ.

ಭಾಶಾ ಕಲಿಕೆಗೆ ಹಂತಗಳಿಲ್ಲ ಎನ್ನುವ ಎಂ.ಜಿ.ಸಿ ಹೊಸ ಹೊಸ ವಿಶಯಗಳನ್ನು ಕಲಿಯುವಾಗ ಹೊಸ ಭಾಶೆ ಅಗತ್ಯ-ಆಡುಮಾತು ಬಿಟ್ಟು ಹೊಸಭಾಶೆ ಎಂದಲ್ಲ-ಅದರ ಬೆಳವಣಿಗೆಯ ಬೇರೆ ಬೇರೆ ನೆಲೆಗಳು ಪಠ್ಯಕ್ರಮದಲ್ಲಿ ಬರಬೇಕು ಎನ್ನುತ್ತಾರೆ, ಈ ಹಿನ್ನೆಲೆಯಲ್ಲಿ ಪರೀಕ್ಶೆ ಎಂಬುದು ಇಲ್ಲದಿದ್ದರೆ ಇನ್ನೂ ಚೆನ್ನಾಗಿ ಭಾಶೆ ಕಲಿಸಲು ಸಾಧ್ಯ ಎನ್ನುತ್ತಾರೆ.

**ಡಾ. ಕೆ.ವೈ. ನಾರಾಯಣಸ್ವಾಮಿ;**

ಭಾಶೆಯ ಕಲಿಕೆಯ ಸಂದರ್ಭದಲ್ಲಿ ಅಧ್ಯಾಪಕ ಬಳಸೊ ಭಾಶೆ, ವಿದ್ಯಾರ್ಥಿಗಳು ಗ್ರಹಿಸುವ ಭಾಶೆ ಮತ್ತು ಪಠ್ಯಪುಸ್ತಕದಲ್ಲಿ ಮುದ್ರಣವಾಗಿರುವ ಭಾಶೆ, ಈ ಮೂರೂ ಭಾಶೆಗಳು ಅನೇಕ ಸಂದರ್ಭದಲ್ಲಿ ಬೇರೆ ಬೇರೆಯಾಗಿರುತ್ತವೆ. ಇದು ಕ್ಲಾಸ್ ರೂಮಿನೊಳಗೆ ಭಾಶಾ ಕಲಿಕೆ ಅನ್ನೊ ಪ್ರಕ್ರಿಯೆಯನ್ನ ಛಿದ್ರಿಸುತ್ತಾ ಇರುತ್ತದೆ ಎನ್ನುವ ಕೆ.ವೈ ನಾರಾಯಣಸ್ವಾಮಿ, ಇವತ್ತು ಭಾಶೆಯನ್ನು ಒಂದು ಕಿಂಡಿ-ವಿಂಡೊ ಅಂತ ನಾವು ಭಾವಿಸ್ತಾ ಇದ್ದೇವೆ ಎನ್ನುತ್ತಾರೆ.

ನಾವು ಹೆಚ್ಚು ಮಾಡ್ರನೈಸ್ ಆದಂತೆ, ಭಾಶೆ ಅನ್ನೋದು ವ್ಯಕ್ತಿತ್ವ ಪ್ರದರ್ಶನದ ಮತ್ತು ವ್ಯಕ್ತಿಯನ್ನು ಮಾರುಕಟ್ಟೆ ಮತ್ತು ಜಾಗತಿಕವಾದ ವಲಯಗಳಲ್ಲಿ ಚಲಾವಣೆಗೆ ತರುವಂತಾ ಸಾಧನಗಳಲ್ಲಿ ಒಂದು ಎನ್ನುವುದನ್ನು ಅರ್ಥಮಾಡಿಕೊಳ್ತಾ ಇದ್ದೇವೆ. ಇದರಿಂದಾಗಿ ಈವತ್ತು

ಸಂವಹನದ ಮೇಲೆ ಹೆಚ್ಚು ಒತ್ತು ಬೀಳ್ತಾ ಇದೆ ಎಂದು ಬದಲಾಗಬೇಕಾದ ಕಲಿಕೆಯ ನೆಲೆಯನ್ನು ಗುರುತಿಸಿಕೊಳ್ಳುತ್ತಾರೆ.

ಭಾಶೆಯನ್ನ ಕಲಿಯುತ್ತಿರುವ ಹುಡುಗರು, ಯಾವ ಬಗೆಯ ಲೋಕದೃಶ್ಟಿಯನ್ನು ಬೆಳೆಸಿಕೊಳ್ಳಬೇಕು ಮತ್ತು ತಾವು ಹೇಗೆ ಇನ್‌ಸ್ಟ್ರುಮೆಂಟಲ್ ಆಗಬೇಕು ಎಂದು ಯೋಚಿಸುತ್ತಿರುತ್ತಾರೆ. ಆದ್ದರಿಂದ, ಇನ್‌ಸ್ಟ್ರುಮೆಂಟಲ್ ಆಗಿ ವರ್ತಮಾನ ಮತ್ತು ಬರುವ ಭವಿಶ್ಯತ್ತಿನಲ್ಲಿ ಹೆಚ್ಚು ಸಾಂಸ್ಕೃತಿಕವಾಗಿ ಉಪಯುಕ್ತರಾಗುವುದನ್ನು ಯೋಚಿಸಬೇಕೆನ್ನುತ್ತಾರೆ.

ಈ ನಿರೀಕ್ಶೆಗಳೆಲ್ಲ- ವ್ಯಕ್ತಿಗತವಾಗಿಯೋ, ಮಾರುಕಟ್ಟೆ, ವರ್ತಮಾನ, ಆಧುನೀಕರಣ ಅಥವಾ ಯಾಂತ್ರೀಕರಣ ಇಂಥವು ಸೃಶ್ಟಿಸುತ್ತಿರುವ ಸನ್ನಿವೇಶಗಳ ಫಲವಾಗಿಯೊ- ಸಾಂಸ್ಕೃತಿಕವಾದ ಸಂವೇದನಗಳಿಂದ ಕೂಡಿರುವಂತವೇ ಅನ್ನೋದನ್ನ ಖಂಡಿತವಾಗಿ ಒಪ್ಪೋದಕ್ಕೆ ಸಾಧ್ಯವಿಲ್ಲ ಎನ್ನುವ ನಾರಾಯಣಸ್ವಾಮಿ, ಆದ್ದರಿಂದಾಗಿ ವಿದ್ಯಾರ್ಥಿ, ಭಾಶೆಯ ಮೂಲಕ ಹಿಂದಣ ಹೆಜ್ಜೆಯನ್ನು ಮತ್ತು ಮುಂದಣ ಹೆಜ್ಜೆಯನ್ನು ಕನೆಕ್ಟ್ ಮಾಡಿಕೊಳ್ಳೊ ಹಂಗೆ ಆಗಬೇಕು. ಕನೆಕ್ಟಿಂಗ್ ಅನ್ ಕನೆಕ್ಟೆಡ್ ಅನ್ನೊ ಹಂಗೆ ಆಗಬೇಕಾದ್ರೆ, ಸಾಂಸ್ಕೃತಿಕವಾದ ನಿರೀಕ್ಶೆಯಿದ್ದಾಗ ಮಾತ್ರ ಸಾಧ್ಯವಾಗುತ್ತೆ ಎಂದು ಕಲಿಕೆಯ ಸಾಮಾಜಿಕ ಸಂಬಂಧಗಳನ್ನು ಗುರುತಿಸುತ್ತಾರೆ.

ವಿದ್ಯಾರ್ಥಿಯು ಹೇಗೆ ಒಂದು ಗುಂಪಿನಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ತಾನೆ/ಳೆ, ಹೇಗೆ ಗುಂಪಿನಲ್ಲಿ ಕೆಲಸ ಮಾಡೋಕೆ ಸಾಧ್ಯ ಇದೆ, ಲೋಕದೃಶ್ಟಿ ಹೇಗಿದೆ, ಹೇಗೆ ಮಾತನಾಡ್ತಾನೆ/ಳೆ, ಹೇಗೆ ಒಂದು ಸಮಸ್ಯೆಯನ್ನ ಅರ್ಥ ಮಾಡ್ಕೊತಾನೆ/ಳೆ, ಅವನ/ಳ ಇಮಿಡಿಯೆಟ್ ಡಿಸಿಶನ್ ಮೇಕಿಂಗ್ ಸ್ಕಿಲ್ ಇದೆಯಲ್ಲ-ಇದಕ್ಕೆ ಯಾವ ಯಾವ ರೀತಿಯ ಸಿದ್ಧತೆಗಳನ್ನ ಬಳಸಿಕೊಳ್ತಾನೆ/ಳೆ ಅನ್ನೋದು ಬಹಳ ಪ್ರಧಾನವಾದಂತಹ ಯಾರ್ಡ್ ಸ್ಟಿಕ್. ಇದಕ್ಕಾಗಿ ಬಾಶೆ ಅಲ್ಲಿ ಕನ್ನಡಿಯ ಕೆಲಸವನ್ನ ಮಾಡ್ಬೇಕು ಎನ್ನುತ್ತಾರೆ.

ತಾನು ಹೇಳಬೇಕಾಗಿರೊ ಮಾತುಗಳನ್ನ, ತಾನು ಮಾಡ್ಬೇಕಾಗಿರೊ ಕೆಲಸಗಳನ್ನ ಸ್ಪಶ್ಟವಾಗಿ ಗುರಿತಿಸೊಕೊಳ್ಳೋಕೆ, ತನ್ನ ಎಬಿಲಿಟಿಯನ್ನ ಗುರುತಿಸಿಕೊಳ್ಳೋಕೆ ಬೇಕಾಗಿರುವ ಪರಿಭಾಶೆಗಳ ಪರಿಚಯ-ಭಾಶೆಯ ಸೂಕ್ಶ್ಮತೆಯ ಪರಿಚಯ ಆಗಬೇಕು. ಭಾಶೆಯನ್ನು ಹೇಗೆ ಬಳಸಬೇಕು ಅನ್ನುವಂತ ಸೂಕ್ಶ್ಮತೆಗಳನ್ನು ಕಲಿಯುವ ಹಾಗೆ ಆಗಬೇಕು. ಪರಿಣಾಮಕಾರಿಯಾಗಿ ಮಾತನಾಡೋದು ಹೇಗೆ, ಪರಿಣಾಮಕಾರಿಯಾಗಿ ಅರ್ಥೈಸಿಕೊಳ್ಳೋದು ಹೇಗೆ ಎನ್ನುವುದಕ್ಕೆ ಬೇಕಾಗುವಂತ ಕಲಿಕೆಯ ಆವರಣವನ್ನ ನಾವು ಸೃಶ್ಟಿಸಬೇಕಾಗಿದೆ ಎಂದು ಗುರುತಿಸುತ್ತಾರೆ.

ಟೀಚರ್ಸ್‌ನ ಕೆಲಸ ಶುಡ್ ಬಿ ಯೆ ಫೆಸಿಲಿಟೇಟರ್ಸ್. ಈ ಹಿನ್ನೆಲೆಯಲ್ಲಿ ಈಗಾಗ್ಲೆ ಒಂದು ಚೌಕಟ್ಟಿನ ಬಳಕೆಯನ್ನು ಕಂಡುಕೊಂಡಿರಬಹುದಾದ ಟೆಕ್ಸ್ಟಿನ ಮೂಲಕ ಇವತ್ತಿನ ಸಾಂಸ್ಕೃತಿಕ ಸಂದರ್ಭಕ್ಕೆ ನಮ್ಮ ಹುಡುಗ/ಗಿಯರನ್ನು ಸಿದ್ಧಪಡಿಸಲಿಕ್ಕೆ ಸಾಧ್ಯವಿಲ್ಲ. ವಿದ್ಯಾರ್ಥಿ ಅನ್ನೊ ವಿಚಾರವನ್ನ ಇವತ್ತಿನ ಎಲ್ಲಾ ತಲ್ಲಣಗಳ ನಡುವೆ ಇಟ್ಟು ನೋಡಬೇಕಾಗಿದೆ. ಆ ತಲ್ಲಣಗಳು ಎಲ್ಲಿಂದ ಹುಟ್ಟುತ್ತವೆ ಅಂತ ತಿಳಿಯಲಿಕ್ಕೂ ಸಾಧ್ಯಾವಾಗದೆ ಇರೊ ಸ್ಥಿತಿಯಲ್ಲಿ ವಿದ್ಯಾರ್ಥಿಗಳು ಇರ್ತಾರೆ ಅನ್ನುವುದನ್ನೂ ನಾವು ತಿಳಿದಿರಬೇಕಾಗುತ್ತದೆ. ಆ ತಲ್ಲಣಗಳ ನಡುವೆ ತಮ್ಮನ್ನು ಗುರ್ತಿಸಿಕೊಳ್ಳುವುದಕ್ಕೆ ಆಗುವಂತ ಟೆಕ್ಸ್ಟಗಳನ್ನ ನಾವು ರೂಪಿಸಿಕೊಡೋಕೆ ಸಾಧ್ಯವಾಗಬೇಕು. ಅವರನ್ನ ಕಾಡ್ತಾ ಇರೊ ವಿಚಾರಗಳನ್ನು, ಭಾಶಿಕ ನೆಲೆಗಳನ್ನು ಮುಖ್ಯ ಮಾಡಿಕೊಂಡಿರಬೇಕು. ತಲ್ಲಣಗಳ ಜೊತೆ ಸಂಬಂಧವನ್ನ ಸ್ಥಾಪಿಸಿಕೊಳ್ಳೋಕೆ ಸಾಧ್ಯವಾಗುವಂತ ಟೆಕ್ಸ್ಟಗಳು ಇರಬೇಕು ಎಂದು ಅಭಿಪ್ರಾಯ ಪಡುತ್ತಾರೆ.

**ಡಾ. ಡಿ. ಡಾಮ್ನಿಕ್;**

ಭಾಶೆಯ ಕಲಿಕೆಯೆನ್ನುವುದನ್ನು ಮನೆಮಾತಿನ ಪ್ರಜ್ಞೆಯನ್ನು ವಿಸ್ತರಿಸುವ ರೂಪವಾಗಿ ನೋಡುವ ಡಾಮ್ನಿಕ್ ಅವರು, ಭಾಶೆ ಅನ್ನುವುದು ಅಪ್ರಜ್ಞಾಪೂರ್ವಕವಾಗಿ ಬರೋದು ಅಲ್ಲವೇ ಅಲ್ಲ. ಪ್ರಜ್ಞಾಪೂರ್ವಕವಾಗಿ ನಾವು ನೀವು ಸೇರಿ ರೂಡಿಸಿಕೊಳ್ಳುವಂತ ಒಂದು ಕೌಶಲ್ಯ ಎನ್ನುತ್ತಾ ಕುಲ ಪರಂಪರೆಯ ಪಜ್ಞೆಯ ಅಭಿವ್ಯಕ್ತಿಯಾಗಿ ಗುರುತಿಸುತ್ತಾರೆ.

ಭಾಶೆಯ ಸಂದರ್ಭದಲ್ಲಿ, ಈ ಕುಲ ಪರಂಪರೆಯಲ್ಲಿರುವ ಪ್ರಜ್ಞೆಯನ್ನು ಇನ್ನೊಂದು ಸಮುದಾಯದೊಟ್ಟಿಗೆ ನಿಭಾಯಿಸಿಕೊಳ್ಳುವುದು ಮತ್ತು ಈ ಮುಖಾಮುಖಿಯಲ್ಲಿಇನ್ನೊಂದು ಪ್ರಜ್ಞೆಯೇ ಘಟಿಸುತ್ತದೆ ಎನ್ನುವುದು ಎಂದು ವಿವರಿಸುತ್ತಾ ಇಂಥ ಹೊಣೆಗಾರಿಕೆ ಎನ್ನುವುದನ್ನು ಭಾಶಿಕವಾದ ಒಂದು ಸಂವಾದದ ಮೂಲಕ ಸಾಧ್ಯವಾಗಿಸಿಕೊಳ್ಳಬೇಕು ಎನ್ನುತ್ತಾರೆ.

ಕನ್ನಡ ಭಾಶಾ ಪಠ್ಯ ಎನ್ನುವುದು, ಅದೊಂದು ಮೆಲ್ಟಿಂಗ್ ಪಾಟ್ ತರ ಇರಬೇಕು ಎನ್ನುವ ಡಾಮ್ನಿಕ್, ಆ ಮಡಿಕೆಯಲ್ಲಿ ಎಲ್ಲಾನೂ ಕರಗಿ ಹೋಗಿಬಿಡಬೇಕು. ಅಲ್ಲಿ ಹೊಸದೊಂದು ಐಡೆಂಟಿಟಿ ಉಗಮ ಆಗಬೇಕು ಎನ್ನುತ್ತಾರೆ.

ಕನ್ನಡ ಕಲಿಯುವಂತ ಮಕ್ಕಳೆಲ್ಲ ಮೊದಲನೆ ತಲೆಮಾರಿನ ಯುವಕ ಯುವತಿಯರೇ ಆಗಿದ್ದು, ಇವರು ಇಲ್ಲಿಯತನಕ ರೂಡಿಸಿಕೊಂಡಿರುವಂತ ಆದರ್ಶೀಕೃತವಾದ ಕನ್ನಡ ಜಗತ್ತು ಮತ್ತು ಇವರು ನಿಜವಾಗಿಯೂ ಜೀವಿಸುವ ಕನ್ನಡ ಜಗತ್ತಿನ ಮುಖಾಮುಖಿಯಲ್ಲಿ ಅವರು

ಜೀವಿಸಿದ ಜಗತ್ತು ಸೋಲುತ್ತಾ ಹೋಗುತ್ತದೆ. ಆದ್ದರಿಂದಾಗಿ, ಬೇರೆ ಬೇರೆ ಸುಮುದಾಯಗಳಿಂದ, ಅದರಲ್ಲೂ ವಂಚಿತ ಸಮುದಾಯಗಳಿಂದ ಬಂದವರು–ಕಲಿಕೆ ಮತ್ತು ಬದುಕಿನ ನಡುವೆ ಪರಸ್ಪರ ಸಂಬಂಧವಿಲ್ಲದಿರುವುದರಿಂದಾಗಿ– ತರಗತಿಯಲ್ಲಿ ಎದುರಾದಾಗ ಸಮಸ್ಯೆಗಳು ಆರಂಭವಾಗುತ್ತವೆ. ಇದರಿಂದಾಗಿ, ಪದವಿ ತರಗತಿಗಳಲ್ಲಿ ಭಾಶಾ ತಿಳುವಳಿಕೆ ಎನ್ನುವುದು, ಪ್ರತಿಯೊಂದು ಸಮುದಾಯಗಳ ಅನುಭವಗಳು, ಅದನ್ನ ರೂಪಿಸಿರುವಂತ ಪ್ರಜ್ನಾ ಜಗತ್ತು ಕನ್ನಡ ಐಡೆಂಟಿಟಿ ಅಥವಾ ಕನ್ನಡ ಜಗತ್ತಿ(ಪಬ್ಲಿಕ್ ಸ್ಪೇಸ್)ಗೆ ಮುಖಾಮುಖಿ ಆಗಬೇಕಾಗುತ್ತದೆ. ಯಾಕೆಂದರೆ, ಜಾತಿ ಅನ್ನೋದು, ಪಬ್ಲಿಕ್ ಸ್ಪೇಸಲ್ಲಿ ಏಣಿಶ್ರೇಣಿಯ ಆಟ ಮಾಡುತ್ತಾ ಅದು ಮಡಿ ಮೈಲಿಗೆಯನ್ನು ಕಲಿಸಿಕೊಡುತ್ತಿರುತ್ತದೆಯಾದ್ದರಿಂದ, ಜೀವಂತ ಕುಲಪರಂಪರೆಯಲ್ಲಿ ರೂಢಿಸಿಕೊಂಡಿರುವಂತಹ ಭಾಶಾ ಕೌಶಲ್ಯ ಕಲಿಕೆಯಲ್ಲಿ ಇನ್ನಶ್ಟು ವಿಸ್ತಾರ ಆಗಬೇಕು. ಆ ಮೂಲಕ ತಾನು ಬದುಕುತ್ತಿರುವ ಈ ಜಗತ್ತನ್ನು ನಿಭಾಯಿಸುವಂತಹ ಕೌಶಲವನ್ನು ಭಾಶೆ ಕಲಿಸಿಕೊಡಬೇಕು ಎಂದು ಅಭಿಪ್ರಾಯ ಪಡುತ್ತಾರೆ.

ಪದವಿ ತರಗತಿಗಳ ಪಠ್ಯದಲ್ಲಿ ವಾಣಿಜ್ಯ ಕನ್ನಡ ಎಂದು ಕಲಿಸುವಾಗ ಅಂತ ಒಂದು ಕನ್ನಡ ಸಂದರ್ಭ ವಣಿಕ ಸಮುದಾಯದ ಒಟ್ಟಿಗೆ ಇರಲಿಲ್ಲವಾದ್ದರಿಂದ ಇದು ಸಮಸ್ಯೆಯಾಗಿಯೇ ಕಾಣುತ್ತದೆ. ಸಂತೆ ಅನ್ನುವ ಪರಿಕಲ್ಪನೆ ನಮ್ಮಲ್ಲಿ ಇದೆಯಾದರೂ, ಆ ಸಂತೆ ಭಾಶೆಯನ್ನು ನಾವು ಕಲಿಯಲಿಲ್ಲ. ಆದರೆ, ಲೆಟರ್ ಬರೆಯೋದು ಹೇಗೆ, ಒಂದು ಕಂಪನಿಯೊಟ್ಟಿಗೆ ಹೇಗೆ ವರ್ತಿಸೋದು ಅಂತ ಹೇಳಿಕೊಡುವುದರಲ್ಲಿ ಯಾವ ಅರ್ಥವೂ ಇಲ್ಲ. ಈ ಜಗತ್ತಿನ ವ್ಯಾವಹಾರಗಳನ್ನು ನಿಭಾಯಿಸಿಕೊಳ್ಳೊ ಕೌಶಲ ಒಂದು ಭಾಶೆಯ ಕಲಿಕೆಯಲ್ಲಿ ಸಿಗಬೇಕು ನಮಗೆ. ಅಂದರೆ, ಒಂದು ಸಮುದಾಯದ ಭವಿಶ್ಯದ ನಡಿಗೆಗಾಗಿ ಒಂದು ಹೊಸತನ್ನು ಕ್ರಿಯೇಟ್ ಮಾಡುವ ಹೊಳಹನ್ನು ಅದು ಕೊಡಬೇಕು. ಹಾಗಾಗಿ, ಒಂದು ಸಮುದಾಯದ ನಿರ್ಧಿಶ್ಟ ಭಾಶಿಕ ಸ್ವರೂಪವನ್ನ ಕಟ್ಟಿಕೊಟ್ಟ ತಕ್ಷಣ ಅದು ಭಾಶಾ ಕೌಶಲವನ್ನು ಕಲಿಸಿಕೊಟ್ಟ ಹಾಗೆ ಆಗುವುದಿಲ್ಲ. ಆದ್ದರಿಂದಾಗಿ, ಪದವಿ ತರಗತಿಗಳ ಕನ್ನಡ ಪಠ್ಯವನ್ನು ನಿರ್ಧರಿಸುವ ಮಾನದಂಡವೆಂದರೆ, ಅದು ಸಾಮಾಜಿಕ ನ್ಯಾಯ ಎನ್ನುತ್ತಾರೆ.

ಒಂದೊಂದು ಜಾತಿ ಸಮುದಾಯ, ಜನಾಂಗ ಸರ್ವೈವಲ್‌ನ ಕಾರಣವಾಗಿ ಯಾವ ಸಾಮರ್ಥ್ಯವನ್ನು ಕಟ್ಟಿಕೊಂಡಿರುತ್ತದೆ ಅಂತಹ ಸರ್ವೈವಲ್ ಕೌಶಲಗಳು ಅಥವಾ ಸಾಮರ್ಥ್ಯಗಳು ಇವತ್ತಿನ ಅಧುನಿಕೋತ್ತರ ಕಾಲದಲ್ಲಿ ಅಕೌಶಲಕ್ಕೆ ಒಳಗಾಗುತ್ತಿರುತ್ತವೆ. ಇದು ಸಾಮರ್ಥ್ಯ ಅಲ್ಲ ಅಂತ ಪರಿಗಣಿಸಲ್ಪಡುತ್ತಿರುತ್ತವೆ. ಆದ್ದರಿಂದಾಗಿ, ನಾನು ಇಂಡಿಪೆಂಡೆಂಟ್ ಅಥವಾ ನಾನು

ಡಿಪೆಂಡೆಂಟ್ ಅನ್ನುವ ಮಾದರಿ ಬೇಡ. ನಾನು ಪರಸ್ಪರಾವಲಂಬಿ, ನಿನ್ನೊಟ್ಟಿಗೆ ನಾನಿದ್ದೀನಿ. ನನ್ನೊಟ್ಟಿಗೆ ನೀನಿದ್ದಿ ಎನ್ನುವ ತಿಳುವಳಿಕೆಯನ್ನು ಕೊಡುವ ಪಠ್ಯಗಳು ಬೇಕು. ಅಂದ್ರೆ ಈಗಾಗಲೆ ಅನುಕೂಲಸ್ಥರು ಕಟ್ಟಿರುವಂತ ಕನ್ನಡ ಜಗತ್ತನ್ನು ಮುರಿದು ಮುಂದಕ್ಕೆ ತೆಗೆದುಕೊಂಡು ಹೋಗುವಂತ ಪಠ್ಯ ಬೇಕು. ಇಂಥಹುದು ಬಹುತ್ವಕ್ಕೆ ಬೇಕಾಗಿರುವ ತಾಕತ್ತನ್ನು ಒದಗಿಸಬಲ್ಲುದು ಎಂದು ವಿವರಿಸುತ್ತಾರೆ.

ಈ ಹಿನ್ನೆಲೆಯಲ್ಲಿ ಸಾಮಾಜಿಕ ಹೊಣೆಗಾರಿಕೆಯನ್ನು ಪ್ರತಿನಿಧಿಸುವುದು ಎನ್ನುವುದೂ ಸಹ ಇನ್ನಷ್ಟು ಸಮಸ್ಯೆಯನ್ನೇ ಸೃಷ್ಟಿಸುತ್ತದೆ ಎನ್ನುವ ಡಾಮ್ನಿಕ್, ಪ್ರಜಾಪ್ರಭುತ್ವದಲ್ಲಿ ನನ್ನನ್ನು ಒಬ್ಬರು ಪ್ರತಿನಿಧಿಸ್ತಾರೆ ಅಂತ ಹೇಳಿದರೆ, ನನ್ನ ಆಶೋತ್ತರಗಳನ್ನು ಅವರು ತಮ್ಮದಾಗಿಸಿಕೊಂಡು ನನ್ನ ನಿರೀಕ್ಷೆಗಳಿಗೆ ಅವರು ನ್ಯಾಯ ಒದಗಿಸ್ತಾರೆ ಎಂಬುದೇ ಆಗುತ್ತದೆ. ಇದರ ಸಮಸ್ಯೆಯೆಂದರೆ, ಅವ ನನ್ನ ರೆಪ್ರೆಸೆಂಟ್ ಮಾಡೋದರ ಮೂಲಕ ರೀ ಪ್ರೆಸೆಂಟ್ ಮಾಡುತ್ತಾ ಇರ್ತಾನೆ. ಹಾಗಾಗಿ, ಇಲ್ಲಿ ಪಠ್ಯ ಅನ್ನೋದು ಯಾರ ಅನುಭವ ಜಗತ್ತನ್ನ ಅದು ಪ್ರತಿನಿಧಿಸುತ್ತದೆ?. ಅಥವಾ ನನ್ನ ಅನುಭವ ಜಗತ್ತನ್ನು ಅದು ಯಾಕೆ ಪ್ರತಿನಿಧಿಸಬೇಕು? ಹಾಗಾಗಿ ಆ ಪಾಲಿಟಿಕ್ಸ್ ಆಫ್ ರೆಪ್ರೆಸೆಂಟೇಶನ್ ಪ್ರಶ್ನೆಯನ್ನ ನಾವು ತೆಗೆದುಕೊಳ್ಳದೆ ಹೋದರೆ ಸಾಮಾಜಿಕ ಹೊಣೆಗಾರಿಕೆ ಅನ್ನೋದು ಅರ್ಥಹೀನ ಆಗುತ್ತಾ ಹೋಗುತ್ತಿರುತ್ತದೆ ಎಂದು ತಮ್ಮ ನಿಲುವುಗಳನ್ನು ಮಂಡಿಸುತ್ತಾರೆ.

ಪದವಿತರಗತಿಗಳಲ್ಲಿ ಬೇಕಾದ ಭಾಷಾ ಜ್ಞಾನ ಅಂದ್ರೆ-ಭಾಶೆ ಅನ್ನೋದು ಒಂದು ಮೆಚ್ಯೂರ್ಡ್ ಆದ ಸಿದ್ಧ ಸ್ಥಿತಿಯಲ್ಲವಾದ್ದರಿಂದ-ಅದು ನಿರಂತರ ಆಗುವಿಕೆ. ಪ್ರತಿಯೊಂದು ಹಂತದಲ್ಲಿ ನಾವು ಭಾಶೆಯನ್ನು ನಿರ್ದಿಷ್ಟಗೊಳಿಸಿಕೊಳ್ಳುತ್ತಾ ಹೋಗಬೇಕಾಗುತ್ತದೆ. ಹೀಗಾಗಿ ಭಾಶೆ ಯಾವಾಗಲೂ ನಿರ್ದಿಷ್ಟ ಆಗಿರಬೇಕು, ಸಂದರ್ಭೀಕೃತ ಆಗಿರಬೇಕು, ಕಾಲಬದ್ಧ ಆಗಿರಬೇಕು ಎಂದು ಖಚಿತವಾಗಿ ವಿವರಿಸುತ್ತಾರೆ.

ಭಾಶೆ ಅನ್ನೋದು ಆಯಾ ಯುಗಧರ್ಮದ ಕನಸಾಗಿಯೂ ಇರುತ್ತದೆ ಎನ್ನುವ ಡಾಮ್ನಿಕ್, ಒಂದು ಯುಗದಲ್ಲಿರೊ ಭಾಶೆ ಇನ್ನೊಂದು ಯುಗದಲ್ಲೂ ಕಂಟಿನ್ಯೂ ಆಗಬೇಕು ಅನ್ನುವುದು ನಮ್ಮ ದುರಹಂಕಾರ ಆಗುತ್ತದೆ ಎಂದು ಭಾಶೆಯನ್ನು ಬದಲಾದ ನೆಲೆಗಳಲ್ಲಿ ಕಂಡುಕೊಳ್ಳಬೇಕಾದ ಅನಿವಾರ್ಯತೆಯನ್ನು ಸೂಚಿಸುತ್ತಾರೆ. ಇಶ್ಟೊಂದು ತೀವ್ರವಾದ ಪಲ್ಲಟಗಳನ್ನ ಭಾಶಿಕವಾಗಿ ಅರಗಿಸಿಕೊಳ್ಳೊ ಬಗೆ ಹೇಗೆ ಎಂದು ಯೋಚಿಸಬೇಕಾಗುತ್ತದೆ ಎನ್ನುತ್ತಾ, ಕಲಿಕೆ ಅನ್ನೋದು ಏನೂ ಅಲ್ಲ, ಆದರೆ ಕಲಿಕೆ ಅನ್ನೋದು ಹೇಗೆ ಎನ್ನುವುದು ಇಲ್ಲಿ ಮುಖ್ಯವಾಗುತ್ತದೆ ಎಂದು ಭಾಷಾ ಕಲಿಕೆಯ ಸಾಧ್ಯತೆಗಳನ್ನು ವಿವರಿಸುತ್ತಾರೆ.

**ಎಚ್.ಎಸ್.ಶ್ರೀಮತಿ;**

ಪದವಿ ಕನ್ನಡಭಾಷೆಯ ಕಲಿಕೆಯು, ಗ್ರಹಿಕೆ ಮತ್ತು ಅಭಿವ್ಯಕ್ತಿಯ ಎರಡು ನೆಲೆಗಳಲ್ಲಿ ಮಾಸ್ಟರ್ ಆಗುವಂತಿರಬೇಕು. ವಿಶಯ ಏನೆ ಇದ್ದರೂ ಗ್ರಹಿಸುವುದಕ್ಕೆ ಏನು ಬೇಕು ನಮಗೆ, ಗ್ರಹಿಸಿದ್ದನ್ನು ಎಕ್ಸ್‌ಪ್ರೆಸ್ ಮಾಡುವುದಕ್ಕೆ ಏನು ಬೇಕು ಎಂಬುದು ಮುಖ್ಯವಾಗಬೇಕು. ಈ ಹಂತದಲ್ಲಿ, ಗ್ರಹಿಕೆ ಮತ್ತು ಎಕ್ಸ್‌ಪ್ರೆಶನ್ ಮಾಡುವುದಕ್ಕೆ ಲಾಂಗ್ವೇಜ್ ಆ್ಯಸ್ ಟೂಲ್ ಆಫ್ ಎಕ್ಸ್‌ಪ್ರೆಶನ್ ಆಗಬೇಕು ಎನ್ನುತ್ತಾರೆ. ಭಾಶೆ ಕಲಿಕೆಯಲ್ಲಿ ಈ ಉದ್ದೇಶ ನೆರವೇರದೇನೆ ನಾವು ಮುಂದಿನ ಹಂತಗಳಿಗೆ ಸಾಗುತ್ತಿದ್ದೇವೆ. ಆದ್ದರಿಂದಾಗಿ, ಇವತ್ತು ಮಕ್ಕಳಿಗೆ ಡಿಗ್ರಿ ಹಂತದಲ್ಲೂ ಒಂದು ಎಕ್ಸ್‌ಪ್ರೆಶನ್ ಆಗಲಿ ಗ್ರಹಿಕೆಯಾಗಲಿ ಬರುತ್ತಿಲ್ಲ ಅಂತ ದೂರುವಂತಾಗಿದೆ. ಟೂಲ್ ಅನ್ನು ಸಮರ್ಥವಾಗಿ ಒದಗಿಸುವುದರ ಕಡೆಗೆ ನಾವು ಗಮನ ಕೊಡುವುದರ ಬದಲು ವಿದ್ಯಾರ್ಥಿಗಳ ಗ್ರಹಿಕೆಯ ಲೆವೆಲ್ಲೇ ಕಡಿಮೆ ಅನ್ನೋ ತರದಲ್ಲಿ ಮಾತನಾಡುತ್ತಿದ್ದೇವೆ ಎಂದು ಪಠ್ಯಕ್ರಮದ ಮಿತಿಗಳನ್ನು ಗುರುತಿಸುತ್ತಾರೆ.

ಸಾಹಿತ್ಯದ ಟ್ರೈನಡ್ ಟೀಚರ್ಸ್ ನಾವು ಲಾಂಗ್ವೇಜ್ ಟೀಚಿಂಗ್ ಬಗ್ಗೆ ತಲೆನೆ ಕೆಡಿಸಿಕೊಳ್ಳುವುದಿಲ್ಲ ಎಂದು ಕನ್ನಡ ಅಧ್ಯಾಪಕರ ಹೊಣೆಯ ಬಗ್ಗೆ ಪ್ರಶ್ನೆಯೆತ್ತುತ್ತಾ, ಕಲಿಕೆಯಲ್ಲಿ, ಜ್ಞಾನದ ಬೇರೆ ಬೇರೆ ವಲಯಗಳ ಗ್ರಹಿಕೆ ಮತ್ತು ಅಭಿವ್ಯಕ್ತಿಯಲ್ಲಿ ಭಾಶೆ ಒಂದು ಬಲವಾದಂತಹ ಸಾಧನವಾಗುವಂತೆ ಪಠ್ಯಗಳನ್ನು ಯೋಜಿಸಬೇಕು. ಅದಕ್ಕಾಗಿ ಭಾಶೆಯ ಬೇರೆ ಬೇರೆ ಬಗೆಗಳನ್ನು ಕಲಿಸಬೇಕು. ಅಂದರೆ ಭಾಶಿಕ ಶೈಲಿ, ಪ್ರಕಾರಗಳಶ್ಟೇ ಅಲ್ಲ, ಅದೇ ಭಾಶೆಯ ಬೇರೆ ಬೇರೆ ಬಗೆಯನ್ನು ಕಲಿಸುವುದು. ಇದಕ್ಕಾಗಿ ಕಲಿಸುವವರಿಗೆ ಅದರ ಬಗ್ಗೆ ಪರಿಣಿತಿ ಇದೆಯಾ, ಸಿಲೆಬಸ್‌ನಲ್ಲಿ ಅಂತದ್ದನ್ನು ಸೇರಿಸಿಕೊಳ್ಳುವುದಕ್ಕೆ ನಾವು ಸ್ಪೇಸ್ ಕೊಟ್ಟಿದ್ದೀವಾ ಎನ್ನುವ ಪ್ರಶ್ನೆಗಳು ಮುಖ್ಯವಾಗಬೇಕು ಎನ್ನುತ್ತಾರೆ.

ಭಾಶೆ ಕಲಿಸುತ್ತಿದ್ದೀವಿ ಅಂತ ತಪ್ಪಾಗಿ ಗ್ರಹಿಸಿ ಸಾಹಿತ್ಯ ಕಲಿಸುತ್ತಿದ್ದೀವಿ ಅಂದಾಗ ನಾವು ಸಾಹಿತ್ಯವನ್ನೂ ಕಲಿಸುತ್ತಿಲ್ಲ, ಭಾಶೆಯನ್ನೂ ಕಲಿಸುತ್ತಿಲ್ಲ. ಎರಡರಲ್ಲೂ ತಪ್ಪಾಗುತ್ತಿದೆ. ಭಾಶೆಯ ವಿವಿಧ ರೂಪಗಳು ಮತ್ತು ಆಯಾಮಗಳನ್ನು ಕಲಿಸುವಾಗಲೂನು, ಹಾಗೆ ಕಲಿಸಬೇಕಾದಂತಹ ತರಬೇತಿಯೂ ಇಲ್ಲ. ಇದರಿಂದಾಗಿ, ಭಾಶೆಯನ್ನು ಕಲಿಯುವಾಗ ಶಿಶ್ಟ ಭಾಶೆ, ಪ್ರಾದೇಶಿಕ ಭಾಶೆಯ ಪ್ರಶ್ನೆಗಳು ಬಂದಾಗ, ಕೇವಲ ಆ ಪ್ರಶ್ನೆಯನ್ನ ಒಂದು ರೆಸಿಸ್ಟೆನ್ಸ್ ಅಂತ ಮಾತ್ರ ತಿಳಿದುಕೊಂಡು ಅದರ ಒಂದು ಉದಾಹರಣೆಯನ್ನ ಮಾತ್ರ ನಾವು ಫಿಕ್ಸ್ ಮಾಡಿಬಿಟ್ಟರೆ ಅಲ್ಲಿ ಏನೂ ಮಾಡಿದ ಹಾಗೆ ಆಗುವುದಿಲ್ಲ ಎನ್ನುತ್ತಾರೆ.

ನಾವು ಕಲಿಯುವ ಟೂಲ್ಸ್ ಬಗೆಗೆ, ಮೆತೆಡ್ಸ್ ಬಗೆಗೆ, ಮೆತಡಾಲಜಿ ಬಗೆಗೆ ಹೊಸ ಚಿಂತನೆಗಳನ್ನು ಮೊದಲು ಮಾಡಬೇಕು ಎನ್ನುವ ಶ್ರೀಮತಿಯವರು, ನಾವು ಕಲಿಸುತ್ತಿರುವುದು ಏನು ಅನ್ನುವಾಗ, ಯಾವ ಟೂಲ್ಸನ್ನು ಬಳಸಬೇಕು ಅನ್ನುವಾಗ ಸಾಹಿತ್ಯ ಅನ್ನುವುದು ಒಂದು ಮಾಡೆಲ್ ಅಷ್ಟೆ. ಅದನ್ನು ನಿರಾಕರಿಸಬೇಕಾದ ಸಂಗತಿ ಇಲ್ಲ. ಆದರೆ ಆ ಮಾಡೆಲ್ ಮಾತ್ರವೇ ಉಳಿದುಕೊಂಡುಬಿಟ್ಟಾಗ ಸಮಸ್ಯೆ ಉಂಟಾಗುತ್ತದೆ ಎಂದು ಎಚ್ಚರಿಸುತ್ತಾರೆ.

ಆದ್ದರಿಂದಾಗಿ, ಭಾಶೆಯಲ್ಲಿ ಎಷ್ಟು ವೈವಿಧ್ಯಗಳಿವೆಯೋ, ಎಷ್ಟು ಮಾಡೆಲ್ಸ್ ಸಿಗುತ್ತೋ, ಎಷ್ಟು ಸ್ಯಾಂಪಲ್ಸ್ ಸಿಗುತ್ತೋ, ಅಷ್ಟನ್ನೂ ಕೂಡ ಒಳಗೊಳ್ಳುವಂತಹ ಒಂದು ಸಿಲೆಬಸ್ಸು, ಟೀಚಿಂಗ್ ಮೆತೆಡ್ಸ್‌ಅನ್ನು ರೂಪಿಸಬೇಕಾದರೆ ಇದೆಲ್ಲವನ್ನು ಒಳಗೊಳ್ಳುವಂತಹ ಒಂದು ಮೆತಡಾಲಜಿಯನ್ನೂ ರೂಪಿಸಿಕೊಳ್ಳಬೇಕಾಗುತ್ತದೆ ಎಂಬ ಸಲಹೆಯನ್ನು ಮುಂದಿಡುತ್ತಾರೆ.

ಬಿಕಾಂಗೆ ಬೇರೆ ಪಠ್ಯ ಇರಬೇಕು, ಬಿಎಗೆ ಬೇರೆ ಪಠ್ಯ ಇರಬೇಕು ಎನ್ನುವುದು ವಿಪರ್ಯಾಸವಾಗುತ್ತದೆ ಎನ್ನುವ ಶ್ರೀಮತಿಯವರು, ಟೀಚರ್ಸ್‌ಗೆ ವರ್ಕಿಂಗ್ ಹವರ್ ಕಡಿಮೆಯಾಗುತ್ತೆ ಅನ್ನುವ ಒಂದು ವ್ಯವಹಾರ ಬಿಟ್ರೆ ಅದಕ್ಕೆ ಬೇರೆ ಕಾರಣವೇ ಕಾಣುವುದಿಲ್ಲ ಎಂದು ಅಭಿಪ್ರಾಯ ಪಡುತ್ತಾರೆ.

ಡಿಗ್ರಿ ಲೆವೆಲ್‌ನಲ್ಲಿ ಎಕ್ಸ್‌ಪ್ರೆಶನ್ ಕುರಿತು ಕಲಿಸುತ್ತಿರುವಾಗ, ವ್ಯವಹಾರಿಕ ಕನ್ನಡವನ್ನು, ಕ್ರಿಯೆಟೀವ್ ಲಾಂಗ್ವೇಜನ್ನು, ಟೆಕ್ನಿಕಲ್ ಲಾಂಗ್ವೇಜನ್ನು, ಅನುವಾದ ಮಾಡುವುದು ಮೊದಲಾದವನ್ನು ಪ್ರಯೋಜನದ ದೃಶ್ಟಿಯಿಂದ ಗುರುತಿಸಿಕೊಂಡು ಕಲಿಸಬೇಕಾಗುತ್ತದೆ. ಕನ್ನಡ ಇಶ್ಟು ದಿನ ಕಲಿತಿದ್ದೀನಿ ಅಂದ್ರೆ ಕನ್ನಡದಲ್ಲಿ ಏನೇ ಓದಿದ್ರು ನನಗೆ ಅರ್ಥವಾಗುತ್ತದೆ, ಏನು ಅರ್ಥವಾಯಿತೊ ಅದನ್ನು ಬರೆಯುವಂತೆ, ಹೇಳುವಂತೆ ಆಗಬೇಕು ಎಂದು ಕಲಿಕೆಯ ಸಾಧ್ಯತೆಗಳನ್ನು ಗುರುತಿಸುತ್ತಾರೆ.

ಈ ಬಗೆಯಲ್ಲಿ ವಿದ್ಯಾರ್ಥಿಗೆ ಲಾಂಗ್ವೇಜ್ ಸ್ಕಿಲ್ಸ್ ಒದಗಿಸದೇ ಹೋದರೆ ಕನ್ನಡ ಕಲಿಕೆ ಪ್ರಯೋಜನವಾಗುವುದಿಲ್ಲ ಎನ್ನುವ ಇವರು, ಇದರೊಂದಿಗೆ ಕಲಿಸುವವರಿಗೆ ಇಂಡಿವಿಶುಯಲ್ ಎಫರ್ಟ್ ಅಂತ ಅನ್ನುವುದು, ಇಂಡಿವಿಶುಯಲ್ ಟೂಲ್ ಅಂತ ಅನ್ನುವುದು, ಕಮಿಟ್‌ಮೆಂಟ್ ಅನ್ನುವುದು, ಡೆಡಿಕೇಶನ್ ಅನ್ನೋದು ಬೇಕಾಗಿರುವಂತದೇ ಆಗಿದ್ದು, ಅದು ಟೀಚಿಂಗ್ ಪ್ರೊಫೆಶನ್‌ಗೆ ವಿಶೇಶ ಏನಲ್ಲಾ ಎಂದು ಗುರುತಿಸಿ, ಈ ದೃಶ್ಟಿಯಲ್ಲಿ ಸಿಲೆಬಸ್ಸು, ಪಠ್ಯ ಪುಸ್ತಕಗಳು ಇಟ್ ಶುಡ್ ಗೀವ್ ಸಮ್ ಗೈಡ್‌ಲೈನ್ಸ್ ಮತ್ತು ಸಮ್ ಡೈರೆಕ್ಟೀವ್ಸ್ ಎನ್ನುತ್ತಾರೆ.

ಮೌಲ್ಯ ಮಾಪನ ಮಾಡುವವರು ಯಾರು, ಕಲಿಸುವವರು ಯಾರು, ಟೆಕ್ಸ್ಟ್ ಯಾವುದು ಎಂಬುದನ್ನು ಸರಿಯಾಗಿ ಕೊಲಾಬ್ರೇಟ್ ಮಾಡಲಿಕ್ಕೆ ಆಗದಿದ್ರೆ ಅವೆಲ್ಲಾ ಪ್ರತ್ಯೇಕವಾದಂತಹ ಸಂಗತಿಗಳು ಅನಿಸಿಬಿಡುತ್ತವೆ. ಈ ಎಲ್ಲಾ ಆಯಾಮಗಳನ್ನು ಹೇಗೆ ಸೇರಿಸಿಕೊಳ್ಳಬೇಕು ಅನ್ನುವುದೇ ಐಡಿಯಾಲಜಿ. ಅಗೈನ್ ಇದು, ಎ ರಿಸರ್ಚ್ ಫಾರ್ ಸರ್ಚಿಂಗ್ ಫಾರ್ ಮೆತೆಡ್ಸ್ ಎಂದು ಹೇಳುತ್ತಾ, ಅಂದುಕೊಂಡಿದ್ದನ್ನ ಸುಮ್ಮನೆ ಹಾಗೇ ಸೇರಿಸಿದಾಗ ಪ್ರತ್ಯೇಕವಾಗಿ ಉಳಿದುಕೊಂಡುಬಿಡುವ ಸಾಧ್ಯತೆ ಇದೆ ಎನ್ನುತ್ತಾರೆ.

ಈ ಹಿನ್ನೆಲೆಯಲ್ಲಿ, ಒಂದು ಪ್ರಾದೇಶಿಕತೆ ವಿಚಾರ, ವಿವಿಧ ಸಮುದಾಯಗಳ ಸಾಂಸ್ಕೃತಿಕ ಸಂಗತಿಗಳು, ಜೆಂಡರ್ ಇಸ್ಯೂಸ್, ಕ್ಲಾಸ್ ಇಸ್ಯೂಸ್, ಯಾವುದೇ ಆದರೂ ಅದರೊಳಗಡೆ ಹೇಗೆ ಇನ್‌ಕ್ಲೂಡ್ ಆಗಬೇಕೆನ್ನುವುದು ಬಹಳ ಮುಖ್ಯವಾಗುತ್ತದೆ. ಭಾಶೆಗೆ ಸಾಮಾಜಿಕ ಜವಾಬ್ದಾರಿಗಳು ಇರುವುದರಿಂದ ಅದನ್ನು ಕಲಿಯುವ ಸಿಸ್ಟಮ್‌ನಲ್ಲಿ ಈ ಜವಾಬ್ದಾರಿಗಳು ಒಳಗೊಳ್ಳಲೇಬೇಕಾಗುತ್ತದೆ. ಇದೆಲ್ಲವನ್ನು ನಾವು ಬಿಡಿ ಬಿಡಿ ಪಠ್ಯದ ತುಣುಕುಗಳಾಗಿ ಸೇರಿಸಲು ಬರುವುದಿಲ್ಲ. ಮೊದಲು ಟೀಚರ್ಸ್‌ಗೆ, ಇಂಥ ಸಿಲೆಬಸ್‌ಗೆ ಸಂಬಂಧಿಸಿದಂತೆ ಒಂದು ಟೋಟಲ್ ಐಡಿಯಾಲಜಿಯನ್ನು ಒದಗಿಸಬೇಕಾಗುತ್ತದೆ ಎಂದು ಪಠ್ಯಕ್ರಮದ ಹೊಣೆಗಾರಿಕೆಯನ್ನು ಗುರುತಿಸಿ ಹೇಳುತ್ತಾರೆ.

ಡಿಗ್ರಿ ಮುಗಿಸಿ ಹೊರಗಡೆ ಬಂದ ಮಕ್ಕಳಿಗೆ ಅವರ ಸಬ್ಜೆಕ್ಟ್ ಏನಾದರೂ ಇರಲಿ, ಅವರಿಗೆ ಏನು ಓದುತ್ತಿದ್ದರೂನು ಕನ್ನಡದಲ್ಲಿ ಗ್ರಹಿಸುವುದಕ್ಕೆ ಅಥವಾ ಗ್ರಹಿಸಿದ್ದನ್ನ ಕನ್ನಡದಲ್ಲಿ ಹೇಳುವುದಕ್ಕೆ ಆಗಬೇಕು ಎನ್ನುವುದನ್ನು ಸ್ಪಶ್ಟವಾಗಿ ಗುರುತಿಸುವ ಮೂಲಕ ಕನ್ನಡ ಕಲಿಕೆಯೆನ್ನುವುದನ್ನು ಜಾಬ್ ಆಪರ್ಚುನಿಟೀಸ್ ಮತ್ತು ಬದುಕು ನಡೆಸುವಂತಹ ಮಾರ್ಗಗಳಲ್ಲಿ ಹೆಲ್ಪಿಂಗ್ ಟೂಲಾಗಿ ಕೂಡಾ ಇರುವ ಹಾಗೆ ಸ್ಟ್ರಾಂಗ್ ಮಾಡಬೇಕಾಗಿದೆ. ಹೊಸ ಆಪರ್ಚುನಿಟೀಸ್, ಹೊಸ ಅಗತ್ಯಗಳು, ಹೊಸ ತುರ್ತುಗಳೇನಿವೆ ಅವುಗಳಿಗೆ ಸ್ಕಿಲ್ಲನ್ನು ಒದಗಿಸುವ ಕೆಲಸವನ್ನ ಮಾಡಬೇಕು ಎನ್ನುತ್ತಾರೆ.

ಟೆಕ್ನಾಲಜಿಯ ಒಳಗಡೆ ಕನ್ನಡ ಲಾಂಗ್ವೇಜ್‌ನ ಬಳಕೆ ಸಾಧ್ಯವೇ ಇಲ್ಲ ಅನ್ನುವ ಒಂದು ಹಂತದಿಂದ ಸಾಧ್ಯ ಅನ್ನುವಂತಹ ಪ್ರಯೋಗಗಳಿಗೆ ತಿರುಗಿದ್ದನ್ನು ಪ್ರಸ್ತಾಪಿಸುತ್ತಾ, ಹೀಗೆ ಸಾಧ್ಯ ಅನ್ನುವಂತಹ ಮತ್ತು ಅದು ತನಗೂ ಇಂಪಾರ್ಟೆಂಟ್ ಅಂತ ಆಗದೆ ಇದ್ದಾಗ ಜನ ಅದನ್ನ ದೂರ ಮಾಡಿಬಿಡುತ್ತಾರೆ. ಮುಖ್ಯವಾಗಿ ನೆಕ್ಸ್ಟ್ ಜನರೇಶನ್ ದೂರ ಮಾಡುತ್ತಾರೆ. ಆದ್ದರಿಂದಾಗಿ, ಕನ್ನಡ

ಕಲಿಕೆಯೆನ್ನುವುದನ್ನು ಒಂದು ಆದರ್ಶ, ಎಮೋಶನಲ್ ಆದಂತಹ ಸಂಗತಿಗಳನ್ನು ಇಟ್ಟುಕೊಂಡು ಮಾಡುವುದಕ್ಕಾಗುವುದಿಲ್ಲ.

ಹೊಸ ಅಗತ್ಯಗಳಿಗೆ ಹೊಸ ಸಂದರ್ಭಗಳಿಗೆ ಕನ್ನಡ ಬಳಸುವುದು ಗೊತ್ತು, ಸಂದರ್ಭವಿದ್ದಾಗ ನಾನು ಅದರ ಹಲವು ಸ್ವರೂಪಗಳನ್ನು ಹಲವು ಆಕಾರಗಳನ್ನು ಬಳಸಬಲ್ಲೇ ಅನ್ನುವ ಕಾನ್ಫಿಡೆನ್ಸ್ ಬರಬೇಕು ಅನ್ನುವಂತೆ ಕಲಿಕೆಯನ್ನು ಯೋಜಿಸಬೇಕಾಗುತ್ತದೆ ಎಂದು ಕನ್ನಡ ಕಲಿಕೆಯಲ್ಲಿನ ಒಟ್ಟು ಹೊಣೆಗಾರಿಕೆಯ ದಾರಿಗಳನ್ನು ಗುರುತಿಸುತ್ತಾ, ಲಾಂಗ್ವೇಜ್ ಬೇಡ ಅಂತ ಹೇಳಿದ್ರೆ ನಾವು ಜ್ಞಾನಕ್ಕೆ ಅಕ್ಸೇಸ್ ಆಗೋದಿಕ್ಕೆ ಇರುವಂತಹ ಒಂದೇ ಕೊಂಡಿಯನ್ನ ಕಟ್ ಆಫ್ ಮಾಡಬೇಕಾಗುತ್ತದೆ ಎಂಬ ಸಲಹೆಗಳನ್ನು ಮುಂದಿಡುತ್ತಾರೆ.

**ಡಾ. ಎಂ.ಎಂ. ಕಲಬುರ್ಗಿ;**

ಸ್ಟ್ಯಾಟಿಕ್ ಆದ ವಿದ್ವತ್ತೇ ನಮ್ಮ ಯೂನಿವರ್ಸಿಟಿಗಳ ಕನ್ನಡ ಕಲಿಕೆಯನ್ನು ಆಳುತ್ತಾ ಬಂದಿದೆ ಎಂದು ಗುರುತಿಸುವ ಕಲಬುರ್ಗಿಯವರು ಕನ್ನಡ ಕಲಿಕೆಯ ಪ್ರಕ್ರಿಯೆಯನ್ನು ಒಂದು ರೂಪಕದಲ್ಲಿ ವಿವರಿಸುತ್ತಾರೆ. ಮಾತಿನ ಎರಡು ರೀತಿಗಳನ್ನು-ಚಂದಾಗಿ ಮಾತಾಡೋದು, ಸರಿಯಾಗಿ ಮಾತಾಡೋದು-ಪ್ರಸ್ತಾಪಿಸುತ್ತಾ ಚಂದಾಗಿ ಮಾತಾಡೋದು ಬ್ಯಾರೆ, ಸರಿಯಾಗಿ ಮಾತಾಡೋದು ಬ್ಯಾರೆ. ಇಟ್ಟಂಗಿ ಚನ್ನಾಗಿರ್ತವ ಅಂದ್ರ ಮನಿ ಚಂದ ಬರ್ತದ ಅಂತ ತಿಳಿಯೋದು ಸರಿಯಲ್ಲ. ಇಟ್ಟಂಗಿ ಚನ್ನಾಗಿದೆ ಅಂದ್ರ ಇಟ್ಟಂಗಿ ಚನ್ನಾಗಿದೆ ಅಷ್ಟೆ. ಮನೆಯಾಗ್ಬೇಕಾದ್ರ ಅದಕ್ಕೊಂದು ರಚನಾ ವಿಧಾನ ಅದ, ಅದಕ್ಕ ಅದರದಾ ಆದ ಕ್ರಿಯಾಶೀಲತೆ ಬೇಕಾಗ್ತದ. ಈ ರಚನಾ ವಿಧಾನ ಗೊತ್ತಿಲ್ಲದೆ ಎಂಥ ಚಂದ ಇಟ್ಟಂಗಿ ಕೊಟ್ರು ಮಾಡೋಕ್ಬರೋದಿಲ್ಲ ಅವಗ. ಇಟ್ಟಂಗಿ ಹೆಂಗ್ ಬಳಸ್ಬೇಕು ಅನ್ನೋದಕ್ಕು ಒಂದು ತಿಳುವಳಿಕೆ ಅದ. ಶಿಕ್ಷಣ ಅನ್ನೋದು ಹಂಗೇನೆ. ಅದಕ್ಕ, ನಾವು ಹ್ಯಾಂಗೆ ಅಂದ್ರ ವೈಯುಕ್ತಿಕವಾಗಿ ಸಬಲರು, ಸಾಮಾಜಿಕವಾಗಿ ದುರ್ಬಲರು. ಇಟ್ಟಂಗಿ ಚಲೋ ಅದಾವ, ಮನಿ ದುರ್ಬಲ ಆಗ್ಯದ ಎಂದು ಕನ್ನಡ ಕಲಿಕೆಯಲ್ಲಿನ ತೊಡಕು ಮತ್ತು ಸಾಧ್ಯತೆಗಳನ್ನು ಗುರುತಿಸುತ್ತಾರೆ.

ಪಠ್ಯ ಅನ್ನೋದೆ ಭಾಶೆ ಮತ್ತು ವಿಶಯ ಎಂದು ಗುರುತಿಸಿಕೊಳ್ಳುವ ಕಲಬುರ್ಗಿ ಇವೆರಡೂ ಕಲಿಕೆಯಲ್ಲಿ ಮುಖ್ಯವಾದಂತ ಘಟಕಗಳು. ಪಠ್ಯ ರೂಪಿಸುವಾಗ ಇವೆರಡರ ಬಗ್ಗೆಯೂ ನಾವು ಗಮನ ಕೊಡಬೇಕಾಗುತ್ತದೆ. ಭಾಶೆಯ ಸೃಜನಶೀಲ ನೆಲೆಯ ಕುರಿತು ದೃಶ್ಟಿಯಿರಬೇಕಾಗುತ್ತದೆ ಎನ್ನುತ್ತಾರೆ. ಕ್ರಿಯಾಶೀಲತೆಯೇ ಸೃಜನಶೀಲತೆ ಎನ್ನುತ್ತಾ, ಒಬ್ಬ ಕವಿ ಸೃಜನಶೀಲವಾಗಿ

ಬರೆಯುವ ಉದ್ಯೋಗದಲ್ಲಿ ತೊಡಗದೆ ಹೋದರೆ ಆ ಸೃಜನಶೀಲತೆಗೆ ಶಾರ್ಪ್‌ನೆಸ್ ಬರುವುದಿಲ್ಲ. ಹಾಗೆಯೇ ನಾವು ಭಾಗಿಯಾಗುವ ಎಲ್ಲಾ ಕ್ಷೇತ್ರದಲ್ಲು ಹೆಚ್ಚು ಕ್ರಿಯಾಶೀಲವಾದಶ್ಟು ಸೃಜನಶೀಲತೆ ಬೆಳೆಯುತ್ತಾ ಹೋಗುತ್ತದೆ ಎಂದು ಕನ್ನಡ ಕಲಿಕೆಯ ವಿದ್ಯಮಾನ ಏನಾಗಬೇಕೆಂಬುದನ್ನು ಮುಂದಿಡಿತ್ತಾರೆ.

ಕನ್ನಡಭಾಶೆ ಕೇವಲ ಬೋಧನಾತ್ಮಕವಾಗಶ್ಟೇ ಇರಬಾರದು, ಕ್ರಿಯಾತ್ಮಕವಾಗಿರಬೇಕು. ಅದಕ್ಕಾಗಿ ಭಾಶೆಯೊಳಗಿರುವ ಫಂಕ್ಶನಲ್ ಕ್ವಾಲಿಟಿಯನ್ನು ಕಲಿಕೆಯಲ್ಲಿ ತರೋದು ಬಹಳ ಮುಖ್ಯ. ಅಂತಾ ಭಾಶೆಯನ್ನು ಪಠ್ಯಕ್ರಮಗಳಲ್ಲಿ ಬಳಸಿದರೆ ಅದು ಮೋಟಿವೇಟ್ ಮಾಡುತ್ತದೆ. ಅದರಿಂದಾಗಿ ಭಿನ್ನ ಜ್ಞಾನಕ್ಷೇತ್ರಗಳಲ್ಲಿ ಬಳಕೆ ಮಾಡುವಂತ ಭಾಶಿಕ ರೀತಿಗಳನ್ನು ನಾವು ಕಲಿಸಬೇಕಾಗುತ್ತದೆ ಎನ್ನುತ್ತಾರೆ.

ಈ ದೃಶ್ಟಿಯಿಂದ, ನಿತ್ಯ ವ್ಯವಹಾರದಕ್ಕೆ ಬಳಸುವ ಭಾಶೆ ಬ್ಯಾರೆ, ಜ್ಞಾನಕ್ಷೇತ್ರಗಳಿಗೆ ಅಳವಡಿಸಿಕೊಳ್ಳುವ ಭಾಶೆ ಬ್ಯಾರೆಯೇ ಆಗುತ್ತದೆ. ಕಲಿಕೆಯಲ್ಲಿ ಹೀಗೆ ಬಳಸುವ ರೀತಿಗಳನ್ನು ಕಲಿಯಬೇಕಾಗುತ್ತದೆ. ಹೀಗಾಗಿ, ಈ ಮೂಲಕ ಭಿನ್ನ ಸಾಮಾಜಿಕ ಸಂದರ್ಭಗಳನ್ನು ನಿರ್ವಹಿಸಿಕೊಳ್ಳುವ ಭಾಶಾ ಪಟ್ಟುಗಳನ್ನು ಕಲಿಸಬಹುದಾಗಿದೆ ಎಂದು ತಮ್ಮ ಅಭಿಮತವನ್ನು ವ್ಯಕ್ತಪಡಿಸುತ್ತಾರೆ.

ಈ ಹಿನ್ನೆಲೆಯಲ್ಲಿ ಮಾತೃಭಾಶೆ ಸಹ ರೀಡಿಫೈನ್ ಆಗಬೇಕು ಎನ್ನುವ ಕಲಬುರ್ಗಿಯವರು, ಸಮಾಜದೊಳಗೆ ಜಾರಿಯಲ್ಲಿರುವ ಕನ್ನಡ, ನಾವು ಬದುಕುವ ಕನ್ನಡ ಮತ್ತು ಕಲಿಸುವ ಕನ್ನಡಗಳು ಬೇರೆ ಬೇರೆಯಾಗಿದೆ. ಅದಕ್ಕಾಗಿ ಬದುಕುವ ಕನ್ನಡವನ್ನೇ ಕಲಿಯುವ ಕನ್ನಡ ಪದ್ದತಿಯಾಗಿ ಜಾರಿಗೆ ತರಬೇಕು. ಪಠ್ಯಭಾಶೆ ತರುವಾಗ ಆಡುಭಾಶೆ ಮತ್ತು ಗ್ರಾಂಥಿಕ/ಲಿಖಿತ ಭಾಶೆಯ ಅಂತರ ಕಡಿಮೆ ಆಗಬೇಕು ಎಂದು ವಿವರಿಸುತ್ತಾ, ಇದು ಮೊದಮೊದಲು ಸ್ವಲ್ಪ ಡಿಫಿಕಲ್ಟ್ ಅನ್ನಿಸಬಹುದು ಕ್ರಮೇಣ ಸರಿಹೋಗುತ್ತದೆ. ಈ ಮೂಲಕ ಗ್ರಂಥಸ್ಥ ಮತ್ತು ಕಂಠಸ್ಥ ಭಾಶೆಗಳ ಅಂತರ ಕಡಿಮೆ ಆಗುವಂತೆ ಮಾಡಬೇಕು. ಇದನ್ನೇ ನಮ್ಮ ಪಠ್ಯಗಳು ಮುಖ್ಯ ಮಾಡಿಕೊಳ್ಳಬೇಕು. ಭಾಶೆಯ ಕ್ರಿಯಾತ್ಮಕತೆ ಮಾತ್ರ ಪಠ್ಯದೊಳಗಿರಬೇಕು. ಏನು ಕಲಿಯಬೇಕು ಎನ್ನುವುದನ್ನ ಅಲ್ಲೇ ಕ್ರಿಯಾಶೀಲಗೊಳಿಸಬೇಕು. ಬರವಣಿಗೆ ಅನ್ನುವುದೊಂದಿರುತ್ತದೆ ನಿಜ. ಆದರೆ ಅದಕ್ಕೆ ಶಕ್ತಿ ಇರೋದು ಸಾಮಾಜಿಕ ಪರಿಸರದಲ್ಲಿರುವ ಭಾಶೆಯಲ್ಲಿ ಎನ್ನುತ್ತಾರೆ. ಆ ಮೂಲಕ

ಪ್ರಸ್ತುತವಾದ ಭಾಷೆಯ ಕಲಿಕೆಯ ಕಡೆಗೆ ಕಲಿಕಾರ್ಥಿಯನ್ನು ಮೋಟಿವೇಟ್ ಮಾಡಬೇಕು ಎಂದು ಸಲಹೆ ಕೊಡುತ್ತಾರೆ.

ಭಾಶೆಯ ವ್ಯಾಕರಣ ಬೇರೆ, ಭಾಶೆಯ ಶೈಲಿ ಬೇರೆ ಎಂದು ಗುರುತಿಸುತ್ತಾ ಸೃಜನಶೀಲವಾದ ಕೌಶಲದ ನೆಲೆಗಳನ್ನು ಭಾಶೆಯ ಕಲಿಕೆಯಲ್ಲಿ ತಿಳಿಸಿಕೊಡಬೇಕಾಗುತ್ತದೆ ಎನ್ನುತ್ತಾರೆ. ಎಲ್ಲಿಯವರೆಗೆ ನಾವು ಈ ವಿಚಾರಗಳ ಮೂಲಕ ಪಠ್ಯಗಳನ್ನು ರೂಪಿಸುವುದಿಲ್ಲ, ಅಲ್ಲಿನ ಭಾಶೆಯನ್ನು ಬಳಸುವುದಿಲ್ಲ, ವಿಶಯಗಳನ್ನ ತರುವುದಿಲ್ಲ ಅಲ್ಲಿಯವರೆಗೂ ಪಠ್ಯಗಳು ಬರೀ ಗಿಳಿ ಪಾಠವನ್ನು ಹೇಳಿಕೊಡುತ್ತವೆ ಎನ್ನುತ್ತಾರೆ.

ಕಲಬುರ್ಗಿಯವರು, ಈ ದೃಶ್ಟಿಯಿಂದ ಸ್ಟೇಟ್‌ನ ಪಾಲಿಸಿ ಮ್ಯಾಟರ್ ಗಳು, ಶಿಕ್ಶಕ, ಪಠ್ಯ ಈ ಮೂರೂ ಅಂಶಗಳು ಕನ್ನಡ ಭಾಶಿಕ ಸಮಾಜವನ್ನು ಕೇಂದ್ರೀಕರಿಸಿಕೊಳ್ಳಬೇಕು ಎಂದು ಅಭಿಪ್ರಾಯ ಪಡುತ್ತಾರೆ.

**ಡಾ. ಕೆ.ವಿ. ನಾರಾಯಣ;**

ಕನ್ನಡ ಭಾಶೆಯ ಚರಿತ್ರೆಯಲ್ಲಿ ಆಡು ಮಾತನ್ನು ಬರಹದ ಭಾಶೆಗಿಂತ ಬಹುದೂರ ಇರಿಸುವ ಪ್ರಯತ್ನಗಳು ನಡೆದಿಲ್ಲ. ಈಗ ಮಾತ್ರ ನಾವು ಶುದ್ಧತೆಯ ಬೆನ್ನು ಹತ್ತಿದ್ದೇವೆ. ಮಾತಿಗೆ ಹತ್ತಿರವಾದ ರೂಪಗಳನ್ನು ಜನ ಸುಲಭವಾಗಿ ಗ್ರಹಿಸುತ್ತಾರೆ. ಆದ್ದರಿಂದ ಕನ್ನಡ ಭಾಶೆಯ ಬರವಣಿಗೆಯನ್ನು ಪ್ರಜಾಪ್ರಭುತ್ವದ ನೆಲೆಗಟ್ಟು ಭದ್ರವಾಗುವ ದೃಶ್ಟಿಯಿಂದ ಬಳಸಿಕೊಳ್ಳಬೇಕಾಗಿದೆ ಎನ್ನುತ್ತಾ ಭಾಶಾ ಕೌಶಲದ ನಿಜವಾದ ಪರೀಕ್ಶೆ ಇರುವುದು ಬಳಕೆಯಲ್ಲಿ ಎಂದು ಕೆ.ವಿ.ಎನ್ ಭಾಶಾ ಕಲಿಕೆಯ ಪ್ರಯೋಜನದ ನೆಲೆಯನ್ನು ಗುರುತಿಸಿ ಹೇಳುತ್ತಾರೆ.

ವಿಶಯ ಪ್ರೌಡಿಮೆ ಮತ್ತು ಭಾಶಾ ಪ್ರೌಡಿಮೆಗಳು ಬೇರೆ ಬೇರೆಯಾಗಿದೆ ಎನ್ನುವ ತಿಳುವಳಿಕೆ ಕನ್ನಡವನ್ನು ಒಂದು ಭಾಶೆಯಾಗಿ ಕಲಿಸುವ ನಿರ್ಧಾರದ ಹಿಂದೆ ಇರಬೇಕಾಗುತ್ತದೆ ಎನ್ನುತ್ತಾ, ಕನ್ನಡ ಭಾಶೆ ಇಪ್ಪತ್ತೊಂದನೆಯ ಶತಮಾನದ ಬದಲಾದ ಸಂದರ್ಬಕ್ಕೆ ಸಿದ್ದಗೊಳ್ಳದಿರುವುದಕ್ಕೆ ಸಮಸ್ಯೆಯಿರುವುದು ಭಾಶೆಯಲ್ಲಲ್ಲ, ಬದಲಾಗಿ ಭಾಶೆಯ ಸಾಮರ್ಥ್ಯ ಮತ್ತು ಸಾಧ್ಯತೆಗಳನ್ನು ಗ್ರಹಿಸದ ನಮ್ಮ ಸ್ಥಿತಿಯಲ್ಲಿ ಎಂದು ನಮ್ಮ ಕಲಿಕೆಯಲ್ಲಿರುವ ಹೊಣೆಗಾರಿಕೆಯ ಸಮಸ್ಯೆಯನ್ನು ಗುರುತಿಸುತ್ತಾರೆ.

ಭೌಗೊಳಿಕ ಭಾಶಾ ಪ್ರಭೇದಗಳು, ಸಾಮಾಜಿಕ ಭಾಶಾ ಪ್ರಭೇದಗಳ ಅಸ್ತಿತ್ವವನ್ನು ಕುರಿತ ಚಿಂತನೆಯು ಈ ಸಂದರ್ಬದಲ್ಲಿ ಮುಖ್ಯವಾದುದು ಎನ್ನುವ ಕೆ.ವಿ.ಎನ್, ಈ ಪ್ರಭೇದಗಳನ್ನು

ಗ್ರಾಮ್ಯ, ಹರಕು ಮುರಕು, ಬಳಸಬಹುದಾದಷ್ಟು ಸಾಧ್ಯತೆಗಳಿಲ್ಲ ಎಂಬ ಮೌಲ್ಯಗಳಿಂದ ನಿರ್ಬಂಧಿಸಲಾಗಿದೆ. ಶಾಲಾ ಶಿಕ್ಷಣ, ಆಡಳಿತ ಮತ್ತು ಸಮೂಹ ಮಾಧ್ಯಮಗಳಿಂದ ದೂರ ಇಡಲಾಗಿದೆ. ಹೀಗೆ, ಕನ್ನಡ ಭಾಷಾ ಪ್ರಭೇದಗಳನ್ನು ದೂರ ಇಟ್ಟಿರುವುದರಿಂದ ಈ ಪ್ರಭೇದಗಳೊಟ್ಟಿಗೇ ಇರುವ ಜನರಲ್ಲಿ ಕೀಳರಿಮೆಯನ್ನು ಹುಟ್ಟುಹಾಕಿವೆ. ಆದ್ದರಿಂದಾಗಿ ಬರಹವಾಗಿಯೂ ಮಾತಾಗುವ ಮೂರನೆಯ ಬಗೆಯೊಂದನ್ನು ನಾವು ಯೋಚಿಸಬೇಕಾಗಿದೆ ಎನ್ನುತ್ತಾರೆ.

ಈ ಕಾರಣದಿಂದಾಗಿ ಕನ್ನಡ ಕಲಿಯುವ ಬಗೆಗಳು ಇಂದು ಬದಲಾಗುತ್ತಿವೆ. ಕಲಿಸಲು ಅನುಕೂಲವಾದ ಮಾದರಿಗಳನ್ನು ಹೊಸ ತಂತಜ್ಞಾನದ ಚೌಕಟ್ಟಿನಲ್ಲಿ ರೂಪಿಸಬೇಕಾಗಿದೆ. ಕಲಿಯುವವರ ಅಗತ್ಯ ಮತ್ತು ಪೂರ್ವ ಸಿದ್ಧತೆಗಳನ್ನು ಅವಲಂಬಿಸಿ ಕಲಿಕೆಯ ಸಾಮಗ್ರಿ ರೂಪುಗೊಳ್ಳಬೇಕಾಗಿದೆ. ಈ ಹಿಂದಿನಂತೆ ಏಕಭಾಷಿಕರ ಕಾಲ ಇಲ್ಲ. ಒಂದಕ್ಕಿಂತ ಹೆಚ್ಚು ಭಾಶೆಗಳನ್ನು ಬಳಸುವುದು ಅಗತ್ಯವಷ್ಟೆ ಅಲ್ಲ, ಅನಿವಾರ್ಯವೂ ಆಗುತ್ತಿದೆ. ಈ ಹಿನ್ನೆಲೆಯಲ್ಲಿ ಕನ್ನಡದ ಆತಂಕಗಳನ್ನು ಗ್ರಹಿಸಿ ಯೋಜಿತ ರೀತಿಯಲ್ಲಿ ನಿಭಾಯಿಸಿಕೊಳ್ಳಬೇಕು ಎಂದು ಪದವಿಯ ಕನ್ನಡ ಕಲಿಕೆಯಲ್ಲಿ ಆಗಬೇಕಾದ ಬದಲಾವಣೆಯ ಸ್ವರೂಪವನ್ನು ಮುಂದಿಡುತ್ತಾರೆ.

ಕನ್ನಡ ಎಲ್ಲಾ ಕಡೇನೂ ಹರಡಿಕೊಂಡಿರೋದ್ರಿಂದಾಗಿ ವಿದ್ಯಾರ್ಥಿಯ ಗ್ರಹಿಕೆ ಮತ್ತು ಅಭಿವ್ಯಕ್ತಿಯ ನೆಲೆಗಳನ್ನ ಒಂದು ರೀತಿಯಲ್ಲಿ ರೂಪಿಸ್ತಾ ಇರ್ತದೆ. ನಾವು ವಿದ್ಯಾರ್ಥಿಗಳಲ್ಲಿ ಭಾಶಿಕ ಸ್ಕಿಲ್ಸ್‌ಗಳು ಡೆವಲಪ್ ಆಗಿಲ್ಲ ಅಂತ ಮಾತಾಡುವಾಗಲೂ ಸಹ ಅವರು ಇತರೆ ವಿಶಯಾದಾರಿತ ಪತ್ರಿಕೆಗಳಲ್ಲಿ–ಉದಾ ಸೈನ್ಸಿನಲ್ಲಿ ಅಥವಾ ಸೋಸಿಯಲ್ ಸ್ಟಡೀಸ್ ಪೇಪರ್ರುಗಳಲ್ಲಿ–ಉತ್ತರಗಳನ್ನು ಬರಿಯ ಬಲ್ಲವರಾಗಿರ್ತಾರೆ ಅನ್ನುವುದನ್ನ ಮರೆತಿರುತ್ತೇವೆ. ಅಲ್ಲಿ ಕನ್ನಡವನ್ನ ಬರೀತಾರೆ ಅವರು. ಅದರೆ ಹಾಗೆ ಬರೆಯುವುದನ್ನ ಸ್ಕಿಲ್ಸ್ ಆಗಿ ಡೆವಲಪ್ ಮಾಡೋದನ್ನ ನಾವು ಯೋಚನೆ ಮಾಡಬೇಕು.

ಈ ಹಿನ್ನೆಲೆಯಲ್ಲಿ ಭಾಶೆಯನ್ನ ನಾವು ಯಾಕೆ ಪಾಠ ಮಾಡೋದು ಅನ್ನುವ ಪ್ರಶ್ನೆಯನ್ನು ಹಾಕಿಕೊಳ್ಳಬೇಕು. ಬದಲಾಗುತ್ತಿರುವ ವಿದ್ಯಮಾನಗಳಲ್ಲಿ ಇದರ ಕ್ರೈಸಿಸ್ ಹೆಚ್ಚಾಗಿದೆ ಎನ್ನುವುದನ್ನು ತಿಳಿಯಬೇಕಾಗಿದೆ.

ಇದರಿಂದಾಗಿ ನಾವು ತಿಳಿದುಕೊಂಡಶ್ಟು ಮೇಜರ್ ರೋಲನ್ನ ಸಾಹಿತ್ಯ ತೆಗೆದುಕೊಳ್ಳಕೂಡದು ಎನ್ನುತ್ತಾರೆ.

ಸಾಂಸ್ಕೃತಿಕ ನೆಲೆಯ ಎಕ್ಸ್‌ಪೋಶರ್ಗಳು ಹಲವು ಕಡೆಗಳಲ್ಲಿ ಆಗುತ್ತಿರುತ್ತವೆಯಾದ್ದರಿಂದ ಇದು ಸಾಹಿತ್ಯದ ಮೂಲಕ ತರಗತಿಗಳಲ್ಲಿ ಮಾತ್ರ ನಡೆಯುತ್ತದೆ ಎಂದು ತಿಳಿಯುವುದರಲ್ಲಿ ಅರ್ಥವಿಲ್ಲ. ಇಂದು ಲೋಕವನ್ನ ಪರ್ಸೀವ್ ಮಾಡೊ ಕ್ರಮಾನೆ ಪಲ್ಲಟ ಆಗಿರೋದ್ರಿಂದ ನಮ್ಮ ಎದುರಿನ ಸವಾಲುಗಳು ಬೇರೆಯೇ ಇವೆ. ಹೀಗಾಗಿ ಭಾಶೆಯ ಬೇರೆ ಬೇರೆ ಸಾಧ್ಯತೆಗಳಿವೆ ಎನ್ನುವತ್ತ ನಾವು ಯೋಚಿಸಬೇಕಾಗಿದೆ.

ಈ ದೃಶ್ಟಿಯಿಂದ ಪದವಿಯಲ್ಲಿ ಐಚ್ಚಿಕ ಕನ್ನಡ ಮತ್ತು ಕನ್ನಡ ಎನ್ನುವ ವ್ಯತ್ಯಾಸವನ್ನೆ ಕಿತ್ತಾಕಬೇಕಾಗುತ್ತದೆ. ಯಾಕೆಂದರೆ ಇವೆರಡರಲ್ಲಿ ಟೆಕ್ನಿಕಲೀ ಯಾವ ವ್ಯತ್ಯಾಸವೂ ಇಲ್ಲ ಎಂದು ಭಾಶೆ ಮತ್ತು ಸಾಹಿತ್ಯದ ಅಭ್ಯಾಸ ಕುರಿತ ಪಠ್ಯಕ್ರಮ, ಬೋಧನೆ ಮತ್ತು ಕಲಿಕೆಯಲ್ಲಿನ ಏಕರೂಪೀತನದ ಗೊಂದಲವನ್ನು ಪ್ರಸ್ತಾಪಿಸುತ್ತಾರೆ.

ಆ ಮೂಲಕ ಭಾಶೆ, ಸಾಹಿತ್ಯದ ಕಂಟೆಂಟ್ ಮತ್ತು ಅದರ ಕೌಶಲಗಳ ನೆಲೆಗಳನ್ನ ಒಟ್ಟಿಗೆ ಓಪನಪ್ ಮಾಡಬಹುದಾದ ಹೊಸ ಯೋಜನೆಯೊಂದನ್ನು ಮುಂಡಿಸುತ್ತಾರೆ.

ಮೂರು ವರ್ಶದ ಪದವಿಯಲ್ಲಿ-ಆರು ಸೆಮಿಸ್ಟರುಗಳ ಪ್ಯಾಕೇಜಿನಲ್ಲಿ ಇಶ್ಟು ಭಾಗದಶ್ಟು ಭಾಶೆಯ ಕಲಿಕೆಯನ್ನ ಕೋಶೆಂಟಾಗಿ ತೆಗೆದುಕೊಳ್ಳಬೇಕು, ಅದು ಭಾಶೆಯ ಹಲವು ಸಂಗತಿಗಳನ್ನೊಳಗೊಂಡ ಪಠ್ಯಕ್ರಮವಾಗಿರಬೇಕು ಎಂದು ಉದಾಹರಣೆಯಾಗಿ, ಬರವಣಿಗೆಯ-ಸ್ಕ್ರಿಪ್ಟ್ ರೈಟಿಂಗ್ ಕೌಶಲ, ಸಾಹಿತ್ಯದ ಕೌಶಲ, ಮಾತುಗಾರಿಕೆ-ಸಂಭಾಶಣೆಯ ಕೌಶಲ, ಕನ್ನಡ ಡೈಲೆಕ್ಟುಗಳ ಪರಿಚಯ, ಮಾಧ್ಯಮಗಳಿಗೆ ಬೇಕಾದ ಭಾಶಿಕ ಕೌಶಲ ಮೊದಲಾದ ಪಠ್ಯಕ್ರಮಗಳು ರೂಪುಗೊಳ್ಳಬೇಕು ಎನ್ನುತ್ತಾರೆ.

ಕನ್ನಡ ಬಳಕೆಯಲ್ಲಿ ಬೇಕಾದ ಇಂಥ ಕೌಶಲಗಳು ಈಗ ಇನ್ನೊಬ್ಬರ ಜೊತೆ ಕೆಲಸ ಮಾಡುವುದರಿಂದ ಕಲಿಯಲಾಗುತ್ತಿದೆ. ಕನ್ನಡ ಕಲಿಕೆಯ ಭಾಗವಾಗಿ ಇದನ್ನು ತರುವುದರಿಂದ ವಿದ್ಯಾರ್ಥಿಗಳಲ್ಲಿ ಕಾನ್ಫಿಡೆನ್ಸ್ ಹುಟ್ಟಿಸುವುದಕ್ಕೆ ಸಾಧ್ಯವಾಗುತ್ತದೆ ಎಂದು ಕಲಿಕೆಯ ಕುರಿತ ಖಚಿತ ನಿಲುವುಗಳ ಕಡೆಗೆ ಗಮನ ಸೆಳೆಯುತ್ತಾರೆ.

ಇದರಿಂದಾಗಿ, ಕಾಮರ್ಸಿನವರಿಗೆ, ಸೈನ್ಸಿನವರಿಗೆ, ಇತರರಿಗೆ ಬೇಕಾಗುವ ಕನ್ನಡ ಬೇರೆಯದು ಎನ್ನುವ ಪ್ರಶ್ನೆಯೇ ಬರುವುದಿಲ್ಲ. ಯಾವುದೇ ಕೋರ್ಸನ್ನು ಕಲಿತರೂ ಕನ್ನಡದ ಬೆಸಿಕ್ಕಾದ ಕೌಶಲಗಳು ಎಲ್ಲರಿಗೂ ಸಿಗುವಂತೆ ಯೋಜಿಸಬಹುದಾಗಿದೆ.

ಇದಕ್ಕಾಗಿ ನಾವು ಕನ್ನಡವನ್ನ ಆಫ಼ರ್ ಮಾಡ್ತಾ ಇರೊ ವಿಧಾನವನ್ನ ಬದಲಿಸಲು ಸಿದ್ಧವಾಗಬೇಕಾಗುತ್ತದೆ. ಅದನ್ನು ನಿರ್ವಹಿಸಲು ಸಿದ್ಧತೆಗಳನ್ನು ಮಾಡಿಕೊಳ್ಳಬೇಕಾಗುತ್ತದೆ ಎನ್ನುತ್ತಾರೆ.

ಈ ದೃಶ್ಟಿಯಿಂದ, ಮೊದಲು ಕನ್ನಡ ಅಧ್ಯಾಪಕರು ಹೊಸದಾಗಿ ಆಲೋಚನೆ ಮಾಡಲು ಸಿದ್ಧರಾಗಬೇಕಾಗಿದೆ. ಇದರಿಂದ ಕನ್ನಡ ಕಲಿಕೆ, ಬೋಧನೆಗಳ ಜಸ್ಟಿಫಿಕೇಶನ್ ಸಹ ಜೋರಾಗುತ್ತದೆ ಎಂದು ಹೇಳುವ ಕೆ.ವಿ.ಎನ್, ಬದಲಾಗುತ್ತಿರುವ ಸಂದರ್ಭಕ್ಕೆ ಅನುಗುಣವಾಗಿ ಹೀಗೆ ಭಾಶೆಯ ಕಲಿಕೆಯನ್ನು ಮರುಹೊಂದಾಣಿಕೆ ಮಾಡದೆ ಹೋದರೆ ಕೆಲವೆ ವರ್ಶಗಳಲ್ಲಿ ಕನ್ನಡ ಪದವಿ ತರಗತಿಗಳಿಂದ ಹೊರನೂಕಲ್ಪಡುತ್ತದೆ ಎನ್ನುತ್ತಾರೆ.

ಕನ್ನಡ ಮನೆ ಮಾತಾಗಿರುವವರು ಕನ್ನಡದ ಜಾಗದಲ್ಲಿ ಹಿಂದಿ ಅಥವಾ ಸಂಸ್ಕೃತವನ್ನು ಕಲಿಯುವುದರಿಂದ ಅವರು ಭಾಶಿಕವಾಗಿ ಅಂಗವಿಕಲರಾಗಿಯೇ-ಗೂಡಲ್ಲಿ ಹಾಕಿ ಸಾಕಿದ ಪಾರಿವಾಳದಂತೆ- ಉಳಿಯುವಂತಾಗುತ್ತದೆ. ಅಲ್ಲದೆ, ಕನ್ನಡ ಭಾಶೆಯ ಕಲಿಕೆಯಲ್ಲಿ ನೆನಪು-ಪಾರಂಪರಿಕ ಪಠ್ಯಕ್ರಮ ಕಟ್ಟಿಕೊಡುವ ನೆನಪು-ಅಶ್ಟು ಮುಖ್ಯವಲ್ಲ, ಭವಿಶ್ಯದ ಕುರಿತ ಯೋಜನೆ ಮುಖ್ಯ ಈಗ, ಅನ್ನುವುದನ್ನು ಮನವರಿಕೆ ಮಾಡಿಕೊಡಲು ಪ್ರಯತ್ನಿಸುತ್ತಾರೆ.

ಪ್ರಸ್ತುತ ಅಧ್ಯಯನದ ಒಟ್ಟು ಚರ್ಚೆ, ಪ್ರತಿಕ್ರಿಯೆ, ಸಲಹೆ, ಅಭಿಪ್ರಾಯಗಳ ಮೂಲಕ ಪದವಿ ಹಂತದ ಕನ್ನಡಭಾಶೆ ಕಲಿಕೆಯ ಕುರಿತಾಗಿ ಉತ್ಪನ್ನಗೊಂಡಿರುವ ಖಚಿತವಾದ ನಿಲುವುಗಳನ್ನು-ಫಲಿತಗಳನ್ನು- ಹೀಗೆ ಗುರುತಿಸಿಕೊಳ್ಳಬಹುದು;

- **ಮಾತು ಮತ್ತು ಬರವಣಿಗೆಯ ಕೌಶಲಗಳನ್ನು ಇವತ್ತಿನ ಸನ್ನಿವೇಶಗಳಿಗೆ ಅನುಗುಣವಾಗಿ ಮರುರೂಪಿಸಿಕೊಳ್ಳಬೇಕು.**
- **ಕಲಿಕಾರ್ಥಿ ಆರಿಸಿಕೊಳ್ಳುವ ವಿಶಯಗಳನ್ನು ತನ್ನ ಭಾಶೆಯಲ್ಲಿ ಗ್ರಹಿಸಲು, ಆಲೋಚಿಸಲು, ಬರೆಯಲು ಅಗತ್ಯವಾದ ಭಾಶೆಯ ಕೌಶಲಗಳನ್ನು ರೂಢಿಸುವ ಪಠ್ಯಗಳನ್ನು ರೂಪಿಸಬೇಕು.**
- **ಲೋಕದೃಷ್ಟಿಯನ್ನು ಬೆಳೆಸುವಂತೆ, ವರ್ತಮಾನ ಮತ್ತು ಭವಿಶ್ಯತ್ತಿನಲ್ಲಿ ಹೆಚ್ಚು ಸಾಂಸ್ಕೃತಿಕವಾಗಿ ಉಪಯುಕ್ತವಾಗುವಂತೆ(ಕನೆಕ್ಟಿಂಗ್ ಅನ್‌ಕನೆಕ್ಟೆಡ್)ಪಠ್ಯಗಳನ್ನು ಯೋಜಿಸಬೇಕು.**

- ಕಲಿಕಾರ್ಥಿಯು ಇವತ್ತಿನ ತಲ್ಲಣಗಳ ಜೊತೆ ಸಂಬಂಧವನ್ನು ಸ್ಥಾಪಿಸಿಕೊಳ್ಳುವುದಕ್ಕೆ ಸಾಧ್ಯವಾಗುವಂತ ಭಾಶಿಕ ಪಠ್ಯಗಳ ಯೋಜನೆಯಿರಬೇಕು.
- ಸಾಮಾಜಿಕ ಹೊಣೆಗಾರಿಕೆ ಎನ್ನುವುದು ಭಾಶಿಕವಾದ ಒಂದು ಸಂವಾದ ಎನ್ನುವುದನ್ನು ನಮ್ಮ ಪಠ್ಯಕ್ರಮಗಳು ನಿರ್ವಹಿಸಬೇಕು.
- ಕಲಿಕಾರ್ಥಿ ತನ್ನನ್ನು ಭಾಶಿಕವಾಗಿ ಗುರುತಿಸಿಕೊಳ್ಳುವಂತೆ ಹೊಸದೊಂದು ಐಡೆಂಟಿಟಿ-ಜೀವನಾನುಭವಗಳ ಪ್ರಜ್ನಾ ಜಗತ್ತು-ಪಠ್ಯಕ್ರಮಗಳ ಮೂಲಕ ಹುಟ್ಟಿಕೊಳ್ಳಬೇಕು.
- ಭವಿಶ್ಯದ ನಡಿಗೆಗಾಗಿ ಒಂದು ಹೊಸತನ್ನು ಕ್ರಿಯೇಟ್ ಮಾಡುವ ಹೊಳಹನ್ನು ಕೊಡುವ ಪಠ್ಯಕ್ರಮ ಇರಬೇಕು.
- ನಾನು ಪರಸ್ಪರಾವಲಂಬಿ, ನಿನ್ನೊಟ್ಟಿಗೆ ನಾನಿದ್ದೀನಿ, ನನ್ನೊಟ್ಟಿಗೆ ನೀನಿದ್ದಿ ಎನ್ನುವ ತಿಳುವಳಿಕೆಯನ್ನು ಕೊಡುವ, ಬಹುತ್ವಕ್ಕೆ ಬೇಕಾದ ತಾಕತ್ತನ್ನು ಒದಗಿಸುವ ಪಠ್ಯಗಳು ಬೇಕು.
- ಭಾಶೆ ಯಾವಾಗಲೂ ನಿರ್ಧಿಶ್ಟ ಆಗಿರುವಂತೆ, ಸಂದರ್ಭೀಕೃತ ಆಗಿರುವಂತೆ, ಕಾಲಬದ್ಧ ಆಗಿರುವಂತೆ- ತೀವ್ರವಾದ ಪಲ್ಲಟಗಳನ್ನ ಭಾಶಿಕವಾಗಿ ಅರಗಿಸಿಕೊಳ್ಳಲು ಸಾಧ್ಯವಾಗುವಂತೆ-ಪಠ್ಯಕ್ರಮಗಳನ್ನು ನಿರ್ವಹಿಸಬೇಕು.
- ಗ್ರಹಿಕೆ ಮತ್ತು ಅಭಿವ್ಯಕ್ತಿ ಮಾಡುವುದಕ್ಕೆ ಒಂದು ಸಲಕರಣೆಯಂತೆ-ಲಾಂಗ್ವೇಜ್ ಆ್ಯಸ್ ಟೂಲ್ ಆಫ್ ಎಕ್ಸ್‌ಪ್ರೆಶನ್-ಭಾಶೆ ಕಲಿಕೆಯ ಭಾಗವಾಗಬೇಕು.
- ಜ್ನಾನದ ಬೇರೆ ಬೇರೆ ವಲಯಗಳ ಗ್ರಹಿಕೆ ಮತ್ತು ಅಭಿವ್ಯಕ್ತಿಯಲ್ಲಿ ಭಾಶೆ ಒಂದು ಬಲವಾದಂತಹ ಸಾಧನವಾಗುವಂತೆ ಬೇರೆ ಬೇರೆ ಬಗೆಯ ಭಾಶೆಯ ಕಲಿಕೆಗೆ ಪಠ್ಯಗಳನ್ನು ಯೋಜಿಸಬೇಕು.
- ಕನ್ನಡ ಕಲಿಕೆಯೆನ್ನುವುದನ್ನು ಜಾಬ್ ಆಪರ್ಚುನಿಟೀಸ್ ಮತ್ತು ಬದುಕು ನಡೆಸುವಂತಹ ಮಾರ್ಗಗಳಲ್ಲಿ ಹೆಲ್ಪಿಂಗ್ ಟೂಲಾಗಿರುವಂತೆ- ಹೊಸ ಅವಕಾಶಗಳು, ಹೊಸ ಅಗತ್ಯಗಳು, ಹೊಸ ತುರ್ತುಗಳೇನಿವೆ ಅವುಗಳಿಗೆ ಸ್ಕಿಲ್ಲನ್ನು ಒದಗಿಸುವಂತೆ-ಯೋಜಿಸಬೇಕು.

- ಕನ್ನಡ ಬಳಸುವುದು ಗೊತ್ತು, ಸಂದರ್ಭವಿದ್ದಾಗ ನಾನು ಅದರ ಹಲವು ಸ್ವರೂಪಗಳನ್ನು, ಹಲವು ಆಕಾರಗಳನ್ನು ಬಳಸಬಲ್ಲೇ ಅನ್ನುವ ಕಾನ್ಫಿಡೆನ್ಸ್ ಬರುವಂತೆ ಕಲಿಕೆಯನ್ನು ಯೋಜಿಸಬೇಕು.
- ಪಠ್ಯ ಅನ್ನೋದೆ ಭಾಶೆ ಮತ್ತು ವಿಶಯ, ಪಠ್ಯ ರೂಪಿಸುವಾಗ ಇವೆರಡರ ಬಗ್ಗೆಯೂ ನಾವು ಗಮನ ಕೊಡಬೇಕು.
- ಕನ್ನಡಭಾಶೆ ಕೇವಲ ಬೋಧನಾತ್ಮಕವಾಗಶ್ಟೇ ಇರಬಾರದು, ಕ್ರಿಯಾತ್ಮಕವಾಗಿರಬೇಕು. ಅದಕ್ಕಾಗಿ ಭಾಶೆಯೊಳಗಿರುವ ಫಂಕ್ಶನಲ್ ಕ್ವಾಲಿಟಿಯನ್ನು ಕಲಿಕೆಯಲ್ಲಿ ತರೋದು ಬಹಳ ಮುಖ್ಯ.
- ಆಡುಭಾಶೆ ಮತ್ತು ಗ್ರಾಂಥಿಕ/ಲಿಖಿತ ಭಾಶೆಯ ಅಂತರ ಕಡಿಮೆ ಮಾಡುವಂತಹ ಬದುಕುವ ಕನ್ನಡವನ್ನೇ ಕಲಿಯುವ ಕನ್ನಡ ಪದ್ದತಿಯಾಗಿ ಜಾರಿಗೆ ತರಬೇಕು.
- ಭಾಶಾ ಕೌಶಲದ ನಿಜವಾದ ಪರೀಕ್ಶೆ ಇರುವುದು ಬಳಕೆಯಲ್ಲಿಯಾದ್ದರಿಂದ, ಕನ್ನಡ ಭಾಶೆಯ ಬರವಣಿಗೆಯನ್ನು ಪ್ರಜಾಪ್ರಭುತ್ವದ ನೆಲೆಗಟ್ಟು ಭದ್ರವಾಗುವ ದೃಶ್ಟಿಯಿಂದ ಬಳಸಿಕೊಳ್ಳಬೇಕು.
- ವಿಶಯ ಪ್ರೌಡಿಮೆ ಮತ್ತು ಭಾಶಾ ಪ್ರೌಡಿಮೆಗಳು ಬೇರೆ ಬೇರೆಯಾಗಿದೆ ಎನ್ನುವ ತಿಳುವಳಿಕೆ ಕನ್ನಡವನ್ನು ಒಂದು ಭಾಶೆಯಾಗಿ ಕಲಿಸುವ ನಿರ್ಧಾರದ ಹಿಂದೆ ಇರಬೇಕು.
- ಬದಲಾದ ಸಂದರ್ಭಕ್ಕೆ  ಕನ್ನಡ ಸಮಾಜ ಭಾಶಿಕವಾಗಿ ಸಿದ್ದಗೊಳ್ಳದಿರುವುದಕ್ಕೆ ಸಮಸ್ಯೆಯಿರುವುದು ಭಾಶೆಯಲ್ಲಲ್ಲ, ಬದಲಾಗಿ ಭಾಶೆಯ ಸಾಮರ್ಥ್ಯ ಮತ್ತು ಸಾಧ್ಯತೆಗಳನ್ನು ಗ್ರಹಿಸದ ನಮ್ಮ ಸ್ಥಿತಿಯಲ್ಲಿ. ಇದನ್ನು ಗಂಭೀರವಾಗಿ ಗಮನಿಸಿಕೊಳ್ಳಬೇಕು.
- ಪಠ್ಯಕ್ರಮವನ್ನು ರೂಪಿಸುವಾಗ, ಬರಹವಾಗಿಯೂ ಮಾತಾಗುವ ಮೂರನೆಯ ಬಗೆಯೊಂದನ್ನು ನಾವು ಯೋಚಿಸಬೇಕು.
- ಕಲಿಯುವವರ ಅಗತ್ಯ ಮತ್ತು ಪೂರ್ವ ಸಿದ್ಧತೆಗಳನ್ನು ಅವಲಂಬಿಸಿ, ಕಲಿಸಲು ಅನುಕೂಲವಾದ ಮಾದರಿಗಳನ್ನು ಹೊಸ ತಂತಜ್ಞಾನದ ಚೌಕಟ್ಟಿನಲ್ಲಿ ರೂಪಿಸಬೇಕು.

- ವಿಶಯಾಧಾರಿತ ಪತ್ರಿಕೆಗಳು ಒಂದು ರೀತಿಯಲ್ಲಿ ಗ್ರಹಿಕೆ ಮತ್ತು ಅಭಿವ್ಯಕ್ತಿಯ ಸಾಮರ್ಥ್ಯವನ್ನು ರೂಪಿಸುತ್ತಿರುವುದರಿಂದ ಅದಕ್ಕೆ ಬೇಕಾದ ಕೌಶಲವನ್ನು ಬೆಳೆಸುವಂತಹ ಕಲಿಕೆಯಿರಬೇಕು.
- ಸಾಂಸ್ಕೃತಿಕ ನೆಲೆಯ ಎಕ್ಸ್‌ಪೋಶರ್ಗ್‌ಳು ಹಲವು ಕಡೆಗಳಲ್ಲಿ ಆಗುತ್ತಿರುತ್ತವೆಯಾದ್ದರಿಂದ ಇದು ಸಾಹಿತ್ಯದ ಮೂಲಕ ತರಗತಿಗಳಲ್ಲಿ ಮಾತ್ರ ನಡೆಯುತ್ತದೆ ಎಂದು ತಿಳಿಯುವುದರಲ್ಲಿ ಅರ್ಥವಿಲ್ಲ ಎಂಬುದನ್ನು ಪಠ್ಯಕ್ರಮಗಳಲ್ಲಿ ಗಮನಿಸಿಕೊಳ್ಳಬೇಕು.
- ಈ ದೃಶ್ಟಿಯಿಂದ ಪದವಿಯಲ್ಲಿ ಐಚ್ಚಿಕ ಕನ್ನಡ ಮತ್ತು ಕನ್ನಡ ಎನ್ನುವ ವ್ಯತ್ಯಾಸವನ್ನೆ ತೆಗೆದು, ಸಾಹಿತ್ಯವೂ ಸೇರಿದಂತೆ, ಕನ್ನಡ ಕೌಶಲಗಳ ನೆಲೆಗಳನ್ನ ಒಟ್ಟಿಗೆ ಓಪನಪ್ ಮಾಡಬಹುದಾದ ಹೊಸ ಯೋಜನೆಯನ್ನು ರೂಪಿಸಬಹುದು.
- ಮೂರು ವರ್ಶದ ಪದವಿಯಲ್ಲಿ-ಆರು ಸೆಮಿಸ್ಟರುಗಳ ಪ್ಯಾಕೇಜಿನಲ್ಲಿ-ಇಶ್ಟು ಭಾಗದಶ್ಟು ಭಾಶೆಯ ಕಲಿಕೆಯನ್ನ ಕೋಶೆಂಟಾಗಿ ತೆಗೆದುಕೊಳ್ಳುವಂತೆ ಕಡ್ಡಾಯ ಪಠ್ಯಕ್ರಮವನ್ನು ರೂಪಿಸಬಹುದು.
- ಇದಕ್ಕಾಗಿ, ಬರವಣಿಗೆಯ-ಸ್ಕ್ರಿಪ್ಟ್ ರೈಟಿಂಗ್ ಕೌಶಲ, ಸಾಹಿತ್ಯದ ಕೌಶಲ, ಮಾತುಗಾರಿಕೆ, ಸಂಭಾಶಣೆಯ ಕೌಶಲ, ಕನ್ನಡ ಡೈಲೆಕ್ಟುಗಳ ಪರಿಚಯ, ಮಾಧ್ಯಮಗಳಿಗೆ ಬೇಕಾದ ಭಾಶಿಕ ಕೌಶಲ-ಮೊದಲಾದ ಪಠ್ಯಕ್ರಮಗಳು ರೂಪುಗೊಳ್ಳಬೇಕು.
- ಯಾವುದೇ ಕೋರ್ಸನ್ನು ಕಲಿತರೂ ಕನ್ನಡದ ಬೇಸಿಕ್ಕಾದ ಕೌಶಲಗಳು ಎಲ್ಲರಿಗೂ ಸಿಗುವಂತೆ ಯೋಜಿಸಬೇಕು.
- ಇದಕ್ಕಾಗಿ ಕನ್ನಡವನ್ನ ಆಫ಼ರ್ ಮಾಡ್ತಾ ಇರೊ ವಿಧಾನವನ್ನ ಬದಲಿಸಿ, ಅದನ್ನು ನಿರ್ವಹಿಸಲು ಸಿದ್ಧತೆಗಳನ್ನು ಮಾಡಿಕೊಳ್ಳಬೇಕು.

ಈ ಹಿನ್ನೆಲೆಯಲ್ಲಿ ಭಾಶೆಯನ್ನ ನಾವು ಯಾಕೆ ಪಾಠ ಮಾಡ್ತೋದು ಅನ್ನುವ ಪ್ರಶ್ನೆಯನ್ನು ಹಾಕಿಕೊಂಡು, ಕಲಿಯುವ ಟೂಲ್ಸ್ ಬಗೆಗೆ, ಮೆತೆಡ್ಸ್ ಬಗೆಗೆ, ಮೆತಡಾಲಜಿ ಬಗೆಗೆ ಹೊಸ ಚಿಂತನೆಗಳನ್ನು ಮೊದಲು ಮಾಡಬೇಕಾಗುತ್ತದೆ. ಅಧ್ಯಾಪನ ಸಮುದಾಯಕ್ಕೆ ಇಂಥ ಪಠ್ಯಕ್ರಮಕ್ಕೆ

ಸಂಬಂಧಿಸಿದಂತೆ ಒಂದು ಟೋಟಲ್ ಐಡಿಯಾಲಜಿಯನ್ನು ಒದಗಿಸಬೇಕಾಗುತ್ತದೆ. ಪಠ್ಯ ಯಾವುದು, ಕಲಿಸುವವರು ಯಾರು, ಮೌಲ್ಯ ಮಾಪನ ಮಾಡುವವರು ಯಾರು, ಎಂಬುದನ್ನು ಸರಿಯಾಗಿ ಸಂಯೋಜಿಸುವ ಯೋಜನೆಗಳನ್ನು ಕಂಡುಕೊಳ್ಳಬೇಕಾಗುತ್ತದೆ. ಭಾಷೆಯಲ್ಲಿ ಎಷ್ಟು ವೈವಿಧ್ಯಗಳಿವೆಯೋ-ಎಶ್ಟು ಮಾಡೆಲ್ಸ್ ಸಿಗುತ್ತೋ, ಎಶ್ಟು ಸ್ಯಾಂಪಲ್ಸ್ ಸಿಗುತ್ತೋ- ಅಶ್ಟನ್ನೂ ಕೂಡ ಒಳಗೊಳ್ಳುವಂತಹ ಪಠ್ಯಕ್ರಮ, ಟೀಚಿಂಗ್ ಮೆತೆಡ್ಸನ್ನು ರೂಪಿಸಬೇಕಾದ ಹಿನ್ನೆಲೆಯಲ್ಲಿ ಒಟ್ಟು ಕಲಿಕೆಯನ್ನು ಗ್ರಹಿಸುವ ಅಗತ್ಯ ಇಂದು ಬದಲಾಗುತ್ತಿರುವ ಸಾಮಾಜಿಕ ವಿದ್ಯಮಾನಗಳಲ್ಲಿ ಜರೂರಿನದಾಗಿದೆ. ಪಠ್ಯಕ್ರಮ, ಬೋಧನೆ, ಪರೀಕ್ಷೆ ಮತ್ತು ಮೌಲ್ಯಮಾಪನ ಚಟುವಟಿಕೆಗಳು ಈಗಿನ ಒಟ್ಟು ಸ್ವರೂಪವನ್ನೇ ಬದಲಾಯಿಸಿಕೊಳ್ಳುವ ಅನಿವಾರ್ಯತೆಗೆ ಅಗತ್ಯವಾಗಿ ಒಳಗಾಗಬೇಕಾಗಿದೆ. ಇದರಿಂದಾಗಿ ಈಗಾಗಲೇ ಇರುವಶ್ಟು ಮೇಜರ್ ರೋಲನ್ನು ಸಾಹಿತ್ಯ ತೆಗೆದುಕೊಳ್ಳದಂತೆ ಎಚ್ಚರಿಕೆ ವಹಿಸಬೇಕಾಗುತ್ತದೆ. ಆ ಮೂಲಕ ಕನ್ನಡಭಾಶೆ ಊರ ಹೊರಗಿನ ಕೇರಿ-ಹಟ್ಟಿಗಳ, ಶ್ರೀಮಂತ ಕಟ್ಟಡಗಳ ಹಿಂದಿನ ಸ್ಲಮ್ಮುಗಳ, ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ದಮನಿತರಾದ ಸಮುದಾಯಗಳ ಬದುಕುವ ಸ್ವತ್ತಾಗಿ ಕೈಗೆ ಸಿಗುವಂತೆ ಮಾಡಬೇಕಾಗುತ್ತದೆ. ಇದರಿಂದ ಕನ್ನಡ ಭಾಷಿಕವಾಗಿ ಮತ್ತು ಸಾಮಾಜಿಕವಾಗಿ, ವರ್ತಮಾನದ ಆತಂಕಗಳನ್ನು ಎದುರುಗೊಳ್ಳಲು ಸಾಧ್ಯವಾಗುತ್ತದೆ. ಈ ನಿಟ್ಟಿನಲ್ಲಿ ಕನ್ನಡಭಾಶೆಯ ಕಲಿಕೆ ಕುರಿತ ಮತ್ತಶ್ಟು ಬಹುಮುಖಿಯಾದ ಚಿಂತನೆಗಳಿಗೆ ದಾರಿಹುಡುಕಿಕೊಳ್ಳುವ ಪ್ರಯತ್ನವಾಗಿ ಪ್ರಸ್ತುತ ಅಧ್ಯಯನ ಮಹತ್ವವನ್ನು ಪಡೆದುಕೊಳ್ಳುತ್ತದೆ.

**ಸವಾಲುಗಳು, ಸಾಧ್ಯತೆಗಳು;**

ಬಹಳ ಮುಖ್ಯವಾಗಿ ಕನ್ನಡ ಅಧ್ಯಾಪನ ಫೆಸಿಲಿಟೇಟಿಂಗ್ ಆಗಿಬಿಡಬಹುದಾದ ಅಪಾಯವೊಂದರಿಂದ ತಪ್ಪಿಸಿಕೊಳ್ಳುವ ಸಾಧ್ಯತೆಗಳನ್ನು ಹುಡುಕಿಕೊಳ್ಳಬೇಕಾಗುತ್ತದೆ. ಯಾಕೆಂದರೆ, ಫೆಸಿಲಿಟೇಟರ್ಸ್ ಆಗುವುದೆಂದರೆ ಅಧ್ಯಾಪನದಿಂದ ಕ್ರಮೇಣ ಇಲ್ಲವಾಗುವುದು, ಜಾರಿಹೋಗುವುದು ಎಂಬುದೇ ಆಗುತ್ತದೆ. ಬದಲಾಗುತ್ತಿರುವ ನವ ಆಧುನಿಕ ವಿದ್ಯಮಾನಗಳ ಹಿನ್ನೆಲೆಯಲ್ಲಿ ಸಾಮಾಜಿಕ ಅವಕಾಶದಿಂದ ಹೊರಗುಳಿಯುವುದು ಎಂದೇ ಇದನ್ನು ಗ್ರಹಿಸಬೇಕಾಗಿದೆ. ಅಧ್ಯಾಪಕರ ಸಹಾಯವಿಲ್ಲದೆಯೂ ಪಠ್ಯವನ್ನು ಕಲಿಕಾರ್ಥಿಗೆ ಗ್ರಹಿಸಲು ಸಾಧ್ಯವಾಗಬೇಕು, ಅಧ್ಯಾಪನ ಫೆಸಿಲಿಟೇಟರ್ ನೆಲೆಗೆ ಬಂದು ಮುಟ್ಟಿದೆ, ಟೀಚರ್ ಶುಡ್‌ಬಿ ಎ ಫೆಸಿಲಿಟೇಟರ್ ಎನ್ನುವ ಮಾತುಗಳು ಇಂಥ ಅಪಾಯಗಳನ್ನು ಸೂಚಿಸುವ ಚಿಂತನೆಗಳೇ ಆಗಿವೆ.

ಇದು, ರೆಡಿ ರೆಕನರುಗಳನ್ನು ಒದಗಿಸುತ್ತಿರುವ ಶಿಕ್ಷಣ ಮಾರುಕಟ್ಟೆಯು ಮತ್ತಷ್ಟು ಬಲಗೊಳ್ಳಲು ಅವಕಾಶವನ್ನು ಒದಗಿಸುತ್ತದೆ. ಈ ಕಾರಣವಾಗಿ ಶಿಕ್ಷಣ ಮತ್ತು ಮಾರುಕಟ್ಟೆಯ ಸಂಬಂಧಗಳ ಕುರಿತಾಗಿಯೂ ವಿಸ್ತೃತವಾದ ಅಧ್ಯಯನಕ್ಕೆ ಅವಕಾಶವಿದೆ.

ಈ ಹಿನ್ನೆಲೆಯಲ್ಲಿ ಸಾಹಿತ್ಯ ವಿಮರ್ಶೆ ಮತ್ತು ಕನ್ನಡ ಪಠ್ಯಕ್ರಮದ ಅನ್ಯೆತಿಕ ಸಂಬಂಧಗಳ ಕುರಿತಾಗಿ, ಬೋಧನಾ ತರಗತಿಯ ಯೋಜನೆಗಳ ಕುರಿತಾಗಿ, ಅಧ್ಯಯನಗಳ ಮೂಲಕ ಪರಿಶೀಲಿಸುವ ಅಗತ್ಯವಿದೆ. ಒಟ್ಟು ಕಾಲೇಜು ಕನ್ನಡ ಅಧ್ಯಾಪನವನ್ನು ಕುರಿತೇ ಕಲಿಕಾರ್ಥಿಗಳು ಮತ್ತು ಅಧ್ಯಾಪಕರನ್ನು ಗುರಿಯಾಗಿಸಿಕೊಂಡು ಅಧ್ಯಯನ ನಡೆಸಬಹುದಾಗಿದೆ. ಈ ಮೂಲಕ ಅಧ್ಯಾಪನದ ಮಾದರಿಗಳನ್ನೂ ಸಹ ಅನಾವರಣಗೊಳಿಸಿಕೊಳ್ಳುತ್ತಾ ಪ್ರಸ್ತುತ ಬೋಧನೆಯಲ್ಲಿನ ತೊಡಕುಗಳನ್ನು ಗುರುತಿಸಿಕೊಳ್ಳಬಹುದಾಗಿದೆ. ಇತರೆ ವಿಶಯಾದಾರಿತ ಸಬ್ಜೆಕ್ಟುಗಳ ಬೋಧನೆ ಮತ್ತು ಕಲಿಕೆಯೊಡನೆ ತೌಲನಿಕವಾಗಿ ಗಮನಿಸಿಕೊಳ್ಳುತ್ತಾ ಕನ್ನಡ ಅಧ್ಯಾಪನ ರೂಢಗೊಳ್ಳಬೇಕಾದ ದಾರಿಗಳನ್ನೂ ಸೃಷ್ಟಿಸಿಕೊಳ್ಳಬಹುದಾಗಿದೆ.

ಕೇಂದ್ರೀಕೃತಗೊಂಡಿರುವ ಮೌಲ್ಯಮಾಪನ ವ್ಯವಸ್ಥೆಯು ಕಲಿಕಾರ್ಥಿಯ ಸಾಮರ್ಥ್ಯವನ್ನು ಸಾಭೀತು ಪಡಿಸುವಲ್ಲಿ ಅನೇಕ ಪ್ರಶ್ನೆಗಳಿಗೆ ಕಾರಣವಾಗುತ್ತದೆ. ಈ ಬಗೆಯ ವ್ಯವಸ್ಥೆಯು ನಾಳಿನ ಪ್ರಜೆಗೆ ಯಾವ ಬಗೆಯ ತಿಳುವಳಿಕೆಯನ್ನು ರವಾನಿಸುತ್ತದೆ ಎನ್ನುವುದೇ ಅನೇಕ ಅನುಮಾನಗಳನ್ನು ಮುನ್ನೆಲೆಗೆ ತರುತ್ತದೆ. ಈ ಕುರಿತು ವಿಸ್ತೃತವಾದ ಅಧ್ಯಯನ ಸಾಧ್ಯವಾಗಬೇಕಾಗಿದೆ.

ಇದು ಕನ್ನಡ ಕಲಿಕೆಯನ್ನು ಪ್ರಜಾಪ್ರಭುತ್ವದ ನೆಲೆಗಳಲ್ಲಿ ಜಾರಿಗೊಳಿಸಿಕೊಳ್ಳಲು ಅವಕಾಶಗಳನ್ನು ಒದಗಿಸುತ್ತದೆ ಎಂದು ಪ್ರಸ್ತುತ ಅಧ್ಯಯನವು ತಿಳಿದಿದೆ.

*********

# ಅನುಬಂಧ-೧

## ಬೆಂಗಳೂರು ವಿ.ವಿಯ ಸ್ನಾತಕಪದವಿ ಕನ್ನಡಭಾಶೆಯ ಕಲಿಕೆಗೆಂದು ನಿಯಮಿತವಾದ ಪಠ್ಯಪುಸ್ತಕಗಳು

(೧೯೬೪ರ ಆರಂಭಕಾಲದಿಂದ ೨೦೦೭ರತನಕ)

| ಪ್ರಾಚೀನಕಾವ್ಯ ಸಂಗ್ರಹಗಳು | ಕವಿ/ಸಂಪಾದಕರು | ಪ್ರಕಾಶನ |
|---|---|---|
| ೧. ಕರ್ನಾಟಕ ಕಾದಂಬರಿ ಸಂಗ್ರಹ | ಗುಣವರ್ಮ/ಟಿ.ಎಸ್. ವೆಂಕಣ್ಣಯ್ಯ(ಬ್ರಾ) | ಮೈಸೂರು ವಿಶ್ವವಿದ್ಯಾಲಯ |
| ೨. ಭಾವಚಿಂತಾರತ್ನ | ಸಿ ಮಹಾದೇವಪ್ಪ(ಲಿ) | ಗೌರಿಶಂಕರ್ ಬುಕ್ ಡಿಪೊ ಮೈಸೂರು |
| ೩. ಹರಿಶ್ಚಂದ್ರಕಾವ್ಯ ಸಂಗ್ರಹ | ರಾಘವಾಂಕ/ಟಿ.ಎಸ್.ವೆಂಕಣ್ಣಯ್ಯ(ಬ್ರಾ)/ಎ.ಆರ್.ಕೃ(ಬ್ರಾ) | ಮೈಸೂರು ವಿಶ್ವವಿದ್ಯಾಲಯ |
| ೪. ಧರ್ಮಾಮೃತ ಸಂಗ್ರಹಂ | ನಯಸೇನ/ದೇ.ಜವರೇಗೌಡ(ವ) | ನರೇಶ್ ಅಂಡ್ ಕಂ, ಬೆಂಗಳೂರು. |
| ೫. ಪ್ರಭುಲಿಂಗಲೀಲೆಯ ಸಂಗ್ರಹ | ಚಾಮರಸ/ಬಸವಲಿಂಗಯ್ಯ( ಲಿ) | ಮೈಸೂರು ವಿ.ವಿ. |
| ೬. ರಾಮಾಶ್ವಮೇದ ಸಂಗ್ರಹ | ಮುದ್ದಣ/ಎನ್ ಅನಂತರಂಗಾಚಾರ್(ಬ್ರಾ) | ಸ್ವಚ್ಚಂಧ ಪ್ರಕಾಶನ ಮೈಸೂರು |
| ೭. ಉದ್ಯೋಗ ಪರ್ವ ಸಂಗ್ರಹ | ಕುಮಾರವ್ಯಾಸ/ತ.ಸು.ಶಾಮರಾಯ(ಬ್ರಾ) | ತ.ವೆಂ. ಸ್ಮಾ. ಗ್ರಂಥಮಾಲೆ ಮೈಸೂರು |
| ೮. ನಳಚಂಪು ಸಂಗ್ರಹ | ಜಿ.ವೆಂಕಟಸುಬ್ಬಯ್ಯ(ಬ್ರಾ) | ಕನ್ನಡ ಸಾಹಿತ್ಯ ಪರಿಶತ್ತು, ಬೆಂಗಳೂರು |
| ೯. ಭಾರತ ಕಥಾಮಂಜರಿ | ಕುಮಾರವ್ಯಾಸ/ಸುಜನಾ(ಇ) | ಸರಸ ಸಾಹಿತ್ಯ ಪ್ರಕಾಶನ ಮೈಸೂರು |
| ೧೦. ಗದಾಯುದ್ಧ ಸಂಗ್ರಹ? | ರನ್ನ/ತೀ.ನಂ.ಶ್ರೀ(ಬ್ರಾ) | ಕಾವ್ಯಾಲಯ, ಮೈಸೂರು |
| ೧೧. ಅಕ್ಕನ ವಚನಗಳು? | ಅಕ್ಕಮಹಾದೇವಿ/ಎಲ್.ಬಸವರಾಜು(ಲಿ) | ಡಿ.ವಿ.ಕೆ ಮೂರ್ತಿ, ಮೈಸೂರು |
| ೧೨. ವಡ್ಡಾರಾಧನೆ? | ಶಿವಕೋಟ್ಯಾಚಾರ್ಯ/ಡಿ.ಎಲ್.ನರಸಿಂಹಾಚಾರ್(ಬ್ರಾ) | ಶಾರದಾಮಂದಿರ, ಮೈಸೂರು |
| ೧೩. ಕುಮಾರವ್ಯಾಸ ಸರಸವಾಣಿ | ಡಿ.ವಿ. ಶೇಶಗಿರಿರಾವ್(ಬ್ರಾ) | ರಾವ್ ಅಂಡ್ ಸನ್ಸ್ |
| ೧೪. ಶಬ್ದಮಣಿದರ್ಪಣಂ | ಕೇಶಿರಾಜ/ಡಿ.ಎಲ್.ಎನ್(ಬ್ರಾ) | ಶಾರದಾಮಂದಿರ, ಮೈಸೂರು |
| ೧೫. ಯಶೋಧರ ಚರಿತೆಯ ಸಂಗ್ರಹ | ಜನ್ನ/ಕ,ವೆಂ.ರಾಘವಾಚಾರ್(ಬ್ರಾ) | ಶಾರದಾಮಂದಿರ, ಮೈಸೂರು |
| ೧೬. ಹರಿಹರನ ಎಂಟು ರಗಳೆಗಳು | ಎಚ್ ದೇವೀರಪ್ಪ(ಲಿ) | ಶಿವಕುಮಾರ ಪ್ರಕಾಶನ |
| ೧೭. ರಾಘವಾಂಕ ಚತುರ್ಮುಖ | ಎಚ್.ಕೆ ಜಯದೇವ(ವ)/ವಿದ್ಯಾಶಂಕರ(ಲಿ) | ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು |

| ಪ್ರಾಚೀನಕಾವ್ಯ ಸಂಕಲನಗಳು | ಕವಿ/ಸಂಪಾದಕರು | ಪ್ರಕಾಶನ |
|---|---|---|
| ೧. ಕನ್ನಡದ ಬಾವುಟ | ಬಿ.ಎಂ.ಶ್ರೀ(ಬ್ರಾ) | ಕನ್ನಡ ಸಾಹಿತ್ಯ ಪರಿಶತ್ತು, ಬೆಂಗಳೂರು |
| ೨. ವೀರಕುಮಾರ ಸಂಗ್ರಾಮ | ಕೆ.ಜಿ. ನಾಗರಾಜಪ್ಪ(ಲಿ) | ಪ್ರಣತಿ ಪ್ರಕಾಶನ, ತುಮಕೂರು |
| ೩. ಅಗ್ನಿಪಥ | ಪಿ. ರೇವಮ್ಮ(ಲಿ) | ಪ್ರಣತಿ ಪ್ರಕಾಶನ, ತುಮಕೂರು |
| ೪. ಮಧ್ಯಕಾಲೀನ ಕನ್ನಡ ಕವಿತೆ-೧ | ಎಂ.ಚಿದಾನಂದಮೂರ್ತಿ(ಲಿ)/ಎಂ.ಎಸ್.ವೆಂಕಟರಾವ್(ಬ್ರಾ) | |
| | ಕಿ.ರಂ.ನಾಗರಾಜ(ಬ್ರಾ) | ಬೆಂಗಳೂರು ವಿಶ್ವವಿದ್ಯಾಲಯ |
| ೫. ಮಧ್ಯಕಾಲೀನ ಕನ್ನಡ ಕವಿತೆ-೨ | ಅ.ರಾ. ಮಿತ(ಬ್ರಾ)/ಕೆ.ಜಿ.ನಾಗರಾಜಪ್ಪ(?) | ಬೆಂಗಳೂರು ವಿ.ವಿ. |
| ೬. ಹಳಗನ್ನಡ ಕಾವ್ಯ ಸಂಗ್ರಹ | ಸಿ ಮಹದೇವಪ್ಪ(ಲಿ)/ಬಿ.ರಾಮಚಂದ್ರಗೌಡ(ವ) | |
| ೭. ಎಸ್.ಶ್ರೀನಿವಾಸನ್(ಇ) | ಬೆಂಗಳೂರು ವಿ.ವಿ | |
| ೮. ಹಳಗನ್ನಡ ಕಾವ್ಯ ಸಂಗ್ರಹ-೨ | ಸಿ.ಮಹಾದೇವಪ್ಪ(ಲಿ)/ಬಿ.ಆರ್.ರಾಮಚಂದ್ರಗೌಡ(ವ) | |
| | ಎಸ್.ಶ್ರೀನಿವಾಸನ್(ಇ) | ಬೆಂಗಳೂರು.ವಿ.ವಿ |
| ೯. ಪ್ರಾಚೀನ ಕಾವ್ಯ ಮಾರ್ಗ | ಕೆ.ವಿ.ನಾರಾಯಣ(ಇ)/ಹೆಚ್.ಎಸ್.ರಾಘವೇಂದ್ರರಾವ್(ಬ್ರಾ) | ಬೆಂಗಳೂರು ವಿ.ವಿ |
| ೧೦. ಪ್ರಾಚೀನ ಕಾವ್ಯ ಮಾರ್ಗ-೨ | ಜಿ.ಎಸ್.ಸಿದ್ಧಲಿಂಗಯ್ಯ(ಲಿ)/ಅ.ರಾ.ಮಿತ(ಬ್ರಾ) | ಬೆಂಗಳೂರು ವಿ.ವಿ. |
| ೧೧. ಪ್ರಾಚೀನ ಕಾವ್ಯ ಮಾರ್ಗ-೩ | ಹಂಪ ನಾಗರಾಜಯ್ಯ(ಇ)/ಆರ್. ರಾಚಪ್ಪ(ಲಿ) | |
| | ಹೆಚ್.ಎಸ್.ರಾಘವೇಂದ್ರರಾವ್(ಬ್ರಾ) | ಬೆಂಗಳೂರು.ವಿ.ವಿ |
| ೧೨. ಪ್ರಾಚೀನ ಕಾವ್ಯ ಮಾರ್ಗ-೪ | ಡಿ.ಲಿಂಗಯ್ಯ,(ಲಿ) ಶಿವರಾಮಯ್ಯ(ವ) | ಬೆಂಗಳೂರು ವಿ.ವಿ. |
| ೧೩. ಪ್ರಾಚೀನ ಕಾವ್ಯಾಂಜಲಿ | ಸಿ.ವಿ. ವತ್ಸಲಾದೇವಿ(ಬ್ರಾ)/ಎ.ಶ್ರೀಪಾದ(ಬ್ರಾ) | ಬೆಂಗಳೂರು ವಿ.ವಿ |
| ೧೪. ಪ್ರಾಚೀನ ಕಾವ್ಯ ಸೌರಭ | ನರಹಳ್ಳಿ ಬಾಲಸುಬ್ರಹ್ಮಣ್ಯ(ಬ್ರಾ)/ಸಿ.ಯು. ಮಂಜುನಾಥ್(ಲಿ) | ಬೆಂಗಳೂರು.ವಿ.ವಿ |
| ೧೫. ಪ್ರಾಚೀನ ಕಾವ್ಯಮಾಲೆ | ವಿಜಯಾ ಸುಬ್ಬರಾಜ್(ಬ್ರಾ)/ಎಸ್.ಜಿ. ಸಿದ್ದರಾಮಯ್ಯ(ಇ) | ಬೆಂಗಳೂರು ವಿ.ವಿ |
| ೧೬. ಪ್ರಾಚೀನ ಕಾವ್ಯ ಕುಸುಮ-೧ | ಕೆ.ಎಂ.ಕೋದಂಡರಾಮ್(ಇ)/ಎಚ್.ಎಸ್.ಮಾಧವರಾವ್(ಬ್ರಾ) | ಬೆಂಗಳೂರು ವಿ.ವಿ |
| ೧೭. ಪ್ರಾಚೀನ ಕಾವ್ಯ ದರ್ಶನ-೧ | ಎನ್. ಸುನಂದ,(ಬ್ರಾ) ಎಸ್.ಆರ್.ಜಯಶ್ರಿ(ಬ್ರಾ) | ಬೆಂಗಳೂರು ವಿ.ವಿ |
| ೧೮. ಪ್ರಾಚೀನ ಕಾವ್ಯ ಧಾರೆ-೧ | ಕೆ. ಗೋಕುಲನಾಥ್,(ಬ್ರಾ) ಡಿ.ಮಂಗಳಾ ಪ್ರಿಯದರ್ಶಿನಿ(ಬ್ರಾ) | ಬೆಂಗಳೂರು ವಿ.ವಿ |

| ಆಧುನಿಕ ಕಾವ್ಯ ಸಂಕಲನಗಳು | ಕವಿ | ಪ್ರಕಾಶನ |
|---|---|---|
| ೧. ಕಟ್ಟುವೆವು ನಾವು | ಅಡಿಗ(ಬ್ರಾ) | ? |
| ೨. ಪಕ್ಷಿಕಾಶಿ | ಕುವೆಂಪು(ವ) | ಉದಯರವಿ, ಮೈಸೂರು |
| ೩. ಗೊಲ್ಗೊಥಾ ಮತ್ತು ವೈಶಾಖ | ಗೋವಿಂದ ಪೈ(ಬ್ರಾ) | ಕಾವ್ಯಾಲಯ, ಮೈಸೂರು. |
| ೪. ದೀಪದ ಹೆಜ್ಜೆ | ಜಿ.ಎಸ್. ಶಿವರುದ್ರಪ್ಪ(ಲಿ) | ಜಿ.ಕೆ.ಅಂಡ್ ಬ್ರದರ್ಸ್, ಬೆಂಗಳೂರು |
| ೫. ಕಥನ ಕವನಗಳು | ? | ? |
| ೬. ಆಯ್ದ ಕವನಗಳು | ಕೆ.ಎಸ್.ನ(ಬ್ರಾ) | ಕಾವ್ಯಾಲಯ, ಮೈಸೂರು |
| ೭. ಅತಿಥಿ | ಪು ತಿ ನ(ಬ್ರಾ) | ಜಿ.ಎಚ್.ರಾಮರಾವ್, ಮೈಸೂರು |
| ೮. ವಿನಯ | ಬೇಂದ್ರೆ(ಬ್ರಾ) | ಗೀತಾ ಬುಕ್ ಹೌಸ್, ಮೈಸೂರು |
| ೯. ಕಬ್ಬಿಗನ ಕೈಬುಟ್ಟಿ | ಕುವೆಂಪು(ವ) | ಉದಯರವಿ ಮೈಸೂರು |
| ೧೦. ಆರೋಹಣ | ಗೋಪಾಲಕೃಷ್ಣ ಅಡಿಗ(ಬ್ರಾ) | ಅಕ್ಷರ ಪ್ರಕಾಶನ, ಹೆಗ್ಗೋಡು |
| ೧೧. ಚಿರಂತನ ದಾಹ | ಚನ್ನವೀರ ಕಣವಿ(ಲಿ) | ಕಾರ್ತಿಕೇಯಪಬ್ಲಿಕೇಶನ್ಸ್, ಗುಲ್ಬರ್ಗ |
| ೧೨. ಆಯ್ದ ಕವಿತೆಗಳು | ನಿಸಾರ್ ಅಹಮದ್ (ಇ) | ತ.ವೆಂ.ಸ್ಮಾ.ಗ್ರಂಥಮಾಲೆ, ಮೈಸೂರು |
| ೧೩. ಪಾರಿಜಾತದಡಿಯಲಿ | ವಿನಾಯಕ(ಬ್ರಾ) | ಸುರುಚಿ ಪ್ರಕಾಶನ, ಮೈಸೂರು |

| ಆಧುನಿಕ ಕಾವ್ಯ ಸಂಕಲನಗಳು | ಸಂಪಾದಕರು | ಪ್ರಕಾಶನ |
|---|---|---|
| ೧. ನವ್ಯಧ್ವನಿ | ವಿ.ಕೃ.ಗೋಕಾಕ(ಬ್ರಾ)/ಚ.ಕಣವಿ(ಬ್ರಾ) | ವಿಜಯಭಾರತೀ ಪ್ರಕಾಶನ, ಬೆಂಗಳೂರು |
| ೨. ಸಂಕ್ರಮಣ ಕಾವ್ಯ | ಚಂಪಾ(ಲಿ)/ಗಿರಡ್ಡಿ ಗೋವಿಂದರಾಜ(ಲಿ) | |
| | ಸಿದ್ದಲಿಂಗ ಪಟ್ಟಣಶೆಟ್ಟಿ(ಲಿ) | ಸಂಕ್ರಮಣ ಪ್ರ ಧಾರವಾಡ |
| ೩. ಸಮಕಾಲೀನಕನ್ನಡಕವಿತೆ–೧ | ಜಿ.ಎಸ್.ಎಸ್(ಲಿ)/ಹೆಚ್.ಜಿ.ಸಣ್ಣಗುಡ್ಡಯ್ಯ(ವ) | |
| | ಸಿ.ಶ್ರೀನಿವಾಸರಾಜು(ಇ) | ಬೆಂಗಳೂರು.ವಿ.ವಿ |
| ೪. ಸಮಕಾಲೀನ ಕನ್ನಡ ಕವಿತೆ–೨ | ಜಿ.ಎಸ್. ಶಿವರುದ್ರಪ್ಪ(ಲಿ)/ಚಿ.ಶ್ರೀನಿವಾಸರಾಜು(ಇ), | ಬೆಂಗಳೂರು ವಿ.ವಿ |
| ೫. ಸಮಕಾಲೀನ ಕನ್ನಡ ಕವಿತೆ–೩ | ಎನ್.ಎಸ್.ಎಲ್(ಬ್ರಾ)/ಎಚ್.ಎಸ್.ವಿ(ಬ್ರಾ) | |
| | ಸಿದ್ದಲಿಂಗಯ್ಯ(ದ) | ಬೆಂಗಳೂರು.ವಿ.ವಿ |

| | | |
|---|---|---|
| ೬. ಸಮಕಾಲೀನ ಕನ್ನಡ ಕವಿತೆ–೪ | ಎನ್.ಎಸ್.ಎಲ್(ಬ್ರಾ)/ಸಿದ್ದಲಿಂಗಯ್ಯ(ದ) ನಾಡಿಗ್(ಬ್ರಾ) | ಬೆಂಗಳೂರು. ವಿ.ವಿ |
| ೭. ಹೊಸಗನ್ನಡ ಕಾವ್ಯಮಾಲೆ | ಕೆ.ಎಂ.ಕೋದಂಡರಾಮ್(ವೈಶ್ಯ)/ಬಸವರಾಜ ವಕ್ಕುಂದ(ಲಿ) | ಬೆಂಗಳೂರು. ವಿ.ವಿ |
| ೮. ಆಧುನಿಕ ಕನ್ನಡ ಕವಿತೆಗಳು | ದೊಡ್ಡರಂಗೇಗೌಡ(ಗೌ)/ಮಂಗಳಾ ಪ್ರಿಯದರ್ಶಿನಿ(ಬ್ರಾ) | ಬೆಂಗಳೂರು. ವಿ.ವಿ |
| ೯. ಇಂದಿನ ಕವಿತೆ | ಹೆಚ್.ಎಸ್,ಆರ್(ಬ್ರಾ)/ನಲ್ಲೂರು ಪ್ರಸಾದ್(ವ) | ಬೆಂಗಳೂರು. ವಿ.ವಿ |
| ೧೦. ಹೊಸಗನ್ನಡ ಕಾವ್ಯಾಂಜಲಿ–೧ | ರಾಮಯ್ಯ(ವ)/ಸಿಸ್ಟರ್ ವಾಯ್‌ಲೆಟ್(ಇ)/ಲಿಂಗರಾಜಯ್ಯ(ವ) | ಬೆಂಗಳೂರು. ವಿ.ವಿ |
| ೧೧. ಹೊಸಗನ್ನಡಕವಿತೆ | ಕೆ.ಚಂದ್ರಣ್ಣ(ವ)/ಟಿ.ಎಸ್.ನಾಗರಾಜಶೆಟ್ಟಿ(ವೈ) ರಂಗಾರೆಡ್ಡಿಕೋಡಿರಾಂಪುರ(ವ) | ಬೆಂಗಳೂರು.ವಿವಿ |
| ೧೨. ಆಧುನಿಕ ಕನ್ನಡ ಕವಿತೆ | ಯು.ಮಂಜುನಾಥ್(ಲಿ)/ಸಿ.ಜಿ.ವೆಂಕಟಯ್ಯ(ಇ) ಎನ್.ಕಾಮರಾಜ್(ವ) | ಬೆಂಗಳೂರು. ವಿ.ವಿ |
| ೧೩. ಹೊಸಗನ್ನಡ ಕಾವ್ಯ | ಆರ್. ಲಕ್ಷ್ಮಿನಾರಾಯಣ(ಬ್ರಾ) ಎಂ. ಗೋವಿಂದಯ್ಯ(ವ) | ಬೆಂಗಳೂರು. ವಿ.ವಿ |

| ನಾಟಕಗಳು–ಕನ್ನಡ | ಲೇಖಕ | ಪ್ರಕಾಶನ |
|---|---|---|
| ೧. ಗದಾಯುದ್ಧ | ರನ್ನ/ನ. ಸುಬ್ರಹ್ಮಣ್ಯ(ಬ್ರಾ) | ತ. ವೆಂ. ಸ್ಮಾ. ಗ್ರಂಥಮಾಲೆ ಮೈಸೂರು |
| ೨. ಯಶೋಧರ(ನಾಟಕ) | ಶ್ರೀನಿವಾಸ(ಬ್ರಾ) | ಜೀವನ ಕಾರ್ಯಾಲಯ, ಬೆಂಗಳೂರು |
| ೩. ಸತ್ಯಾಶ್ರಯ ಸಾಮ್ರಾಜ್ಯ | ಡಾ.ಎಚ್. ತಿಪ್ಪೇರುದ್ರಸ್ವಾಮಿ(ಲಿ) | ಗೀತಾ ಬುಕ್ ಹೌಸ್, ಮೈಸೂರ |
| ೪. ಚಂದ್ರಹಾಸ | ಕುವೆಂಪು(ವ) | ಉದಯರವಿ, ಮೈಸೂರು |
| ೫. ಅಹಲ್ಯೆ | ಪು.ತಿ.ನ.(ಬ್ರಾ) | ಕಾವ್ಯಾಲಯ, ಮೈಸೂರು |
| ೬. ಜಾಗೃತಭಾರತಿ | ಎಚ್.ಕೆ.ರಂಗನಾಥ್(ಬ್ರಾ) | ಶಾರದಾ ಪ್ರಕಟನಾಲಯ,ಬೆಂಗಳೂರು |
| ೭. ನಚಿಕೇತ | ಸಿ.ಕೆ.ವೆಂಕಟರಾಮಯ್ಯ(ಬ್ರಾ) | |
| ೮. ನಾಟಕ ಚಕ್ರ | ಪರ್ವತವಾಣಿ(ಬ್ರಾ) | ಜಿ.ಎಚ್.ರಾಮರಾವ್, ಮೈಸೂರು |
| ೯. ಅಶ್ವತ್ಥಾಮನ್ | ಶ್ರೀ(ಬ್ರಾ) | ವಿಶ್ವ ಸಾಹಿತ್ಯ |
| ೧೦. ಜನನಾಯಕ | ವಿ.ಕೃ ಗೋಕಾಕ್(ಬ್ರಾ) | ಸುರುಚಿ ಮೈಸೂರು |
| ೧೧. ಎರಡು ನಾಟಕಗಳು | ಶ್ರೀರಂಗ(ಬ್ರಾ) | ಉಷಾ ಸಾಹಿತ್ಯ ಮಾಲೆ, ಮೈಸೂರು |

| | | |
|---|---|---|
| ೧೨. ಎಲ್ಲಾರು ಮಾಡುವುದು | ಭರತೇಶ (?) | ಅಭ್ಯುದಯ, ಮೈಸೂರು |
| ೧೩. ಆ ಊರು ಈ ಊರು | ಜಡಭರತ(ಬ್ರಾ) | ಮನೋಹರ ಗ್ರಂಥಮಾಲೆ, ಧಾರವಾಡ |
| ೧೪. ಜೈಸಿದನಾಯ್ಕ | ಚಂದ್ರಶೇಖರ ಕಂಬಾರ | ಬಾಪ್ಕೋ ಪ್ರಕಾಶನ, ಬೆಂಗಳೂರು |
| ೧೫. ಅಶ್ವತ್ಥಾಮನ್ | ಶ್ರೀ(ಬ್ರಾ)/ಎಚ್.ಎಂ.ಶಂ.ರಾವ್(ಬ್ರಾ) | ಶಾರದಾಮಂದಿರ, ಮೈಸೂರು |
| ೧೬. ಮೂರು ನಾಟಕಗಳು | ಪ್ರಭುಶಂಕರ(ಲಿ) | ವಾಗ್ದೇವಿ ಎಂಟರ್ ಪ್ರೈಸೆಸ್ ಮೈಸೂರು |
| ೧೭. ಎರಡು ನಾಟಕಗಳು | | |
| (ಸಂಕ್ರಾಂತಿ, ಕ್ರಾಂತಿ ಬಂತು ಕ್ರಾಂತಿ) | ಲಂಕೇಶ್(ಲಿ) | ನೆಲಮನೆ, ಮೈಸೂರು |
| ೧೮. ಗದಾಯುದ್ಧ ನಾಟಕಂ | ಶ್ರೀ(ಬ್ರಾ) | ಶಾರದಾ ಮಂದಿರ, ಮೈಸೂರು |
| ೧೯. ಶ್ರೀರಂಗರ ಎರಡು ನಾಟಕಗಳು | ಶ್ರೀರಂಗ(ಬ್ರಾ) | |
| (ಏನಬೇಡಲಿನಿನ್ನಬಳಿಗೆಬಂದು, | | |
| ಗೆಳೆಯನೀನುಹಳೆಯನಾನು) | | ಪುರೋಗಾಮಿ ಪ್ರಕಾಶನ. ಬೆಂಗಳೂರು |
| ೨೦. ತೊಘಲಕ್ | ಗಿರೀಶ್ ಕಾರ್ನಾಡ್(ಬ್ರಾ) | ಮನೋಹರ ಗ್ರಂಥಮಾಲೆ, ಧಾರವಾಡ |
| ೨೧. ವಿಗಡ ವಿಕ್ರಮರಾಯ | ಸಂಸ(ಬ್ರಾ) | ನರೇಶ್ ಅಂಡ್ ಕಂ, ಬೆಂಗಳೂರು |
| ೨೨. ಮೂರು ನಾಟಕಗಳು | | |
| (ಟಿಂಗರ ಬುಡ್ಡಣ್ಣ, ಅಪ್ಪ, ಕೊಡೆಗಳು) | ಚಂಪಾ(ಲಿ) | ಕಲ್ಲಯ್ಯ ಅಂಡ್ ಸನ್ಸ್, ಬೆಂಗಳೂರು |
| ೨೩. ಎರಡು ನಾಟಕಗಳು | | |
| (ಹರಕೆಯ ಕುರಿ, ಅಂಗಿಮ್ಯಾಲಂಗಿ) | ಚಂದ್ರಶೇಖರ ಕಂಬಾರ(ಇ) | ಸುವಿದ್ಯಾ, ಬೆಂಗಳೂರು |
| ೨೪. ಕದಡಿದ ನೀರು | ಅನಾಮದೇಯ(ಬ್ರಾ) | ಮನೋಹರ ಗ್ರಂಥಮಾಲ. ಧಾರವಾಡ |
| ೨೫. ಬೆರಳ್ಗೆ ಕೊರಳ್ | ಕುವೆಂಪು(ವ) | ಉದಯರವಿ, ಮೈಸೂರು |
| ೨೬. ಜುಮ್ನಾಳ ದೂಳ್ಯಾನ ಪ್ರಸಂಗವು | ಕಾವ್ಯಜೀವಿ(ಬ್ರಾ) | ಸುವಿದ್ಯಾ ಪ್ರಕಾಶನ, ಬೆಂಗಳೂರು |
| ೨೭. ಆ ಮನಿ | ಕೀರ್ತಿನಾಥ ಕುರ್ತಕೋಟಿ(ಬ್ರಾ) | ಮನೋಹರ ಗ್ರಂಥಮಾಲೆ. ಧಾರವಾಡ |
| ೨೮. ಅಸ್ಫೋಟ | ಟಿ.ಎನ್. ಸೀತಾರಾಮ್(ಬ್ರಾ) | ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು |
| ೨೯. ಕುವರಲಕ್ಷ್ಮ | ಬಿ.ಶಾಮಸುಂದರ(ಇ) | ೮೩೩, ಮೈಸೂರು |
| ೩೦. ಗುಣಮುಖ | ಲಂಕೇಶ್(ಲಿ) | ಪತ್ರಿಕೆ ಪ್ರಕಾಶನ. ಬೆಂಗಳೂರು |
| ೩೧. ತಲೆದಂಡ | ಗಿರೀಶ್ ಕಾರ್ನಾಡ್(ಬ್ರಾ) | ಮನೋಹರ ಗ್ರಂಥಮಾಲ. ಧಾರವಾಡ |

| | | |
|---|---|---|
| ೩೨. ಬೆರಳ್ಗೆ ಕೊರಳ್ ಮತ್ತು ಸ್ಮಶಾನ ಕುರುಕ್ಷೇತ್ರ | ಕುವೆಂಪು(ವ) | ಉದಯರವಿ, ಮೈಸೂರು. |
| ೩೩. ಸಿರಿಸಂಪಿಗೆ | ಚಂದ್ರಶೇಖರ ಕಂಬಾರ(ಇ) | ಅಕ್ಷರ ಪ್ರಕಾಶನ, ಹೆಗ್ಗೋಡು |
| ೩೪. ಸಂಸರ ವಿಗಡ ವಿಕ್ರಮರಾಯ | ಸಂ; ರಾಜರತ್ನಂ(ಬ್ರಾ) | ಶಾಕ್ಯ ಸಾಹಿತ್ಯ ಮಂಟಪ, ಬೆಂಗಳೂರು |
| ೩೫. ಬಿಂಬ | ಚದುರಂಗ(ಇ) | ನಾಗೇಂದ್ರ, ಮೈಸೂರು |
| ೩೬. ಸಂಕ್ರಾಂತಿ | ಲಂಕೇಶ್(ಲಿ) | ಪತ್ರಿಕೆ ಪ್ರಕಾಶನ, ಬೆಂಗಳೂರು |
| ೩೭. ಕತ್ತಲೆ ಬೆಳಕು | ಶ್ರೀರಂಗ(ಬ್ರಾ) | ಮನೋಹರ ಗ್ರಂಥಮಾಲೆ, ಧಾರವಾಡ |
| ೩೮. ಬಕ | ಎಂ.ಎಸ್.ಕೆ. ಪ್ರಭು(ಬ್ರಾ) | ಸಾಹಿತ್ಯ ಭಂಡಾರ, ಬೆಂಗಳೂರು |
| ೩೯. ಸನ್ನಿವೇಶ | ಬಿ.ವಿ. ವೈಕುಂಠರಾಜು(ಇ) | ಅಕ್ಷರ, ಹೆಗ್ಗೋಡು |
| ೪೦. ಹುಯ್ಯಲವ್ಹೋ ಡಂಗುರವ | ಎಚ್.ಎಂ.ಚನ್ನಯ್ಯ(ಲಿ) | ಸಂವಹನ, ಮೈಸೂರು |
| ೪೧. ತದ್ರೂಪಿ | ಪ್ರಸನ್ನ(ಬ್ರಾ) | ಅನನ್ಯ, ಧಾರವಾಡ |
| ೪೨. ಜಲಗಾರ | ಕುವೆಂಪು(ವ) | ಉದಯರವಿ, ಮೈಸೂರು |

| **ನಾಟಕ–ಅನುವಾದ/ರೂಪಾಂತರ** | **ಲೇಖಕ/ಅನು** | **ಪ್ರಕಾಶನ** |
|---|---|---|
| ೧. ವೇಣಿಸಂಹಾರ | ಜಯರಾಯಾ ಚಾರ್ಯ | ? |
| ೨. ಸೊಹ್ರಾಬ್ ರುಸ್ತುಂ | ವಿ. ಸೀ. (ಬ್ರಾ) | ಕರ್ಣಾಟಕ ಸಂಘ, ಬೆಂಗಳೂರು |
| ೩. ಮಾಳವಿಕಾಗ್ನಿಮಿತ್ರ ನಾಟಕಂ | ಸುಬ್ರಹ್ಮಣ್ಯ ಶಾಸ್ತ್ರಿ(ಬ್ರಾ) | ಕರ್ಣಾಟಕ ಸಂಘ, ಬೆಂಗಳೂರು |
| ೪. ಸಾಮ್ರಾಜ್ಞಿ | ಸಿ.ಕೆ ವೆಂಕಟರಾಮಯ್ಯ | ? |
| ೫. ಬಾಸನ ಏಕಾಂಕ ನಾಟಕಗಳು | ಎಲ್. ಗುಂಡಪ್ಪ(ಬ್ರಾ) | ಜ್ಯೋತಿ ಗ್ರಂಥಮಾಲೆ. ಬೆಂಗಳೂರು |
| ೬. ಕನ್ನಡ ಪ್ರತಿಮಾ ನಾಟಕ | ಡಾ. ಕೆ. ಕೃಷ್ಣಮೂರ್ತಿ(ಬ್ರಾ) | ಲಕ್ಷ್ಮಿ/ಗೀತಾ ಬುಕ್ ಹೌಸ್, ಮೈಸೂರು |
| ೭. ರಕ್ತಾಕ್ಷಿ | ಕುವೆಂಪು(ವ) | ಉದಯರವಿ. ಮೈಸೂರು |
| ೮. ಕನ್ನಡ ಅಭಿಜ್ಞಾನ ಶಾಕುಂತಳ | ಎಸ್.ವಿ.ಪರಮೇಶ್ವರ ಭಟ್ಟ(ಬ್ರಾ) | ಶಾರದಾ ಮಂದಿರ ಮೈಸೂರು |
| ೯. ಬಿರುಗಾಳಿ | ಕುವೆಂಪು(ವ) | ಉದಯರವಿ. ಮೈಸೂರು |
| ೧೦. ಬಾಸನ ಎರಡು ನಾಟಕಗಳು | ಸಿ.ಪಿ.ಕೆ(ವ) | ಸುರುಚಿ ಪ್ರಕಾಶನ, ಮೈಸೂರು |
| ೧೧. ಒಯ್ದಿಪಸ್ ಕೊಲೊನೊಸ್ಸಿನಲ್ಲಿ | | |

| | | |
|---|---|---|
| ಮತ್ತು ಅಂತಿಗೊನೆ | ಕ.ವೆಂ. ರಾಘವಾಚಾರ್(ಬ್ರಾ) | ಕರ್ಣಾಟಕ ಸಂಘ, ಬೆಂಗಳೂರು |
| ೧೨. ಹ್ಯಾಮ್ಲೆಟ್ | ಮಾಸ್ತಿ(ಬ್ರಾ) | ಜೀವನ ಕಾರ್ಯಾಲಯ, ಬೆಂಗಳೂರು |
| ೧೩. ಕರ್ಣಾಟಕ ಪ್ರತಿಮಾ ನಾಟಕಂ, | ಮೈಸೂರು ಸೀತಾರಾಮಶಾಸ್ತ್ರಿ(ಬ್ರಾ) | ಲಕ್ಷ್ಮಿ ಬುಕ್ ಹೌಸ್, ಮೈಸೂರು |
| ೧೪. ದೊರೆ ಈಡಿಪಸ್ ಮತ್ತು ಅಂತಿಗೊನೆ | ಪಿ. ಲಂಕೇಶ್(ಲಿ) | ನೆಲಮನೆ ಪ್ರಕಾಶನ, ಮೈಸೂರು |
| ೧೫. ಆಗ್ರಹ ಮತ್ತು ಸೊಹ್ರಾಬ್ ರುಸ್ತುಂ | ವಿ. ಸೀ.(ಬ್ರಾ) | ನರೇಶ್ ಅಂಡ್ ಕಂ, ಬೆಂಗಳೂರು |
| ೧೬. ಕರ್ನಾಟಕಶಾಕುಂತಲನಾಟಕಂ, | ಬಸವಪ್ಪಶಾಸ್ತ್ರಿ(ಬ್ರಾ)ಎಚ್.ಎಂ.ಶಂ.ರಾವ್(ಬ್ರಾ) | ಶಾರದಾ ಮಂದಿರ ಮೈಸೂರು |
| ೧೭. ಎಲ್ಲರೂ ನನ್ನವರೆ | ಚಿ.ನ. ಮಂಗಳ(ಬ್ರಾ) | ಪುಸ್ತಕಾಲಯ, ಬೆಂಗಳೂರು |
| ೧೮. ಉತ್ತರರಾಮ ಚರಿತ | ಭವಭೂತಿ/ಸಿ.ಪಿ.ಕೆ(ವ) | ವಾಗ್ದೇವಿ ಪುಸ್ತಕಗಳು, ಮೈಸೂರು |
| ೧೯. ಎಲೆಕ್ಟ್ರಾ–ಮೀಡಿಯಾ | ಕೆ.ಮರುಳಸಿದ್ದಪ್ಪ(ಲಿ) | ನರೇಶ ಅಂಡ್ ಕಂ, ಬೆಂಗಳೂರು |
| ೨೦. ಜೂಲಿಯಸ್ ಸೀಸರ್ | ಕೆ.ಎಸ್.ಭಗವಾನ್(ವ) | ಮಹಿಮ ಪ್ರಕಾಶನ, ಮೈಸೂರು |
| ೨೧. ಅಂತಿಗೊನೆ | ಜಿ.ಎನ್ ರಂಗನಾಥರಾವ್(ಬ್ರಾ) | ಗೌತಮ್ ಅಂಡ್ ಕಂಪನಿ, ಬೆಂಗಳೂರು |
| ೨೨. ಧರ್ಮಪುರಿಯ ದೇವದಾಸಿ | ಲಿಂಗದೇವರು ಹಳೆಮನೆ(ಲಿ) | ಅಖಿಲ ಏಜನ್ಸೀಸ್, ಮೈಸೂರು |
| ೨೩. ಅಗೆಮೆಮ್ನಾನ್ | ಸಿ.ಪಿ.ಕೆ(ವ) | ಚೇತನ ಬುಕ್ ಹೌಸ್, ಮೈಸೂರು |
| ೨೪. ಗೆಲಿಲಿಯೋ | ಅನು: ಎಚ್.ಕೆ ರಾಮಚಂದ್ರಮೂರ್ತಿ(ಬ್ರಾ) | |
| ೨೫. ಒಥೆಲೊ | ಅನು: ನಿಸಾರ್ ಅಹಮದ್(ಇ) | ಸ್ವಪ್ನ ಬುಕ್ ಹೌಸ್, ಬೆಂಗಳೂರು |
| ೨೬. ತಾಯಿ | ಸಿ. ವೀರಣ್ಣ(ಲಿ) | ಅರಿವು ಪ್ರಕಾಶನ, ಬೆಂಗಳೂರು |
| ೨೭. ವೆನಿಸ್ಸಿನ ವರ್ತಕ | ಕೆ.ಎಸ್. ಭಗವಾನ್(ವ) | ಮಹಿಮ, ಮೈಸೂರು |
| ೨೮. ವಿದಿಶೆಯ ವಿದೂಶಕ | ಕೆ.ವಿ. ಸುಬ್ಬಣ್ಣ(ಬ್ರಾ) | ಅಕ್ಷರ, ಹೆಗ್ಗೋಡು |

| ಕಾದಂಬರಿ | ಲೇಖಕ/ಅನು | ಪ್ರಕಾಶನ |
|---|---|---|
| ೧. ರಾಕ್ಷಸನ ಮುದ್ರಿಕೆ | ತೀ ನಂ ಶ್ರೀ(ಬ್ರಾ) | ಕಾವ್ಯಾಲಯ ಮೈಸೂರು |
| ೨. ವಿಶವೃಕ್ಷ | ಬಿ ವೆಂಕಟಾಚಾರ್ಯ | ಜಿ ಕೆ ಅಂಡ್ ಬ್ರದರ್ಸ್, ಬೆಂಗಳೂರು |
| ೩. ಮಾಡಿ ಮಡಿದವರು | ಬಸವರಾಜ ಕಟ್ಟೀಮನಿ(ಲಿ) | ಸಾಹಿತ್ಯಶ್ರೀ ಪ್ರಕಾಶನ, ಧಾರವಾಡ |
| ೪. ಅಧಿಕಾರ | ಶರಶ್ಚಂದ್ರ ಚಟರ್ಜಿ(ಬ್ರಾ) | ಡಿ.ವಿ.ಕೆ ಮೂರ್ತಿ, ಮೈಸೂರು |

| | | |
|---|---|---|
| ೫. ದ್ರುಪದನಂದಿನಿ | ಕೆ.ಎಂ.ಕೃಷ್ಣರಾವ್(ಬ್ರಾ) | ಸುರುಚಿ ಪ್ರಕಾಶನ, ಮೈಸೂರು |
| ೬. ಆಳ-ನಿರಾಳ | ಶಿವರಾಮ ಕಾರಂತ(ಬ್ರಾ) | ಹರ್ಷ ಪ್ರಕಟಣಾಲಯ, ಪುತ್ತೂರು |
| ೭. ಅಕ್ಕ-ತಂಗಿ | ನಾರಾಯಣ ಸಂಗಮ(ಬ್ರಾ) | ಸಾಹಿತ್ಯ ಭಂಡಾರ,ಬೆಂಗಳೂರು |
| ೮. ಅಮೃತರಂಗ | ವರದರಾಜ ಹುಯಿಲಗೋಳ(ಬ್ರಾ) | ಕರ್ಣಾಟಕ ಸಂಘ, ಬೆಂಗಳೂರು |
| ೯. ದೇವಿ ಚೌಧುರಾಣಿ | ಬಿ.ವೆಂಕಟಾಚಾರ್ಯ(ಬ್ರಾ) | ಸಾಹಿತ್ಯಮಂದಿರ, ಬೆಂಗಳೂರು |
| ೧೦. ಬೆಕ್ಕಿನ ಕಣ್ಣು | ತ್ರಿವೇಣಿ(ಬ್ರಾ) | ತ್ರಿವೇಣಿ ಎಂಟರ್ ಪ್ರೈಸೆಸ್, ಮೈಸೂರು |
| ೧೧. ಕೃಷ್ಣದೇವರಾಯ | ಡಾ.ಸೂರ್ಯನಾಥ ಕಾಮತ್(ಬ್ರಾ) | ಸಮಾಜ ಪುಸ್ತಕಾಲಯ, ಧಾರವಾಡ |
| ೧೨. ಅಳಿದಮೇಲೆ | ಶಿವರಾಮ ಕಾರಂತ(ಬ್ರಾ) | ಹರ್ಷ ಪ್ರಕಟಣಾಲಯ, ಪುತ್ತೂರು |
| ೧೩. ಶಾಪ | ಎಂ.ವಿ. ಇನಾಂದಾರ್(ಬ್ರಾ) | ಗೀತಾ ಬುಕ್ ಹೌಸ್, ಮೈಸೂರು |
| ೧೪. ವಿಜಯ ಕಲ್ಯಾಣ | ಎಚ್. ತಿಪ್ಪೇರುದ್ರಸ್ವಾಮಿ(ಲಿ) | ಗೀತಾ ಬುಕ್ ಹೌಸ್, ಮೈಸೂರು |
| ೧೫. ಅನ್ನ | ರಂ.ಶ್ರೀ. ಮುಗಳಿ(ಬ್ರಾ) | ಉಷಾ ಸಾಹಿತ್ಯ ಮಾಲೆ, ಮೈಸೂರು |
| ೧೬. ಶಾಂತಲಾ | ಕೆ.ವಿ ಅಯ್ಯರ್(ಬ್ರಾ) | ವ್ಯಾಯಾಮಶಾಲಾ ಬೆಂಗಳೂರು |
| ೧೭. ನಿಸರ್ಗ | ಮಿರ್ಜಿ ಅಣ್ಣಾರಾಯ(ಇ) | |
| ೧೮. ಚಿತ್ರಲೇಖಾ | ವಿ ಎಂ. ಇನಾಂದಾರ್(ಬ್ರಾ) | ಉಷಾ ಸಾಹಿತ್ಯಮಾಲೆ, ಮೈಸೂರು |
| ೧೯. ಗಂಗವ್ವ ಗಂಗಾಮಾಯಿ | ಶಂಕರ ಮೊಕಾಶಿ ಪುಣೇಕರ(ಬ್ರಾ) | ಸುರುಚಿ ಪ್ರಕಾಶನ, ಮೈಸೂರು |
| ೨೦. ನಿರಾಕರಣ | ಎಸ್.ಎಲ್.ಭೈರಪ್ಪ(ಬ್ರಾ) | ಸಾಹಿತ್ಯ ಭಂಡಾರ, ಬೆಂಗಳೂರು |
| ೨೧. ಬೆಳುವಲದ ಮಡಿಲಲ್ಲಿ | ಎಚ್.ದೇವೀರಪ್ಪ(ಲಿ) | ಶಿವಕುಮಾರ ಪ್ರಕಾಶನ |
| ೨೨. ಉತ್ತರಾಯಣ | ವ್ಯಾಸರಾಯ ಬಲ್ಲಾಳ(ಬ್ರಾ) | ಗೀತಾ ಬುಕ್ ಹೌಸ್, ಮೈಸೂರು |
| ೨೩. ಸುಳಿಗಾಳಿ | ಜಯತೀರ್ಥರಾಜಪುರೋಹಿತ(ಬ್ರಾ) | ಸುರುಚಿ ಮೈಸೂರು |
| ೨೪. ಪ್ರಭುದೇವ | ಬಿ.ಪುಟ್ಟಸ್ವಾಮಯ್ಯ(ಲಿ) | ಶಾರದಾ ಪ್ರಕಾಶನ, ಬೆಂಗಳೂರು |
| ೨೫. ಆಕಾಶದೀಪ | ಗೋಪಾಲಕೃಷ್ಣ ಅಡಿಗ(ಬ್ರಾ) | ಸಾಕ್ಷಿ, ಬೆಂಗಳೂರು |
| ೨೬. ಕರ್ವಾಲೊ | ಪೂರ್ಣಚಂದ್ರ ತೇಜಸ್ವಿ(ವ) | ಪತ್ರಿಕೆ ಪ್ರಕಾಶನ, ಬೆಂಗಳೂರು |
| ೨೭. ಚಿರಸ್ಮರಣೆ | ನಿರಂಜನ(ಬ್ರಾ) | ಡಿ.ವಿ.ಕೆ ಮೂರ್ತಿ, ಮೈಸೂರು |
| ೨೮. ತುಂಗಭದ | ಎಂ.ಕೆ. ಇಂದಿರ(ಬ್ರಾ) | ಎಸ್.ಆರ್. ಪ್ರಕಾಶನ, ಬೆಂಗಳೂರು |
| ೨೯. ಉದ್ಭವ | ಬಿ. ವೈಕುಂಠರಾಜು(ಇ) | ? |

| | | |
|---|---|---|
| ೩೦. ಉಕ್ಕಿನ ಕೋಟೆ | ಬರಗೂರು ರಾಮಚಂದ್ರಪ್ಪ(ಇ) | ? |
| ೩೧. ಅಂತರಂಗ | ದೇವುಡು(ಬ್ರಾ) | ಶಾರದಾ ಪ್ರಕಟನಾಲಯ, ಬೆಂಗಳೂರು |
| ೩೨. ಮಾಧವಿ | ಅನುಪಮಾ ನಿರಂಜನ(ಇ) | ಡಿ.ವಿ.ಕೆ ಮೂರ್ತಿ, ಮೈಸೂರು |
| ೩೩. ಸರ್ವಮಂಗಳಾ | ಚದುರಂಗ(ಇ) | ಶಾರದಾ ಪ್ರಕಟಣಾಲಯ, ಬೆಂಗಳೂರು |
| ೩೪. ಚೋಮನದುಡಿ | ಶಿವರಾಮ ಕಾರಂತ(ಬ್ರಾ) | |
| ೩೫. ಕನ್ನಡಿ | ಟಿ.ಕೇಶವದೇವ್/ ಅನು: ಡಾ.ಎಂ.ರಾಮ(?) | ನ್ಯಾಶನಲ್ ಬುಕ್ ಟ್ರಸ್ಟ್, ಹೊಸ ದೆಹಲಿ |
| ೩೬. ಸರಸಮ್ಮನ ಸಮಾದಿ | ಶಿವರಾಮ ಕಾರಂತ(ಬ್ರಾ) | ಸ್ವಪ್ನ ಬುಕ್ ಹೌಸ್, ಬೆಂಗಳೂರು |
| ೩೭. ಸಂಧ್ಯಾರಾಗ | ಅ.ನ.ಕೃ(ಬ್ರಾ) | ಕರ್ನಾಟಕ ಬುಕ್ ಏಜನ್ಸಿ, ಬೆಂಗಳೂರು |
| ೩೮. ಸುಬ್ಬಣ್ಣ | ಶ್ರೀನಿವಾಸ(ಬ್ರಾ) | ಜೀವನ ಕಾರ್ಯಾಲಯ, ಬೆಂಗಳೂರು |
| ೩೯. ಚಂದ್ರಗಿರಿಯ ತೀರದಲ್ಲಿ | ಸಾರಾ ಅಬೂಬಕರ್(ಇ) | ಹೇಮಾಂಶು, ಮಂಗಳೂರು |
| ೪೦. ಜೀಹಾದ್ | ಬೋಳುವಾರು ಮಹಮದ್ ಕುಂಯಿ(ಇ) | ನವಕರ್ನಾಟಕ, ಬೆಂಗಳೂರು |
| ೪೧. ಉದಯರಾಗ | ಆ. ನ. ಕೃ(ಬ್ರಾ) | ಕರ್ನಾಟಕ ಬುಕ್ ಏಜನ್ಸಿ, ಬೆಂಗಳೂರು |
| ೪೨. ಬೆಟ್ಟದ ಜೀವ | ಶಿವರಾಮ ಕಾರಂತ(ಬ್ರಾ) | ಎಸ್.ಬಿ.ಎಸ್ ಪಬ್ಲಿಶರ್ಸ್, ಬೆಂಗಳೂರು |
| ೪೩. ರೂಪದರ್ಶಿ | ಕೆ.ವಿ ಅಯ್ಯರ್(ಬ್ರಾ) | ಗೀತಾ ಪಬ್ಲಿಕೇಶನ್ಸ್, ಬೆಂಗಳೂರು |
| ೪೪. ಮೂರು ದಾರಿಗಳು | ಯಶವಂತ ಚಿತ್ತಾಲ(ಬ್ರಾ) | ಗೀತಾ ಬುಕ್ ಹೌಸ್, ಮೈಸೂರು |
| ೪೫. ಗೃಹಭಂಗ | ಎಸ್.ಎಲ್. ಭೈರಪ್ಪ(ಬ್ರಾ) | ಸಾಹಿತ್ಯ ಭಂಡಾರ, ಬೆಂಗಳೂರು |
| ೪೬. ಕೊಳಗ | ನಾ. ಡಿಸೋಜ(ಇ) | ಗೀತಾ ಬುಕ್ ಹೌಸ್, ಮೈಸೂರು |

| ಸಣ್ಣಕಥೆ | ಲೇಖಕ/ಅನು | ಪ್ರಕಾಶನ |
|---|---|---|
| ೧. ವಿಶಕನ್ಯೆ | ? | ? |
| ೨. ಗುಂಡಿನೇಟು ಮತ್ತು ಇತರ ಕತೆಗಳು | ವಿ ಸೀ(ಬ್ರಾ) | ಕರ್ನಾಟಕ ಸಂಘ, ಬೆಂಗಳೂರು |
| ೩. ಆಯ್ದ ಹತ್ತು ಕತೆಗಳು | ಕೆ ಎಂ ಕೃಷ್ಣರಾವ್(ಬ್ರಾ) | ತ ವೆಂ ಸ್ಮಾ ಗ್ರಂಥಮಾಲೆ ಮೈಸೂರು |
| ೪. ಚಾರಿತ್ರಿಕ ಕಥಾಮಂಜರಿ | ಕೊರಟಿ ಶ್ರೀನಿವಾಸರಾವ್ | ? |
| ೫. ಇಂಥವರೂ ಇದ್ದಾರೆ | ಎಸ್. ಅನಂತನಾರಾಯಣ(ಬ್ರಾ) | ಗಂಗಾತರಂಗ ಮೈಸೂರು |
| ೬. ರುದ್ರವೀಣೆ | ಭಾರತೀಪ್ರಿಯ(ಬ್ರಾ) | ಎಸ್.ವೆಂಕಟರಾವ್, ಬೆಂಗಳೂರು |

| | | |
|---|---|---|
| ೭. ತಪಸ್ವಿನಿ ಮತ್ತು ಇತರ ಕತೆಗಳು | ಭಾರತೀ(ಬ್ರಾ) | ತಿರುಮಲೆಶ್ರೀರಂಗಾಚಾರ್ಯ, ಬೆಂಗಳೂರು |
| ೮. ಗೋಪುರ | ಹೇಮಂತ(ಬ್ರಾ) | ಉಷಾ ಸಾಹಿತ್ಯ ಮಾಲೆ, ಮೈಸೂರು |
| ೯. ದಶಮಂಜರಿ | ಆನಂದಕಂದ(ಬ್ರಾ) | ಸುರುಚಿ ಮೈಸೂರು |
| ೧೦. ನೆಲದಸಿರಿ | ಬೆಸಗರಹಳ್ಳಿ ರಾಮಣ್ಣ(ವ) | ನೆಲಮನೆ ಪ್ರಕಾಶನ, ಮೈಸೂರು |
| ೧೧. ಆಯ್ದ ಕತೆಗಳು | ಕೆ. ಸದಾಶಿವ(ಬ್ರಾ) | ಬಾಪ್ಕೊ ಪ್ರಕಾಶನ, ಬೆಂಗಳೂರು |
| ೧೨. ಆಯ್ದ ಕತೆಗಳು | ಕ. ವೆಂ ರಾಜಗೋಪಾಲ(ಬ್ರಾ) | ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು |
| ೧೩. ಪಯಣ | ಯಶವಂತ ಚಿತ್ತಾಲ(ಬ್ರಾ) | ಸುಭಾಷ್ ಸ್ಟೋರ್ಸ್, ಬೆಂಗಳೂರು |
| ೧೪. ಆಯ್ದ ಎಂಟು ಕತೆಗಳು | ಯು.ಆರ್.ಅನಂತಮೂರ್ತಿ(ಬ್ರಾ) | ಅಕ್ಷರ ಪ್ರಕಾಶನ ಹೆಗ್ಗೋಡು |
| ೧೫. ಬೇವು-ಬೆಲ್ಲ | ಆನಂದ(ಬ್ರಾ) | ಕಾವ್ಯಾಲಯ, ಮೈಸೂರು |
| ೧೬. ಆಯ್ದ ಕತೆಗಳು | ಬಿ.ಸಿ ರಾಮಚಂದ್ರ ಶರ್ಮ(ಬ್ರಾ) | |
| ೧೭. ಆಯ್ದ ಕತೆಗಳು | ಕಾಳೇಗೌಡ ನಾಗವಾರ(ವ) | ಗೌತಮ್ ಪಬ್ಲಿಕೇಶನ್ಸ್, ಮೈಸೂರು |
| ೧೮. ಕಾಮನ ಬಿಲ್ಲು | | ಕರ್ನಾಟಕ ಸಂಘ, ಬೆಂಗಳೂರು |
| ೧೯. ಮಬ್ಬು ಜಾರಿದ ಕಣಿವೆಯಲ್ಲಿ | ಜೀ.ಶಂ. ಪರಮಶಿವಯ್ಯ(ವ) | ಸಾಹಿತ್ಯ ಸದನ ಮೈಸೂರು |
| ೨೦. ಕೇರಿಗೆ ಬಂದ ಹೋರಿ | ಕೃಷ್ಣಮೂರ್ತಿ ಹನೂರು(ಬ್ರಾ) | ಪುರೋಗಾಮಿ ಸಾಹಿತ್ಯ ಸಂಘ, ಬೆಂಗಳೂರು |
| ೨೧. ದಶವಾರ್ಷಿಕಸಣ್ಣಕತೆಗಳು೭೪-೮೩ | ಕ.ವೆಂ.ರಾ(ಬ್ರಾ)/ಯು.ಆರ್.ಅನಂತಮೂರ್ತಿ(ಬ್ರಾ) | |
| ೨೨. ಕೆ.ವೀರಭದ್ರ(ಲಿ) | ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು | |
| ೨೩. ಆಯ್ದ ಕತೆಗಳು | ಸುಮತೀಂದ್ರ ನಾಡಿಗ(ಬ್ರಾ) | ಸುಮತಿ ಪ್ರಕಾಶನ, ಬೆಂಗಳೂರು |
| ೨೪. ಫಕೀರ್ ಮಹಮದ್ ಕಟ್ಪಾಡಿಯವರ | | |
| ೨೫. ಕತೆಗಳು | (ಇ) | ನವಕರ್ನಾಟಕ, ಬೆಂಗಳೂರು |
| ೨೬. ಸುಗ್ಗಿ | ಬೆಸಗರಹಳ್ಳಿ ರಾಮಣ್ಣ(ಇ) | ಸ್ನೇಹ ಪ್ರಕಾಶನ, ಬೆಂಗಳೂರು |
| ೨೭. ಜಾಣಗೆರೆಯವರ ಆಯ್ದ ಕತೆಗಳು | ಜಾಣಗೆರೆ ವೆಂಕಟರಾಮಯ್ಯ(ಇ) | ಬೆಂಗಳೂರು |
| ೨೮. ಕನ್ನಡಿ, ಗುಂಪಿನಲ್ಲಿ ಕಂಡ ಮುಖ | ಈಶ್ವರಚಂದ್ರ(ಬ್ರಾ) | ಪಂಚವಟಿ, ಬೆಂಗಳೂರು |
| ೨೯. ಮಿರ್ಜಿಅಣ್ಣಾರಾಯರ ಆಯ್ದ ಕತೆಗಳು | (ಇ) | ಸುಂದರ ಪುಸ್ತಕ, ಸಪ್ತಾಪುರ, ಧಾರವಾಡ |
| ೩೦. ಒಡಲಾಳ ಮತ್ತು ಇತರ ಕತೆಗಳು | ದೇವನೂರು ಮಹದೇವ(ಇ) | ನವ್ಯಾಲೆ ಪ್ರಕಾಶನ, ಮೈಸೂರು |
| ೩೧. ಮಾರ್ಕ್ವೆಜ್ ಕತೆಗಳು | ನರಹಳ್ಳಿ ಬಾಲಸುಬ್ರಹ್ಮಣ್ಯ(ಬ್ರಾ) | ನೇತ್ರಾ, ಬೆಂಗಳೂರು |
| ೩೨. ಅನಂತಮೂರ್ತಿಯವರ ಆಯ್ದ ಕತೆಗಳು | (ಬ್ರಾ) | ಅಕ್ಷರ ಪ್ರಕಾಶನ, ಹೆಗ್ಗೋಡು |
| ೩೩. ನಾಯಿ ಮತ್ತು ಪಿಂಚಣಿ | ಶಾಂತರಸ(ಲಿ) | ಚೇತನ ಬುಕ್ ಹೌಸ್, ಮೈಸೂರು |
| ೩೪. ಹೊನ್ನಾರು | ಎಚ್. ಜೆ. ಲಕ್ಕಪ್ಪಗೌಡ(ಕು) | ಲಕ್ಷ್ಮಿ, ಮೈಸೂರು |
| ೩೫. ಬೆಸಗರಹಳ್ಳಿ ರಾಮಣ್ಣನವರ | | |

| | | |
|---|---|---|
| ಆಯ್ದ ಕತೆಗಳು | ಸಂ: ಬಿ.ಆರ್. ರವಿಕಾಂತೇಗೌಡ(ವ) | ಕನ್ನಡ ಸಾಹಿತ್ಯ ಪರಿಶತ್ತು ಬೆಂಗಳೂರು |
| ೩೬. ವೈದೇಹಿಯವರ ಆಯ್ದ ಕತೆಗಳು | (ಬ್ರಾ) | ಬೆಂಗಳೂರು. ವಿ.ವಿ |
| ೩೭. ಕುವೆಂಪು ಅವರ ಕೆಲವು ಕತೆಗಳು | (ವ) | ಉದಯರವಿ, ಮೈಸೂರು |
| ೩೮. ಆಯ್ದ ರಶ್ಯನ್ ಕತೆಗಳು | ಅನು– ಶ್ರೀನಿವಾಸ ಸುತ್ರಾವೆ(ಬ್ರಾ) | ವಿನಯ ಪ್ರಕಾಶನ, ದಾವಣಗೆರೆ |
| ೩೯. ಮಹಾಪ್ರಸ್ಥಾನ ಮತ್ತು ಇತರ ಕತೆಗಳು | ಅನು: ಜಿ.ಎನ್. ರಂಗನಾಥರಾವ್(ಬ್ರಾ) | ಅಂಕಿತ, ಬೆಂಗಳೂರು |
| ೪೦. ಕಿರಗೂರಿನ ಗಯ್ಯಾಳಿಗಳು | ಪೂರ್ಣಚಂದ್ರ ತೇಜಸ್ವಿ(ವ) | ಪುಸ್ತಕ ಪ್ರಕಾಶನ, ಮೈಸೂರು |
| ೪೧. ಕರೀಗೌಡ ಬೀಚನಹಳ್ಳಿ ಆಯ್ದ ಕತೆಗಳು | (ವ) | ? |
| ೪೨. ವ್ಯಾಸರಾಯ ಬಲ್ಲಾಳರ ಆಯ್ದ ಕತೆಗಳು | (ಬ್ರಾ) | ಅಂಕಿತ, ಬೆಂಗಳೂರು |
| ೪೩. ಬೋಳುವಾರರ ಆಯ್ದ ಕತೆಗಳು | ಬೋಳುವಾರು ಮಹಮ್ಮದ್ ಕುಂಯಿ(ಇ) | ಕಾಮಧೇನು, ಬೆಂಗಳೂರು |

| ಪ್ರಬಂಧ | ಲೇಖಕ | ಪ್ರಕಾಶನ |
|---|---|---|
| ೧. ಗಾಳಿಪಟ | ರಾ ಕು | ? |
| ೨. ಮಲೆನಾಡಿನ ಚಿತ್ರಗಳು | ಕುವೆಂಪು(ಗೌ) | ಉದಯರವಿ, ಮೈಸೂರು. |
| ೩. ಸಾವದಾನ | ದ.ಬಾ. ಕುಲಕರ್ಣಿ(ಬ್ರಾ) | ಸಾಹಿತ್ಯ ಭಂಡಾರ, ಹುಬ್ಬಳ್ಳಿ |
| ೪. ಮಧುವ್ರತ | ಎನ್. ಪ್ರಹ್ಲಾದರಾವ್(ಬ್ರಾ) | ? |
| ೫. ಪರ್ಣಕುಟಿ | ಸಿದ್ಧವನಹಳ್ಳಿ ಕೃಷ್ಣಶರ್ಮ(ಬ್ರಾ) | ಜನತಾ ಪಬ್ಲಿಕೇಶನ್ಸ್, ಬೆಂಗಳೂರು |
| ೬. ಹೊಸಗನ್ನಡ ಪ್ರಬಂಧ ಸಂಕಲನ | ಗೊರೂರು ರಾ ಅಯ್ಯಂಗಾರ್(ಬ್ರಾ) | ಸಾಹಿತ್ಯ ಅಕಾಡೆಮಿ, ಹೊಸದಿಲ್ಲಿ |
| ೭. ದೇಗುಲಗಲ ದಾರಿಯಲ್ಲಿ | ಕೆ.ಬಿ.ಪ್ರಭುಪ್ರಸಾದ(ಲಿ) | ಯಶೋಭಾರತಿ .ಮೈಸೂರು |
| ೮. ಆರು ಪ್ರಬಂಧಗಳು | ರಾ. ಯ.ಧಾರವಾಡಕರ(ಬ್ರಾ) | ಸತ್ಯದೀಪ |
| ೯. ಮಿನುಗು ಮಿಂಚು | ಎ.ಎನ್.ಮೂರ್ತಿರಾವ್(ಬ್ರಾ) | ಶಾರದಾಮಂದಿರ, ಮೈಸೂರು |
| ೧೦. ಸೀಕರಣೆ | ವಿ.ಸೀ | ಗೀತಾ ಬುಕ್ ಹೌಸ್, ಮೈಸೂರು |
| ೧೧. ದೇವಕನ್ಯೆ | ರಾ ಕು(ಬ್ರಾ) | ಮಧುಪ್ರಕಾಶನ ಬೆಂಗಳೂರು |
| ೧೨. ಮುತ್ತಿನಹಾರ | ಎನ್. ಪ್ರಹ್ಲಾದರಾವ್(ಬ್ರಾ) | ಗೀತಾ ಬುಕ್ ಹೌಸ್, ಮೈಸೂರು |
| ೧೩. ಶಿವನಬುಟ್ಟಿ | ಹಿರೇಮಲ್ಲೂರು ಈಶ್ವರನ್(ಲಿ) | ? |
| ೧೪. ಈಚಲು ಮರದ ಕೆಳಗೆ | ಪು.ತಿ.ನ.(ಬ್ರಾ) | ಕಾವ್ಯಾಲಯ, ಮೈಸೂರು |

| | | |
|---|---|---|
| ೧೫. ಬೆಟ್ಟದ ಮನೆಯಲ್ಲಿಮತ್ತು | | |
| ೧೬. ಇತರ ಪ್ರಬಂಧಗಳು | ಗೊರೂರು(ಬ್ರಾ) | ಶಾರದಾ ಮಂದಿರ, ಮೈಸೂರು |
| ೧೭. ಸಲ್ಲಾಪ | ಸಂ:ಟಿ.ಎಸ್.ಲೋಹಿತಾಶ್ವ(ಬ್ರಾ)/ವಿ.ಚಿಕ್ಕವೀರಯ್ಯ(ವ) | ಅಕ್ಷಯ, ತುಮಕೂರು |
| ೧೮. ಪಂಚಕಲಶ ಗೋಪುರ | ಬಿ.ಜಿ.ಎಲ್ ಸ್ವಾಮಿ(ಬ್ರಾ) | ಕಾವ್ಯಾಲಯ, ಮೈಸೂರು |
| ೧೯. ಅಲೆಯುವ ಮನ | ಎ.ಎನ್ ಮೂರ್ತಿರಾವ್(ಬ್ರಾ) | ಕಾವ್ಯಾಲಯ, ಮೈಸೂರು |
| ೨೦. ಹೂಬುಟ್ಟಿ | ಕೆ.ಎಸ್.ಮಧುಸೂದನ(ಬ್ರಾ)/ಎಚ್.ಎನ್.ಮುರುಳೀಧರ(ಬ್ರಾ) | ಕರ್ನಾಟಕಸಂಘ, ಬೆಂಗಳೂರು |
| ೨೧. ಗದ್ಯ ಚಿತ್ರಗಳು | ಅ.ರಾ.ಮಿತ್ರ(ಬ್ರಾ) ಗೋಪಾಲಕೃಷ್ಣಯ್ಯ(ಬ್ರಾ) | |
| | ಕೆ.ವಿ.ಶ್ರೀನಿವಾಸ ಮೂರ್ತಿ(ಬ್ರಾ) | ಬೆಂಗಳೂರು ವಿ.ವಿ. |
| ೨೨. ಆಯ್ದ ಪ್ರಬಂಧಗಳು | ಪು.ತಿ.ನ.(ಬ್ರಾ) | ಗೌತಮ್ ಅಂಡ್ ಕಂಪನಿ |
| ೨೩. ಏಕಾಂತ ಮತ್ತು ಇತರ ಪ್ರಬಂಧಗಳು | ಎಸ್.ಜಿ. ಸಣ್ಣಗುಡ್ಡಯ್ಯ(ವ) | ಕಾಮದೇನು, ಬೆಂಗಳೂರು |
| ೨೪. ಆಯ್ದ ಲಲಿತ ಪ್ರಬಂಧಗಳು | ಎ.ಎನ್. ಮೂರ್ತಿರಾವ್(ಬ್ರಾ) | ಕನ್ನಡಸಂಘ ಕ್ರೈಸ್ಟ್ ಕಾಲೇಜ್, ಬೆಂಗಳೂರು |
| ೨೫. ಪ್ರಬಂಧಲೋಕ | ಕೆ.ಬಿ.ಬಳ್ಳಾರಿ(ಇ)/ಶ್ರೀನಿವಾಸರಾಜು(ಇ) | |
| | ರಾಮರಾವ್ ಕುಲಕರ್ಣಿ(ಬ್ರಾ) | ಕರ್ನಾಟಕ ಸಂಘ, ಬೆಂಗಳೂರು |
| ೨೬. ಬಾಳ್ವೆಯೇ ಬೆಳಕು | ಶಿವರಾಮ ಕಾರಂತ(ಬ್ರಾ) | ಎಸ್.ಬಿ.ಎಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು |
| ೨೭. ತೆರೆದ ಮನ | ಎಚ್. ನರಸಿಂಹಯ್ಯ(ಇ) | ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು |
| ೨೮. ನಮ್ಮ ಊರಿನ ರಸಿಕರು | ಗೊರೂರು ರಾಮಸ್ವಾಮಿ ಅಯ್ಯಂಗಾರ್(ಬ್ರಾ), | ಐಬಿಎಚ್ ಬೆಂಗಳೂರು |
| ೨೯. ಅರಸಿಕರಲ್ಲ | ಶಿವರಾಮ ಕಾರಂತ(ಬ್ರಾ) | ಸ್ವಪ್ನ ಬುಕ್ ಹೌಸ್, ಬೆಂಗಳೂರು |
| ೩೦. ರಥಸಪ್ತಮಿ ಮತ್ತು ಇತರ ಚಿತ್ರಗಳು | ಪು.ತಿ.ನ(ಬ್ರಾ) | ಪು.ತಿ.ನ. ಟ್ರಸ್ಟ್ ಬೆಂಗಳೂರು |
| ೩೧. ಆಯ್ದ ಲಲಿತ ಪ್ರಬಂಧಗಳು | ಎ.ಎನ್. ಮೂರ್ತಿರಾವ್(ಬ್ರಾ) | ಅಂಕಿತ ಪುಸ್ತಕ, ಬೆಂಗಳೂರು |

| **ಜೀವನ/ಆತ್ಮಚರಿತ್ರೆ/ವ್ಯಕ್ತಿಚಿತ್ರ** | **ಲೇಖಕ/ಅನು** | **ಪ್ರಕಾಶನ** |
|---|---|---|
| ೧. ಪರಮೇಶ್ವರ ಪುಲಿಕೇಶಿ | ಶ್ರೀನಿವಾಸರಾವ್ ಕೊರಟಿ(ಬ್ರಾ) | ? |
| ೨. ಭಾಸಕವಿ | ಎ ಆರ್ ಕೃಷ್ಣಶಾಸ್ತ್ರಿ(ಬ್ರಾ) | ಶಾರದಾ ಮಂದಿರ ಮೈಸೂರು |
| ೩. ನಾಗ ಮಹಾಶಯ | ಎ.ಆರ್.ಕೃ(ಬ್ರಾ) | ರಾಮಕೃಷ್ಣ ಆಶ್ರಮ, ಮೈಸೂರು |

| | | |
|---|---|---|
| ೪. ರಾಬರ್ಟ್ ಓವೆನ್ | ? | ? |
| ೫. ಸ್ವಾಮಿ ವಿವೇಕಾನಂದ | ಕುವೆಂಪು(ವ) | ಉದಯರವಿ, ಮೈಸೂರು |
| ೬. ಸ್ವಾತಂತ್ರಯೋಧ ಶ್ರೀ ಅರವಿಂದ | ಕೊ ಚನ್ನಬಸಪ್ಪ(ಲಿ) | ರಾಷ್ಟ್ರೋತ್ಥಾನಪರಿಶತ್, ಬೆಂಗಳೂರು |
| ೭. ರವೀಂದ್ರ ದರ್ಶನ | ಸದಾಶಿವ ಒಡೆಯರ್(ಲಿ) | ಸಾಹಿತ್ಯ ಭಂಡಾರ, ಹುಬ್ಬಳ್ಳಿ |
| ೮. ಪ್ರಫುಲ್ಲಚಂದ್ರ ರಾಯ್ | ಸೂ. ಸುಬ್ರಹ್ಮಣ್ಯಂ(ಬ್ರಾ) | ಸ್ಟಾಂಡರ್ಡ್ ಬುಕ್ ಡಿಪೋ, ಬೆಂಗಳೂರು |
| ೯. ಗುರುನಾನಕ್ | ತ ಸು ಶಾಮರಾಯ | ಬೆಂಗಳೂರು ವಿ. ವಿ |
| ೧೦. ಕ್ರಾಂತಿಕಾರಿ ಅಂಬೇಡ್ಕರ್ | ದೇ. ಜವರೇಗೌಡ(ವ) | ಬೆಂಗಳೂರು. ವಿ. ವಿ. |
| ೧೧. ನೆನಪುಗಳು | ಕೆ.ವಾಸುದೇವಾಚಾರ್ಯ(ಬ್ರಾ) | ಕಾವ್ಯಾಲಯ, ಮೈಸೂರು |
| ೧೨. ವಿವೇಕಾನಂದ | ಪ್ರಭುಶಂಕರ(ಲಿ) | ಮೈಸೂರು ವಿ.ವಿ. ಮೈಸೂರು |
| ೧೩. ದಲಿತ ಸೂರ್ಯ | ಎಚ್.ಜೆ.ಲಕ್ಕಪ್ಪ ಗೌಡ(ಇ) | ಕುವೆಂಪು ವಿ.ವಿ, ಬಿ.ಆರ್, ಪ್ರಾಜೆಕ್ಟ್ |
| ೧೪. ಭಗತ್ ಸಿಂಗ್ | ಜಿ. ರಾಮಕೃಷ್ಣ(ಬ್ರಾ) | ಬೆಂಗಳೂರು |
| ೧೫. ಜ್ಞಾಪಕ ಚಿತ್ರಶಾಲೆ | ಡಿ. ವಿ. ಜಿ(ಬ್ರಾ) | ಗೋಖಲೆ ಸಾರ್ವಜನಿಕ ಸಂಸ್ಥೆ, ಬೆಂಗಳೂರು |
| ೧೬. ಉಚಲ್ಯ | ಲಕ್ಷ್ಮಣ ಗಾಯಕವಾಡ್(ಇ) | |
| ೧೭. ಅನು; ಚಂದ್ರಕಾಂತ ಪೋಕಳೆ(ಇ) | ನವಕರ್ನಾಟಕ, ಬೆಂಗಳೂರು | |
| ೧೮. ಊರುಕೇರಿ | ಸಿದ್ದಲಿಂಗಯ್ಯ(ಇ) | ಅಕ್ಷರ, ಹೆಗ್ಗೋಡು |
| ೧೯. ನನ್ನ ರಸಯಾತ್ರೆ | ಮಲ್ಲಿಕಾರ್ಜುನ ಮನ್ಸೂರ್(ಲಿ) | |

| **ಪ್ರವಾಸ ಕಥನ** | **ಲೇಖಕ/ಅನು** | **ಪ್ರಕಾಶನ** |
|---|---|---|
| ೧. ಅಮೆರಿಕದಲ್ಲಿ ನಾನು | ಬಿ.ಜಿ.ಎಲ್.ಸ್ವಾಮಿ | ಕಾವ್ಯಾಲಯ, ಮೈಸೂರು |
| ೨. ಸಮುದ್ರದಾಚೆಯಿಂದ | ವಿ ಕೃ ಗೋಕಾಕ್ | ಸುರುಚಿ ಮೈಸೂರು |
| ೩. ಸೋವಿಯತ್ ದಿನಚರಿ | ಎಚ್ ವಿ ಶ್ರೀರಂಗರಾಜ್(ಇ) | ಜೆ ಎಸ್ ಎಸ್ ಪ್ರಿಂಟರ್ಸ್ ಮೈಸೂರು |
| ೪. ನಾನೂ ಅಮೆರಿಕೆಗೆ ಹೋಗಿದ್ದೆ | ಕೃಷ್ಣಾನಂದ ಕಾಮತ(ಬ್ರಾ) | ಮನೋಹರ ಗ್ರಂಥಮಾಲೆ.ಧಾರವಾಡ |
| ೫. ಮಾಸ್ಕೋದಲ್ಲಿ ಇಪ್ಪತ್ತೆರಡು ದಿನ | ಜಿ.ಎಸ್. ಶಿವರುದ್ರಪ್ಪ(ಲಿ) | ಶಾರದಾ ಪ್ರಕಾಶನ, ಬೆಂಗಳೂರು |
| ೬. ಗಂಗೆಗೆ ಬಿದ್ದ ಬೆಂಕಿ | ಸಿ.ಬಿ. ಚಂದ್ರಶೇಖರ(ಲಿ) | ಜಿ.ಕಲ್ಲಯ್ಯ ಅಂಡ್ ಸನ್ಸ್, ಬೆಂಗಳೂರು |
| ೭. ಜನಗಣಮನ | ಹೆಚ್.ಎಸ್.ರಾಘವೇಂದ್ರ ರಾವ್(ಬ್ರಾ) | ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು |

| | | |
|---|---|---|
| ೮. ಪಂಪಾಯಾತ್ರೆ | ವಿ. ಸೀತಾರಾಮಯ್ಯ(ಬ್ರಾ) | ವಿ.ಸೀ. ಸಂಪದ, ಬೆಂಗಳೂರು |

| ವಿಚಾರ ಸಾಹಿತ್ಯ | ಲೇಖಕ/ಅನು | ಪ್ರಕಾಶನ |
|---|---|---|
| ೧. ವಿಚಾರ ಲಹರಿ | ಕೆ ವೆಂಕಟರಾಮಪ್ಪ(ಬ್ರಾ) | |
| ೨. ಆಯ್ದ ಬಿಡಿ ಬರಹಗಳು | ಶಿವರಾಮ ಕಾರಂತ(ಬ್ರಾ) | ಅಕ್ಷರ ಪ್ರಕಾಶನ, ಹೆಗ್ಗೋಡು |
| ೩. ವಿಚಾರಸಾಹಿತ್ಯ–೧ | ಜಿ.ಎಸ್.ಶಿವರುದ್ರಪ್ಪ(ಲಿ)/ಕ.ವೆಂ.ರಾಜಗೋಪಾಲ(ಬ್ರಾ) | ಬೆಂಗಳೂರು ವಿ.ವಿ |
| ೪. ವಿಚಾರ ಸಾಹಿತ್ಯ–೨ | ಕೆ.ವಿ.ನಾರಾಯಣ(ಇ)/ ಕಾಳೆಗೌಡ ನಾಗವಾರ(ವ) | ಬೆಂಗಳೂರು ವಿ.ವಿ |
| ೫. ವಿಚಾರ ಸಾಹಿತ್ಯ–೩ | ಎಚ್.ಜಿ.ಸಣ್ಣಗುಡ್ಡಯ್ಯ(ವ)/ಎಸ್.ಜಿ.ಎಸ್(ಇ) | |
| ೬. ಕೆ.ವಿ.ಸುಬ್ಬಕೃಷ್ಣ ಶಾಸ್ತ್ರಿ(ಬ್ರಾ) | ಬೆಂ.ವಿ.ವಿ | |
| ೭. ವಿಚಾರ ದರ್ಶನ | ಅನಸೂಯಮ್ಮ(ಲಿ)/ರಂಗಾರೆಡ್ಡಿ ಕೋಡಿರಾಂಪುರ(ವ) | ಬೆಂಗಳೂರು ವಿ.ವಿ |
| ೮. ವಿಚಾರ ಮಂಥನ | ಚಂದ್ರಣ್ಣ ಗೌಡ(ವ)/ಕುಂದಗೋಳ್(ಲಿ) | ಬೆಂಗಳೂರು ವಿ.ವಿ. |
| ೯. ವಿಚಾರ ವಾಹಿನಿ | ಗೋಕುಲ್ ನಾಥ್(ಬ್ರಾ)/ಶೀಲಾದೇವಿ ಮಳೀಮಠ್(ಲಿ) | ಬೆಂಗಳೂರು ವಿ.ವಿ |
| ೧೦. ವಿಚಾರ ಸಾಹಿತ್ಯ | ಟಿ.ಎಲ್. ವೆಂಕಣ್ಣ,(ಬ್ರಾ) ಎನ್. ನರಹರಿ(ಬ್ರಾ) | ಬೆಂಗಳೂರು ವಿ.ವಿ |
| ೧೧. ವಿಚಾರ ಧಾರೆ | ಬಿ.ಎಸ್. ಸುಬ್ಬರಾವ್,(ಬ್ರಾ) ಚಂದ್ರಮ್ಮ(?) | ಬೆಂಗಳೂರು ವಿ.ವಿ |

| ವಿಮರ್ಶೆ | ಲೇಖಕ/ಸಂಪಾದಕರು | ಪ್ರಕಾಶನ |
|---|---|---|
| ೧. ಕಾವ್ಯ ಸಮೀಕ್ಷೆ | ತೀ. ನಂ. ಶ್ರೀ(ಬ್ರಾ) | ಕಾವ್ಯಾಲಯ, ಮೈಸೂರು |
| ೨. ಕಾವ್ಯ ಮಂಥನ | ಕೆ. ವೆಂಕಟರಾಮಪ್ಪ(ಬ್ರಾ) | ಪ್ರಸಾದ ಪುಸ್ತಕ ಮಂದಿರ, ಮೈಸೂರು |
| ೩. ಸಾಹಿತ್ಯ ಸಾನ್ನಿಧ್ಯಂ | ಜಿ. ವರದರಾಜರಾವ್(ಬ್ರಾ) | ಉಷಾ ಸಾಹಿತ್ಯ ಮಾಲೆ, ಮೈಸೂರು |
| ೪. ಹೃದಯ ಸಂವಾದ | ಸುಜನಾ(ಇ) | ಮೈತ್ರಿ ಪ್ರಕಾಶನ, ಮೈಸೂರು |
| ೫. ನವ್ಯ ವಿಮರ್ಶೆ | ಗಿರಡ್ಡಿ ಗೋವಿಂದರಾಜ(ಲಿ) | ಅಕ್ಷರ ಪ್ರಕಾಶನ,ಹೆಗ್ಗೋಡು |
| ೬. ವಿಮರ್ಶೆಯ ದಾರಿ–೧ | ? | ಬೆಂಗಳೂರು ವಿಶ್ವವಿದ್ಯಾಲಯ |
| ೭. ವಿಮರ್ಶೆಯ ದಾರಿ–೨ | ? | ಬೆಂಗಳೂರು ವಿಶ್ವವಿದ್ಯಾಲಯ |

| ಇತರೆ | ಲೇಖಕ | ಪ್ರಕಾಶನ |
|---|---|---|
| ೧. ಕನ್ನಡ ಗದ್ಯ ವಿಕಾಸ? | ಎನ್. ಬಸವಾರಾಧ್ಯ(ಲಿ) | ಪ್ರಾಚ್ಯ ಕಾವ್ಯಪ್ರಕಾಶಮಂದಿರ, ಬೆಂಗಳೂರು |
| ೨. ಕನ್ನಡ ಗದ್ಯಾವಲೋಕನ | ಎನ್ ಬಸವಾರಾಧ್ಯ | ಪ್ರಾಚ್ಯ ಕಾವ್ಯಪ್ರಕಾಶಮಂದಿರ, ಬೆಂಗಳೂರು |

**ಬಿ.ಕಾಂ ಪದವಿಗೆ**–ವ್ಯವಹಾರಿಕ ಕನ್ನಡ

**ಬಿ.ಬಿ.ಎಂ ಪದವಿಗೆ**–ಸಂವಹನ ಕೌಶಲ,

೧) ಸಂವಹನ ಮತ್ತು ಸಮೂಹ ಮಾಧ್ಯಮಗಳು: ಲಕ್ಷಣ, ಚರಿತ್ರೆ, ಅಭಿವ್ಯಕ್ತಿ ಸ್ವಾತಂತ್ರ್ಯ.

೨) ಸಮೂಹ ಸಂವಹನ–ವಿವಿಧ ಮಾಧ್ಯಮಗಳು: ಶಬ್ಧ, ದೃಶ್ಯ, ಅಕ್ಶರ, ಖಾಸಗಿ, ಸರ್ಕಾರಿ ಮಾಧ್ಯಮಗಳು. ಶಿಕ್ಷಣ, ಪ್ರಚಾರ, ಮನರಂಜನೆ. ಸವಾಲುಗಳು

೩) ಮಾಧ್ಯಮಗಳ ಮಿತಿ ಮತ್ತು ವ್ಯಾಪ್ತಿ: ಪತ್ರಿಕೆ, ರೇಡಿಯೊ. ದೂರದರ್ಶನ, ಜನಾಭಿಪ್ರಾಯ, ಸಂಶೋಧನೆ ಮತ್ತು ಅಭಿವೃದ್ಧಿ.

೪) ಸಮೂಹ ಸಂವಹನ ಮತ್ತು ಸಾರ್ವಜನಿಕ ವ್ಯಕ್ತಿ: ರೇಡಿಯೊ, ದೂರದರ್ಶನ, ಸಿನಿಮಾ, ಧ್ವನಿಸುರುಳಿ, ನಿಯತಕಾಲಿಕೆ, ವೃತ್ತಪತ್ರಿಕೆ, ಕರಪತ್ರ, ಪುಸ್ತಕ, ಜಾಹಿರಾತು, ಸುದ್ಧಿಚಿತ್ರ, ಗಣಕಯಂತ್ರ, ದೂರವಾಣಿ, ಉಪಗ್ರಹ, ವ್ಯಂಗ್ಯಚಿತ್ರ, ಭಿತ್ತಿಪತ್ರ, ಗೋಡೆಬರಹ, ಸಾಕ್ಷ್ಯಚಿತ್ರ, ಜಾನಪದ ಸಾಹಿತ್ಯ, ಗ್ರಾಮೀಣ ಪತ್ರಿಕೋಧ್ಯಮ.

೫) ವಿಚಾರ ಸಂಕಿರಣ

೬) ವ್ಯವಹಾರ: ಸಂಕ್ಷೇಪ ಲೇಖನ, ಪತ್ರವಿನ್ಯಾಸ, ವರದಿ

**ಬಿ.ಎಫ್ ಎ ಪದವಿಗೆ; ಆಂತರಿಕ ಅಂದಾಜು ಪತ್ರ್ಯ–೧.**

ಅನುವಾದ, ಸಂಕ್ಷೇಪ ಲೇಖನ, ಕಲಾವಿದರ ಪರಿಚಯ, ಶೈಕ್ಷಣಿಕ ಕಲಾ ಪ್ರವಾಸಗಳ ವರದಿ

**ಆಂತರಿಕ ಅಂದಾಜು ಪತ್ರ್ಯ–೨.**೧)ಜಾನಪದ, ಸಾಂಪ್ರದಾಯಿಕ, ಆಧುನಿಕ ಚಿತ್ರಗಳ ಪ್ರಾಯೋಗಿಕ ವಿಮರ್ಶೆ ೨)ಕಲಾ ಪ್ರದರ್ಶನಕ್ಕೆ ಸಿದ್ಧತೆ ೩)ಚಿತ್ರಕಲಾ ಪ್ರದರ್ಶನಗಳ ವರದಿ ೪)ಕಲಾ ಪ್ರಬಂಧಗಳ ರಚನೆ

## ಅನುಬಂಧ-೨

## ಪ್ರತಿ ಅವಧಿಗೆ ನಿಯಮಿತವಾಗುತ್ತಿದ್ದ ಪಠ್ಯಕ್ರಮದ ಕೆಲವು ಮಾದರಿಗಳು

(ಬದಲಾವಣೆಗಳನ್ನು ಗುರುತಿಸುವಂತೆ)

**ಟಿಪ್ಪಣಿ:** ಎಪ್ಪತ್ತರ ದಶಕದಲ್ಲಿ ಜಿ.ಎಸ್.ಶಿವರುದ್ರಪ್ಪನವರು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಗೆ ಬರುವವರೆಗೆ ಮೈಸೂರು ವಿಶ್ವವಿದ್ಯಾಲಯದ ಪಠ್ಯಕ್ರಮವನ್ನು ಅನುಸರಿಸಿರುವುದು ಕಂಡುಬರುತ್ತದೆ. ಜಿ.ಎಸ್.ಎಸ್ ಕನ್ನಡ ಅಧ್ಯಯನ ಸಂಸ್ಥೆಯ ನೇತೃತ್ವವನ್ನು ವಹಿಸಿಕೊಂಡ ನಂತರದಲ್ಲಿ ಪಠ್ಯಕ್ರಮದಲ್ಲಿ ಮತ್ತು ಪಠ್ಯಪುಸ್ತಕ ಸ್ವರೂಪದಲ್ಲಿ ಹಲವಾರು ಬದಲಾವಣೆಗಳಾದವು. ಕನ್ನಡ ಅಧ್ಯಯನ ಮಂಡಳಿಯ ವ್ಯಾಪ್ತಿಯಲ್ಲೆ ತೆಗೆದುಕೊಂಡ ನಿರ್ಧಾರಗಳಿಂದಾಗಿ ಆದ ಬದಲಾವಣೆಗಳು ಇವು. ಇಲ್ಲಿಯವರೆಗೆ ಇದ್ದ ಏಕವ್ಯಕ್ತಿಯ ಕಾವ್ಯ ಸಂಕಲನಗಳ ಬದಲಿಗೆ ಅನೇಕವ್ಯಕ್ತಿಗಳ ಕಾವ್ಯ ಸಂಕಲನಗಳು ಪಠ್ಯಕ್ರಮದಲ್ಲಿ ಪ್ರವೇಶ ಪಡೆದವು. ಕನ್ನಡ ಸಾಹಿತ್ಯ ಪರಂಪರೆಯನ್ನು ಕಟ್ಟಿದ ಪ್ರಮುಖ ಕವಿಗಳು ಎಂಬ ಸಾಂಪ್ರದಾಯಿಕ ಗ್ರಹಿಕೆಯ ಹಿನ್ನೆಲೆಯಲ್ಲಿ ಈ ಬಗೆಯ ಪಠ್ಯ ನಿರ್ಧಾರ ಪ್ರಾಮುಖ್ಯತೆ ಪಡೆಯಿತು. ಜಿ.ಎಸ್.ಎಸ್ ನಂತರದಲ್ಲೂ ಅವರು ಹಾಕಿಕೊಟ್ಟ ಮಾದರಿಯೇ ಮುಂದುವರಿಯುವಂತಾಯಿತು. ೨೦೦೪ರಲ್ಲಿ ಸೆಮಿಸ್ಟರ್ ಪದ್ಧತಿ ಶುರುವಾದಾಗ ವಾರ್ಷಿಕ ಪಠ್ಯಕ್ರಮವನ್ನು ಹಾಗೆಯೇ ಉಳಿಸಿಕೊಂಡು ಸೆಮಿಸ್ಟರ್ ಪರೀಕ್ಷೆಗಳಿಗಾಗಿ ಎರಡು ಭಾಗಗಳಾಗಿ ಒಡೆದುಕೊಳ್ಳಲಾಯಿತು. ೨೦೦೭-೦೮ರ ಸಾಲಿನಿಂದ ಬಸವರಾಜ ಕಲ್ಗುಡಿಯವರ ನೇತೃತ್ವದಲ್ಲಿ ಪಾರಂಪರಿಕ ಪಠ್ಯಕ್ರಮದ ಜಾಗದಲ್ಲಿ ಥೀಮ್ ಆಧಾರಿತ ಪಠ್ಯಕ್ರಮ ಜಾರಿಗೊಂಡಿತು.

**೧೯೬೪-೬೫**

[ ಬೆಂಗಳೂರು ವಿಶ್ವವಿದ್ಯಾಲಯ ಆರಂಭವಾದ ಮೊದಲ ಕೆಲವು ವರ್ಷಗಳು ಪದವಿ ತರಗತಿಗಳಿಗೆ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಭಾಷೆಯ ಪಠ್ಯಕ್ರವನ್ನು ಅನುಸರಿಸಲಾಯಿತು. ಆಗಿನ ಪಠ್ಯಕ್ರಮದ ಮಾದರಿ]

ಮೊದಲ **ಬಿಎ,ಬಿಎಸ್ಸಿ,**

| | | |
|---|---|---|
| ಪಕ್ಷಿಕಾಶಿ | ಕುವೆಂಪು | ಉದಯರವಿ ಪ್ರಕಾಶನ, ಮೈಸೂರು |
| ಭಾವಚಿಂತಾರತ್ನ | | |

| | | |
|---|---|---|
| ವಿಶವೃಕ್ಷ | ಬಿ ವೆಂಕಟಾಚಾರ್ಯ | ಜಿ ಕೆ ಅಂಡ್ ಬ್ರದರ್ಸ್, ಬೆಂಗಳೂರು |
| ಯಶೋಧರ | ಶ್ರೀನಿವಾಸ | ಜೀವನಕಾರ್ಯಾಲಯ ಟ್ರಸ್ಟ್, ಬೆಂಗಳೂರು |
| **ಮೊದಲ ಬಿಕಾಂ** | | |
| ವ್ಯವಹಾರಿಕ ಕನ್ನಡ | | |
| ಗಾಳಿಪಟ | ರಾ ಕು | |
| ಹರಿಶ್ಚಂದ್ರಕಾವ್ಯ ಸಂಗ್ರಹ | ಟಿ.ಎಸ್.ವೆಂಕಣ್ಣಯ್ಯ | ಮೈಸೂರು.ವಿಶ್ವ ವಿದ್ಯಾಲಯ. |
| **ಎರಡನೆ ಬಿಎ, ಬಿಎಸ್ಸಿ, ಬಿಕಾಂ** | | |
| ಸೊಹ್ರಾಬ್ ರುಸ್ತುಂ | ವಿ. ಸೀ. | ಕರ್ಣಾಟಕ ಸಂಘ, ಬೆಂಗಳೂರು. |
| ಧರ್ಮಾಮೃತ ಸಂಗ್ರಹಂ | ದೇ.ಜವರೇಗೌಡ | ನರೇಶ್ ಅಂಡ್ ಕಂ, ಬೆಂಗಳೂರು. |
| ಮಾಡಿ ಮಡಿದವರು | ಬಸವರಾಜ ಕಟ್ಟೀಮನಿ | ಶಾರದಾ ಪ್ರಕಟಣಾಲಯ, ಬೆಂಗಳೂರು. |
| ಗೊಲ್ಗೊಥಾ ಮತ್ತು ವೈಶಾಖ | ಗೋವಿಂದ ಪೈ | ಕಾವ್ಯಾಲಯ, ಮೈಸೂರು. |

೧೯೭೦-೭೧

[ಜಿ.ಎಸ್.ಶಿವರುದ್ರಪ್ಪನವರು ಬೆಂಗಳೂರು ವಿಶ್ವವಿದ್ಯಾಲಯವನ್ನು ಪ್ರವೇಶಿದ ನಂತರದಲ್ಲಿ ಪಠ್ಯಕ್ರಮದ ನಿರ್ಧಾರವನ್ನು ಸ್ವತಂತ್ರವಾಗಿ ನಿರ್ಧರಿಸುವ ಕ್ರಮ ಜಾರಿಗೆ ಬಂದಿತು. ಇಲ್ಲೂ ಸಹ ಮೊದಲಿಗೆ ಮೈಸೂರು ವಿಶ್ವವಿದ್ಯಾಲಯದ ಪಠ್ಯಕ್ರಮ ಮಾದರಿಯನ್ನೇ ಅನುಸರಿಸಲಾಗಿದೆ. ಬಿಕಾಂ ಪದವಿಗೆ ಮೊದಲ ವರ್ಷದಕಲಿಕೆಯಲ್ಲಿಯೇ ವ್ಯವಹಾರಿಕ ಕನ್ನಡ ಕಲಿಕೆ ಇದ್ದದ್ದು ತಿಳಿದು ಬರುತ್ತದೆ. ಏಕವ್ಯಕ್ತಿ ಬರಹಗಳು ಪಠ್ಯಕ್ರಮಗಳಾಗಿದ್ದು, ಪಠ್ಯಗಳನ್ನು ಪೂರ್ಣ ಪ್ರಮಾಣದಲ್ಲಿ ಖಾಸಗಿ ಪ್ರಕಾಶಕರೇ ಒದಗಿಸುತ್ತಿದ್ದುದನ್ನು ಗಮನಿಸಿಕೊಳ್ಳಬಹುದಾಗಿದೆ]

| | | |
|---|---|---|
| **ಪ್ರಥಮ ಬಿಕಾಂ( ಪರಿಶ್ಕೃತ ವ್ಯವಸ್ಥೆ)** | | |
| ವ್ಯವಹಾರಿಕ ಕನ್ನಡ | | |
| ಆರು ಪ್ರಬಂಧಗಳು | ರಾ. ಯ.ಧಾರವಾಡಕರ | ಸತ್ಯದೀಪ ಪ್ರಕಾಶನ |
| ಭಾರತ ಕಥಾಮಂಜರಿ | ಸುಜನಾ | ಸರಸ ಸಾಹಿತ್ಯ ಪ್ರಕಾಶನ ಮೈಸೂರು |
| ವಿಜಯ ಕಲ್ಯಾಣ | ಎಚ್. ತಿಪ್ಪೇರುದ್ರಸ್ವಾಮಿ | ಗೀತಾ ಬುಕ್ ಹೌಸ್, ಮೈಸೂರು |
| **ಪ್ರಥಮ ಬಿಎ ಬಿಎಸ್ಸಿ** | | |
| ಕಾವ್ಯ ಮಂಥನ | ಕೆ. ವೆಂಕಟರಾಮಪ್ಪ | ಪ್ರಸಾದ ಪುಸ್ತಕ ಮಂದಿರ, ಮೈಸೂರು |
| ಭಾವಚಿಂತಾರತ್ನ | ಸಂ:ಸಿ ಮಹಾದೇವಪ್ಪ | ಗೌರಿಶಂಕರ್ ಬುಕ್ ಡಿಪೊ ಮೈಸೂರು |
| ಅಶ್ವತ್ಥಾಮನ್ | ಶ್ರೀ | ವಿಶ್ವ ಸಾಹಿತ್ಯ, ಮೈಸೂರು |
| ಅನ್ನ | ರಂ.ಶ್ರೀ. ಮುಗಳಿ | ಉಶಾ ಸಾಹಿತ್ಯ ಮಾಲೆ, ಮೈಸೂರು |
| **ದ್ವಿತೀಯ ಬಿಕಾಂ** | | |

| | | |
|---|---|---|
| ವ್ಯವಹಾರಿಕ ಕನ್ನಡ | | |
| ಗೋಪುರ | ಹೇಮಂತ | ಉಶಾ ಸಾಹಿತ್ಯ ಮಾಲೆ, ಮೈಸೂರು |
| ಜನನಾಯಕ | ವಿ.ಕೃ ಗೋಕಾಕ್ | ಸುರುಚಿ ಮೈಸೂರು |
| ದೇಗುಲಗಳ ದಾರಿಯಲ್ಲಿ | ಕೆ.ಬಿ.ಪ್ರಭುಪ್ರಸಾದ್ | ಯಶೋಭಾರತಿ , ಮೈಸೂರು |
| **ಎರಡನೆ ಬಿಎ ಬಿಎಸ್ಸಿ** | | |
| ಶ್ರೀರಾಮಾಶ್ವಮೇದ ಸಂಗ್ರಹಂ, | ಮುದ್ದಣ/ಸಂ:ಅನಂತರಂಗಾಚಾರ್ | ಸ್ವಂಚ್ಚಂದ ಪ್ರಕಾಶನ |
| ಸ್ವಾತಂತ್ರಯೋಧ ಶ್ರೀ ಅರವಿಂದ | ಕೊ ಚನ್ನಬಸಪ್ಪ | ರಾಶ್ಟ್ರೋತ್ಥಾನಪರಿಶತ್, ಬೆಂಗಳೂರು |
| ಅತಿಥಿ | ಪು ತಿ ನ | |
| ಮಿನುಗು ಮಿಂಚು | ಎ.ಎನ್.ಮೂರ್ತಿರಾವ್ | ಶಾರದಾಮಂದಿರ, ಮೈಸೂರು |

೧೯೭೮–೭೯

[ಬೆಂಗಳೂರು ವಿಶ್ವವಿದ್ಯಾಲಯ ಸ್ವತಂತ್ರವಾಗಿ ಕನ್ನಡ ಪಠ್ಯಕ್ರಮಗಳನ್ನು ಮುದ್ರಿಸಲು ಆರಂಭಿಸಿದ ಕಾಲ ಇದು. ಜಿ.ಎಸ್.ಎಸ್ ಇಂಥ ಪಠ್ಯಕ್ರಮದಲ್ಲಿ ತೀವ್ರವಾದ ಬದಲಾವಣೆಯನ್ನು ತರುವುದರ ಮೂಲಕ ಇಂಥ ಒಂದು ಸಾಧ್ಯತೆಯನ್ನು ಹುಟ್ಟು ಹಾಕಿದರು. ಅನೇಕ ಲೇಖಕರ ಪಠ್ಯಗಳು ಸೇರಿದ ಕಾವ್ಯ ಸಂಕಲನ ಗ್ರಂಥಗಳನ್ನು ಪಠ್ಯಕ್ರಮವಾಗಿ ಜಾರಿಗೆ ತಂದರು. ಇದು ಪ್ರಾಚೀನ ಮತ್ತು ಆಧುನಿಕ ಎರಡಕ್ಕೂ ಸಂಬಂಧಿಸಿದಂತೆ ನಡೆಯಿತು. ಪ್ರಕಾರಾನುಸಾರವಾದ ನಿರ್ದಿಶ್ಟ ಕನ್ನಡ ಸಾಹಿತ್ಯದ ಪರಿಚಯದ ಹಿನ್ನೆಲೆಯಲ್ಲಿ ಕನ್ನಡ ಭಾಶೆಯ ಪಠ್ಯಕ್ರಮ ಶುರುವಾದದ್ದು ಇಲ್ಲಿಂದಲೇ]

| | | |
|---|---|---|
| **ಮೊದಲ ಬಿಎ, ಬಿಎಸ್ಸಿ, ಬಿಕಾಂ** | | |
| ಮಧ್ಯಕಾಲೀನ ಕನ್ನಡ ಕವಿತೆ–೧ | ಎಂ.ಚಿದಾನಂದಮೂರ್ತಿ | |
| | ಎಂ.ಎಸ್.ವೆಂಕಟರಾವ್/ಕಿ.ರಂ.ನಾಗರಾಜ | ಬೆಂಗಳೂರು ವಿಶ್ವವಿದ್ಯಾಲಯ |
| ಕರ್ನಾಟಕ ಶಾಕುಂತಲ ನಾಟಕಂ | ಬಸವಪ್ಪಶಾಸ್ತ್ರಿ | ಶಾರದಾ ಮಂದಿರ ಮೈಸೂರು |
| ಆಯ್ದ ಕತೆಗಳು | ಕೆ. ಸದಾಶಿವ | ಬಾಪ್ಕೊ ಪ್ರಕಾಶನ, ಬೆಂಗಳೂರು |
| ಸಲ್ಲಾಪ | ಸಂ:ಲೋಹಿತಾಶ್ವ | ಅಕ್ಶಯ, ತುಮಕೂರು |
| **ದ್ವಿತೀಯ ಬಿಎ, ಬಿಎಸ್ಸಿ** | | |
| ಎಲ್ಲಾ ನನ್ನವರೆ | ಚಿ.ನ. ಮಂಗಳ | ಅಭ್ಯುದಯ, ಮೈಸೂರು |
| ಸಮಕಾಲೀನಕನ್ನಡಕವಿತೆ–೧ | ಜಿ.ಎಸ್.ಎಸ್/ಹೆಚ್.ಜಿ.ಸಣ್ಣಗುಡ್ಡಯ್ಯ | |
| | ಸಿ.ಶ್ರೀನಿವಾಸರಾಜು | ಬೆಂಗಳೂರು. ವಿ.ವಿ. |
| ವಿಮರ್ಶೆಯ ದಾರಿ | ? | ಬೆಂಗಳೂರು. ವಿ.ವಿ |

| | | |
|---|---|---|
| ವಿಚಾರ ಸಾಹಿತ್ಯ | ಜಿ.ಎಸ್.ಎಸ್ | |
| | ಕಾ.ವೆಂ ರಾಜಗೋಪಾಲ | ಬೆಂಗಳೂರು. ವಿ.ವಿ |

**ದ್ವಿತೀಯ ಬಿಕಾಂ**

| | | |
|---|---|---|
| ಎಲ್ಲಾ ನನ್ನವರೆ | ಚಿ.ನಾ. ಮಂಗಳ | |
| ಸಮಕಾಲೀನ ಕನ್ನಡ ಕವಿತೆ | ಜಿ.ಎಸ್.ಎಸ್/ಹೆಚ್.ಜಿ.ಸಣ್ಣಗುಡ್ಡಯ್ಯ | |
| | ಸಿ.ಶ್ರೀನಿವಾಸರಾಜು | ಬೆಂಗಳೂರು.ವಿ.ವಿ |
| ವ್ಯವಹಾರಿಕ ಕನ್ನಡ | | |

**೧೯೯೫–೯೬**

[ಇದು ಜಾಗತಿಕವಾದ ವಿದ್ಯಮಾನಗಳಿಂದಾಗಿ ವ್ಯವಹಾರಿಕ ನಿರ್ವಹಣೆಯ ಕೋರ್ಸುಗಳು ಬಿ.ಬಿ.ಎಂ. ಮತ್ತು ಬಿ.ಎಫ್.ಎ ಕೋರ್ಸುಗಳು ಆರಂಭವಾದ ಕಾಲ.]

**ಮೊದಲ ಬಿಎ, ಬಿಕಾಂ, ಬಿಎಸ್ಸಿ**

| | | |
|---|---|---|
| ಪ್ರಾಚೀನ ಕಾವ್ಯ ಮಾರ್ಗ–೪ | ಡಿ. ಲಿಂಗಯ್ಯ/ ಶಿವರಾಮಯ್ಯ | ಬೆಂಗಳೂರು ವಿ.ವಿ |
| ಗುಣಮುಖ | ಲಂಕೇಶ್ | ಪತ್ರಿಕೆ ಪ್ರಕಾಶನ, ಬೆಂಗಳೂರು |
| ಮಿರ್ಜಿ ಅಣ್ಣಾರಾಯರ ಆಯ್ದ ಕತೆಗಳು | | ಸುಂದರ ಪುಸ್ತಕ, ಸಪ್ತಾಪುರ, ಧಾರವಾಡ |
| ಏಕಾಂತ ಮತ್ತು ಇತರ ಪ್ರಬಂಧಗಳು | ಎಸ್.ಜಿ. ಸಣ್ಣಗುಡ್ಡಯ್ಯ | ಕಾಮದೇನು, ಬೆಂಗಳೂರು |

**ಪ್ರಥಮ ಬಿಎಫ್ ಎ,**

| | | |
|---|---|---|
| ಯಶೋಧರ | ಶ್ರೀನಿವಾಸ | ಜೀವನ ಕಾರ್ಯಾಲಯ, ಬೆಂಗಳೂರು |
| ಸಂಧ್ಯಾರಾಗ | ಅ.ನ.ಕೃ | ಕರ್ನಾಟಕ ಬುಕ್ ಏಜನ್ಸಿ, ಬೆಂಗಳೂರು |

ಆಂತರಿಕ ಅಂದಾಜು ಪಠ್ಯ; ಅನುವಾದ, ಸಂಕ್ಷೇಪ ಲೇಖನ, ಕಲಾವಿದರ ಪರಿಚಯ, ಶೈಕ್ಷಣಿಕ ಕಲಾ ಪ್ರವಾಸಗಳ ವರದಿ

**ಪ್ರಥಮ ಬಿಬಿಎಂ**

| | | |
|---|---|---|
| ಸಮಕಾಲೀನ ಕನ್ನಡ ಕವಿತೆ–೪ | ಎನ್.ಎಸ್.ಎಲ್(ಬ್ರಾ)/ಸಿದ್ದಲಿಂಗಯ್ಯ | |
| | ಸುಮತೀಂದ್ರ ನಾಡಿಗ್ | ಬೆಂಗಳೂರು.ವಿ.ವಿ |
| ಸುಬ್ಬಣ್ಣ | ಶ್ರೀನಿವಾಸ | ಜೀವನ ಕಾರ್ಯಾಲಯ, ಬೆಂಗಳೂರು |

ಸಂವಹನ ಕೌಶಲ್ಯ: ೧) ಸಂವಹನ ಮತ್ತು ಸಮೂಹ ಮಾಧ್ಯಮಗಳು: ಲಕ್ಷಣ, ಚರಿತ್ರೆ, ಅಭಿವ್ಯಕ್ತಿ ಸ್ವಾತಂತ್ರ್ಯ.

೨) ಸಮೂಹ ಸಂವಹನ–ವಿವಿಧ ಮಾಧ್ಯಮಗಳು: ಶಬ್ದ, ದೃಶ್ಯ, ಅಕ್ಷರ, ಖಾಸಗಿ, ಸರ್ಕಾರಿ ಮಾಧ್ಯಮಗಳು. ಶಿಕ್ಷಣ, ಪ್ರಚಾರ, ಮನರಂಜನೆ. ಸವಾಲುಗಳು

೩) ಸ. ಮಾಧ್ಯಮಗಳ ಮಿತಿ ಮತ್ತು ವ್ಯಾಪ್ತಿ: ಪತ್ರಿಕೆ, ರೇಡಿಯೊ, ದೂರದರ್ಶನ, ಜನಾಭಿಪ್ರಾಯ, ಸಂಶೋಧನೆ ಮತ್ತು ಅಭಿವೃದ್ಧಿ.

೪) ಸಮೂಹ ಸಂವಹನ ಮತ್ತು ಸಾರ್ವಜನಿಕ ವ್ಯಕ್ತಿ: ರೇಡಿಯೊ, ದೂರದರ್ಶನ, ಸಿನಿಮಾ, ಧ್ವನಿಸುರುಳಿ, ನಿಯತಕಾಲಿಕೆ, ವೃತ್ತಪತ್ರಿಕೆ, ಕರಪತ್ರ, ಪುಸ್ತಕ, ಜಾಹಿರಾತು, ಸುದ್ದಿಚಿತ್ರ, ಗಣಕಯಂತ್ರ, ದೂರವಾಣಿ, ಉಪಗ್ರಹ, ವ್ಯಂಗ್ಯಚಿತ್ರ, ಭಿತ್ತಿಪತ್ರ, ಗೋಡೆಬರಹ, ಸಾಕ್ಷ್ಯಚಿತ್ರ ಜಾನಪದ ಸಾಹಿತ್ಯ, ಗ್ರಾಮೀಣ ಪತ್ರಿಕೋಧ್ಯಮ.

೫) ವಿಚಾರ ಸಂಕಿರಣ

೬) ವ್ಯವಹಾರ: ಸಂಕ್ಷೇಪ ಲೇಖನ, ಪತ್ರವಿನ್ಯಾಸ, ವರದಿ

**ದ್ವಿತೀಯ ಬಿಎ, ಬಿಎಸ್ಸಿ**

| | | |
|---|---|---|
| ಸಮಕಾಲೀನ ಕನ್ನಡ ಕವಿತೆ–೪ | ಎನ್.ಎಸ್.ಎಲ್/ಸಿದ್ದಲಿಂಗಯ್ಯ<br>ಸುಮತೀಂದ್ರ ನಾಡಿಗ್ | ಬೆಂಗಳೂರು.ವಿ.ವಿ |
| ತಲೆದಂಡ | ಗಿರೀಶ್ ಕಾರ್ನಾಡ್ | ಮನೋಹರ ಗ್ರಂಥಮಾಲ, ಧಾರವಾಡ |
| ಚಂದ್ರಗಿರಿಯ ತೀರದಲ್ಲಿ | ಸಾರಾ ಅಬೂಬಕರ್ | ಹೇಮಾಂಶು, ಮಂಗಳೂರು |
| ವಿಚಾರ ಸಾಹಿತ್ಯ–೩ | ಎಚ್.ಜಿ.ಸಣ್ಣಗುಡ್ಡಯ್ಯ<br>ಕೆ.ಎ.ಸುಬ್ಬಕೃಷ್ಣಶಾಸ್ತ್ರಿ<br>ಎಸ್.ಜಿ.ಎಸ್ | ಬೆಂಗಳೂರು ವಿ.ವಿ. |

**ದ್ವಿತೀಯ ಬಿಕಾಂ**

| | | |
|---|---|---|
| ಸಮಕಾಲೀನ ಕನ್ನಡ ಕವಿತೆ–೪ | ಎನ್.ಎಸ್.ಎಲ್/ಸಿದ್ದಲಿಂಗಯ್ಯ<br>ಸುಮತೀಂದ್ರ ನಾಡಿಗ್ | ಬೆಂಗಳೂರು.ವಿ.ವಿ |
| ಜೀಹಾದ್ | ಬೋಳುವಾರು ಮಹಮದ್ ಕುಂಯಿ | ನವಕರ್ನಾಟಕ, ಬೆಂಗಳೂರು |
| ವ್ಯವಹಾರಿಕ ಕನ್ನಡ | | |

೨೦೦೦–೦೧

[ಪಠ್ಯಕ್ರಮದ ನಿರ್ಧಾರದಲ್ಲಿ ಇಲ್ಲಿಯವರೆಗೆ ಕನಿಶ್ಟವಾಗಿದ್ದ ಪದವಿ ತರಗತಿಗಳ ಕನ್ನಡ ಬೋಧಕರಿಗೆ ಅವಕಾಶ ಒದಗಿಬಂದ ಸಂದರ್ಭ ಇದು. ಈ ಸಂದರ್ಭದಲ್ಲಾದ ಒಂದು ಬದಲಾವಣೆಯೆಂದರೆ ಪ್ರತಿ ಪದವಿ ಕೋರ್ಸಿಗೂ ಬೇರೆ ಬೇರೆ ಪಠ್ಯಗಳನ್ನು ಪಠ್ಯಕ್ರಮದೊಳಗೆ ಅಳವಡಿಸಲಾಯಿತು ಎನ್ನುವುದು]

**ಪ್ರಥಮ ಬಿಎ,**

| | | |
|---|---|---|
| ಪ್ರಾಚೀನ ಕಾವ್ಯಾಂಜಲಿ | ಸಿ.ವಿ. ವತ್ಸಲಾದೇವಿ/ಎ.ಶ್ರೀಪಾದ | ಬೆಂಗಳೂರು ವಿ.ವಿ |
| ಸಂಕ್ರಾಂತಿ | ಲಂಕೇಶ್ | ಪತ್ರಿಕೆ ಪ್ರಕಾಶನ, ಬೆಂಗಳೂರು |
| ಬೆಸಗರಹಳ್ಳಿ ರಾಮಣ್ಣನವರ ಆಯ್ದ ಕತೆಗಳು | ಸಂ: ಬಿ.ಆರ್. ರವಿಕಾಂತೇಗೌಡ | ಕನ್ನಡ ಸಾಹಿತ್ಯ ಪರಿಶತ್ತು, ಬೆಂಗಳೂರು |
| ಬಾಳ್ವೆಯೇ ಬೆಳಕು | ಶಿವರಾಮ ಕಾರಂತ | ಎಸ್.ಬಿ.ಎಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು |

| | | |
|---|---|---|
| **ಪ್ರಥಮ ಬಿಎಸ್ಸಿ** | | |
| ಪ್ರಾಚೀನ ಕಾವ್ಯ ಸೌರಭ | ನರಹಳ್ಳಿ ಬಾಲಸುಬ್ರಹ್ಮಣ್ಯ | |
| | ಸಿ.ಯು. ಮಂಜುನಾಥ್ | |
| ಕತ್ತಲೆ ಬೆಳಕು | ಶ್ರೀರಂಗ | ಮನೋಹರ ಗ್ರಂಥಮಾಲೆ, ಧಾರವಾಡ |
| ವೈದೇಹಿಯವರ ಆಯ್ದ ಕತೆಗಳು | | |
| ತೆರೆದ ಮನ | ಎಚ್. ನರಸಿಂಹಯ್ಯ | ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು |
| **ಪ್ರಥಮ ಬಿಕಾಂ** | | |
| ಪ್ರಾಚೀನ ಕಾವ್ಯಮಾಲೆ | ವಿಜಯಾ ಸುಬ್ಬರಾಜ್ | |
| | ಎಸ್.ಜಿ. ಸಿದ್ದರಾಮಯ್ಯ | ಬೆಂಗಳೂರು ವಿ.ವಿ |
| ಬಕ | ಎಂ.ಎಸ್.ಕೆ. ಪ್ರಭು | ಸಾಹಿತ್ಯ ಭಂಡಾರ, ಬೆಂಗಳೂರು |
| ಕುವೆಂಪು ಅವರ ಕೆಲವು ಕತೆಗಳು(ಗೌ) | | ಉದಯರವಿ, ಮೈಸೂರು |
| ನಮ್ಮ ಊರಿನ ರಸಿಕರು | ಗೊರೂರು ರಾಮಸ್ವಾಮಿ ಅಯ್ಯಂಗಾರ್ | ಐಬಿಎಚ್ ಬೆಂಗಳೂರು |
| **ಮೊದಲ ಬಿಎಫ್ ಎ** | | |
| ಸನ್ನಿವೇಶ | ಬಿ.ವಿ. ವೈಕುಂಠರಾಜು | ಅಕ್ಷರ, ಹೆಗ್ಗೋಡು |
| ಉದಯರಾಗ | ಆ. ನ. ಕೃ | ಕರ್ನಾಟಕ ಬುಕ್ ಏಜನ್ಸಿ, ಬೆಂಗಳೂರು |
| ಆಂತರಿಕ ಅಂದಾಜು ಪತ್ರ.. | | |
| **ಮೊದಲ ಬಿ.ಬಿ.ಎಮ್** | | |
| ಹೊಸಗನ್ನಡ ಕಾವ್ಯಮಾಲೆ, | ಕೆ.ಎಂ.ಕೋದಂಡರಾಮ್ | |
| | ಬಸವರಾಜ ವಕ್ಕುಂದ | ಬೆಂಗಳೂರು ವಿ.ವಿ |
| ಊರುಕೇರಿ | ಸಿದ್ದಲಿಂಗಯ್ಯ | ಅಕ್ಷರ, ಹೆಗ್ಗೋಡು |
| ಸಂವಹನ ಕೌಶಲ | | |
| **೨೦೦೨-೦೩ ಎರಡನೆ ಬಿಎ,** | | |
| ಆಧುನಿಕ ಕನ್ನಡ ಕವಿತೆಗಳು | ದೊಡ್ಡರಂಗೇಗೌಡ | |
| | ಮಂಗಳಾ ಪ್ರಿಯದರ್ಶಿನಿ | ಬೆಂಗಳೂರು ವಿ.ವಿ |
| ಪ್ರತಿಮಾ ನಾಟಕ | ಕೆ. ಕೃಷ್ಣಮೂರ್ತಿ | ಗೀತಾ ಬುಕ್ ಹೌಸ್ ಮೈಸೂರು |

| | | |
|---|---|---|
| ನಿಸರ್ಗ | ಮಿರ್ಜಿ ಅಣ್ಣಾರಾಯ | ಗೀತಾ ಬುಕ್ ಹೌಸ್, ಮೈಸೂರು |
| ವಿಚಾರ ದರ್ಶನ | ಅನಸೂಯಮ್ಮ | |
| | ರಂಗಾರೆಡ್ಡಿ ಕೋಡಿರಾಂಪುರ | ಬೆಂಗಳೂರು ವಿ.ವಿ |

**ಎರಡನೆ ಬಿಎಸ್ಸಿ**

| | | |
|---|---|---|
| ಇಂದಿನ ಕವಿತೆ | ಹೆಚ್.ಎಸ್,ಆರ್ | |
| | ನಲ್ಲೂರು ಪ್ರಸಾದ್ | ಬೆಂಗಳೂರು ವಿ.ವಿ |
| ಗೆಲಿಲಿಯೋ | ಅನು: ಎಚ್.ಕೆ ರಾಮಚಂದ್ರಮೂರ್ತಿ | |
| ಗೃಹಭಂಗ | ಎಸ್.ಎಲ್. ಭೈರಪ್ಪ | ಸಾಹಿತ್ಯ ಭಂಡಾರ, ಬೆಂಗಳೂರು |
| ವಿಚಾರ ಮಂಥನ | ಚಂದ್ರಣ್ಣ ಗೌಡ/ಕುಂದಗೋಳ್ | ಬೆಂಗಳೂರು ವಿ.ವಿ. |

**ಎರಡನೆ ಬಿಕಾಂ**

| | | |
|---|---|---|
| ಹೊಸಗನ್ನಡ ಕವಿತೆ | ಎಚ್.ಎಸ್.ವಿ/ಅಬ್ದುಲ್ ನಜೀರ್ | ಬೆಂಗಳೂರು ವಿ.ವಿ |
| ಆಯ್ದ ರಶ್ಯನ್ ಕತೆಗಳು | ಅನು- ಶ್ರೀನಿವಾಸ ಸುತ್ರಾವೆ | ವಿನಯ ಪ್ರಕಾಶನ, ದಾವಣಗೆರೆ |
| ವ್ಯಾವಹಾರಿಕ ಕನ್ನಡ | | |

**ಎರಡನೆ ಬಿಎಫ್ ಎ**

| | | |
|---|---|---|
| ಆಧುನಿಕ ಕನ್ನಡ ಕಾವ್ಯ ಸಂಚಯ | ಬೈರಮಂಗಲ ರಾಮೇಗೌಡ | |
| | ಹ.ಬ.ಮಹದೇವಪ್ಪ | ಬೆಂಗಳೂರು ವಿ.ವಿ |
| ವಿಚಾರ ವಾಹಿನಿ | ಗೋಕುಲ್ ನಾಥ್ | |
| | ಶೀಲಾದೇವಿ ಮಳೀಮಠ್ | ಬೆಂಗಳೂರು ವಿ.ವಿ |

**೨೦೦೪-೦೫ ಸೆಮಿಸ್ಟರ್ ಪದ್ಧತಿ**

[ಸೆಮಿಸ್ಟರ್ ಪದ್ಧತಿ ಶುರುವಾದ ಕಾಲ. ಇಲ್ಲಿಯವರೆಗೆ ವಾರ್ಷಿಕ ಪರೀಕ್ಷೆಗಳಿಗೆ ಬಳಸುತ್ತಿದ್ದ ಪ್ರಕಾರಾನುಸಾರವಾದ ಪಾರಂಪರಿಕ ಪಠ್ಯಕ್ರಮವನ್ನು ಸೆಮಿಸ್ಟರ್ ಪರೀಕ್ಷೆಗೆ ಅನುಗುಣವಾಗಿ ಭಾಗಿಸಿಕೊಳ್ಳಲಾಯಿತು]

**ಬಿಎ ಮೊದಲ ಸೆಮಿಸ್ಟರ್**

| | | |
|---|---|---|
| ಪ್ರಾಚೀನ ಕಾವ್ಯ ಕುಸುಮ-೧ | ಕೆ.ಎಂ.ಕೋದಂಡರಾಮ್ | |
| | ಎಚ್.ಎಸ್.ಮಾಧವರಾವ್ | ಬೆಂಗಳೂರು.ವಿ.ವಿ |
| ಮಲೆನಾಡಿನ ಚಿತ್ರಗಳು | ಕುವೆಂಪು | ಉದಯರವಿ ಮೈಸೂರು |

**ಎರಡನೆ ಸೆಮಿಸ್ಟರ್**

| | | |
|---|---|---|
| ಹುಯ್ಯಲವ್ವೋ ಡಂಗುರವ | ಎಚ್.ಎಂ.ಚನ್ನಯ್ಯ | ಸಂವಹನ, ಮೈಸೂರು |
| ಕಿರಗೂರಿನ ಗಯ್ಯಾಳಿಗಳು | ಕೆ.ಪಿ.ಪಿ.ತೇಜಸ್ವಿ | ಪುಸ್ತಕ ಪ್ರಕಾಶನ, ಮೈಸೂರು |
| **ಬಿಕಾಂ ಮೊದಲ ಸೆಮಿಸ್ಟೆರ್** | | |
| ಪ್ರಾಚೀನ ಕಾವ್ಯ ದರ್ಶನ–೧ | ಎನ್. ಸುನಂದ, | |
| | ಎಸ್.ಆರ್.ಜಯಶ್ರೀ | ಬೆಂಗಳೂರು ವಿ.ವಿ |
| ರಥಸಪ್ತಮಿ ಮತ್ತು ಇತರ ಚಿತ್ರಗಳು, | ಪು.ತಿ.ನ | ಪು.ತಿ.ನ. ಟ್ರಸ್ಟ್ ಬೆಂಗಳೂರು |
| **ಎರಡನೆ ಸೆಮಿಸ್ಟೆರ್** | | |
| ಆಸ್ಫೋಟ | ಟಿ.ಎನ್. ಸೀತಾರಾಮ್ | ಅಂಕಿತ ಪುಸ್ತಕ, ಬೆಂಗಳೂರು |
| ಕರೀಗೌಡ ಬೀಚನಹಳ್ಳಿ ಆಯ್ದ ಕತೆಗಳು | | |
| **ಬಿಎಸ್ಸಿ ಮೊದಲ ಸೆಮಿಸ್ಟೆರ್** | | |
| ಪ್ರಾಚೀನ ಕಾವ್ಯ ಧಾರೆ–೧ | ಕೆ. ಗೋಕುಲನಾಥ್, | |
| | ಡಿ.ಮಂಗಳಾ ಪ್ರಿಯದರ್ಶಿನಿ | ಬೆಂಗಳೂರು ವಿ.ವಿ |
| ಎ.ಎನ್. ಮೂರ್ತಿರಾಯರ | | |
| ಆಯ್ದ ಲಲಿತ ಪ್ರಬಂಧಗಳು | | ಅಂಕಿತ ಪುಸ್ತಕ, ಬೆಂಗಳೂರು |
| **ಎರಡನೆ ಸೆಮಿಸ್ಟೆರ್** | | |
| ತದ್ರೂಪಿ | ಪ್ರಸನ್ನ | ಅನನ್ಯ, ಧಾರವಾಡ |
| ವ್ಯಾಸರಾಯ ಬಲ್ಲಾಳರ ಆಯ್ದ ಕತೆಗಳು | | ಅಂಕಿತ ಪುಸ್ತಕ, ಬೆಂಗಳೂರು |
| **ಬಿಎಫ್ ಎ ಮೊದಲನೆ ಸೆಮಿಸ್ಟೆರ್** | | |
| ಜಲಗಾರ | ಕುವೆಂಪು | ಉದಯರವಿ. ಮೈಸೂರು |
| ಸುಬ್ಬಣ್ಣ | ಶ್ರೀನಿವಾಸ | ಜೀವನ ಕಾರ್ಯಾಲಯ, ಬೆಂಗಳೂರು |
| ಆಂತರಿಕ ಪಠ್ಯ: ಸಂಕ್ಷೇಪ ಲೇಖನ, ವಿಶಯ ಗ್ರಹಿಕೆ | | |
| **ಎರಡನೆ ಸೆಮಿಸ್ಟೆರ್** | | |
| ನನ್ನ ರಸಯಾತ್ರೆ | ಮಲ್ಲಿಕಾರ್ಜುನ ಮನ್ಸೂರ್ | |
| ಪ್ರಬಂಧ: ರಾಮರಾವಣರ ಯುದ್ಧ, ದಿವಾನಖಾನೆಯ ಅಂದಚಂದ, ಪಾದತ್ರಾಣ, ಋಣ, ಮೊಬೈಲ್ ಬೆನ್ನೇರಿ ಬಂತು | | |
| ಆಂತರಿಕ ಪಠ್ಯ: ವಾಚಕರ ವಾಣಿ ಪತ್ರಗಳು, ಸ್ಕೆಚ್ಚುಗಳಿಗೆ ವಿವರಣೆ ಬರೆಯುವುದು | | |
| **ಬಿಬಿಎಂ ಮೊದಲ ಸೆಮಿಸ್ಟೆರ್** | | |
| ಹೊಸಗನ್ನಡ ಕಾವ್ಯಾಂಜಲಿ–೧ | ರಾಮಯ್ಯ | |
| | ಸಿಸ್ಟರ್ ವಾಯ್‌ಲೆಟ್ | |

| | | |
|---|---|---|
| | ಲಿಂಗರಾಜಯ್ಯ | ಬೆಂಗಳೂರು. ವಿ.ವಿ |
| ಸಂವಹನ ಕೌಶಲ್ಯ | | |
| **ಎರಡನೆ ಸೆಮಿಸ್ಟರ್** | | |
| ಪಂಪಾಯಾತ್ರೆ | ವಿ. ಸೀತಾರಾಮಯ್ಯ | ವಿ.ಸೀ. ಸಂಪದ, ಬೆಂಗಳೂರು |
| ಸಂವಹನ ಕೌಶಲ್ಯ: | | |
| | | |
| **೨೦೦೫–೦೬** | | |
| **ಬಿಎ ಮೂರನೆ ಸೆಮಿಸ್ಟರ್** | | |
| ಹೊಸಗನ್ನಡಕವಿತೆಗಳು | ಕೆ.ಚಂದ್ರಣ್ಣ/ಟಿ.ಎಸ್.ನಾಗರಾಜಶೆಟ್ಟಿ | |
| | ರಂಗಾರೆಡ್ಡಿ ಕೋಡಿರಾಂಪುರ | ಬೆಂಗಳೂರು.ವಿ.ವಿ |
| ವಿಚಾರ ಸಾಹಿತ್ಯ | ಟಿ.ಎಲ್. ವೆಂಕಣ್ಣ,/ಎನ್. ನರಹರಿ | ಬೆಂಗಳೂರು ವಿ.ವಿ |
| **ನಾಲ್ಕನೆ ಸೆಮಿಸ್ಟರ್** | | |
| ವಿದಿಶೆಯ ವಿದೂಶಕ | ಅನು: ಕೆ.ವಿ. ಸುಬ್ಬಣ್ಣ | ಅಕ್ಷರ, ಹೆಗ್ಗೋಡು |
| ಉದ್ಭವ | ಬಿ.ವಿ. ವೈಕುಂಠರಾಜು | ಸನತ್, ಬೆಂಗಳೂರು |
| **ಬಿಎಸ್ಸಿ ಮೂರನೇ ಸೆಮಿಸ್ಟರ್** | | |
| ಆಧುನಿಕ ಕನ್ನಡ ಕವಿತೆ | ಯು.ಮಂಜುನಾಥ್/ಸಿ.ಜಿ.ವೆಂಕಟಯ್ಯ, | |
| | ಎನ್.ಕಾಮರಾಜ್ | ಬೆಂಗಳೂರು ವಿ.ವಿ |
| ವಿಚಾರ ಧಾರೆ | ಬಿ.ಎಸ್. ಸುಬ್ಬರಾವ್/ ಚಂದ್ರಮ್ಮ | ಬೆಂಗಳೂರು ವಿ.ವಿ |
| **ನಾಲ್ಕನೆ ಸೆಮಿಸ್ಟರ್** | | |
| ವೆನಿಸ್ಸಿನ ವರ್ತಕ | ಅನು: ಕೆ.ಎಸ್. ಭಗವಾನ್ | ಮಹಿಮ, ಮೈಸೂರು |
| ಬೆಕ್ಕಿನ ಕಣ್ಣು | ತ್ರಿವೇಣಿ | ತ್ರಿವೇಣಿ ಪಬ್ಲಿಕೇಶನ್ಸ್, ಮೈಸೂರು |
| **ಬಿಕಾಂ ಮೂರನೆ ಸೆಮಿಸ್ಟರ್** | | |
| ಹೊಸಗನ್ನಡ ಕಾವ್ಯ | ಆರ್. ಲಕ್ಷ್ಮಿನಾರಾಯಣ | |
| | ಎಂ. ಗೋವಿಂದಯ್ಯ | ಬೆಂಗಳೂರು ವಿ.ವಿ |
| ವ್ಯಾವಹಾರಿಕ ಕನ್ನಡ | | |
| **ನಾಲ್ಕನೆ ಸೆಮಿಸ್ಟರ್** | | |
| ಬೋಳುವಾರರ ಆಯ್ದ ಕತೆಗಳು | ಬೋಳುವಾರು ಮಹಮ್ಮದ್ ಕುಂಯಿ | ಕಾಮಧೇನು, ಬೆಂಗಳೂರು |
| ವ್ಯಾವಹಾರಿಕ ಕನ್ನಡ | | |

**೨೦೦೭-೦೮ ಹೊಸ ಸ್ವರೂಪದ ಪಠ್ಯಕ್ರಮ**

[ಕನ್ನಡ ಕಲಿಕೆಯ ಪಠ್ಯಕ್ರಮವನ್ನು ತೀವ್ರವಾದ ಬದಲಾವಣೆಗಳಿಗೆ ಒಳಪಡಿಸಿದ ಸಂದರ್ಭ ಇದು. ಇಲ್ಲಿಯವರೆಗಿನ ಪಾರಂಪರಿಕ ಪಠ್ಯಕ್ರಮವನ್ನು ಸಂಪೂರ್ಣವಾಗಿ ಹಿಂದೆ ಸರಿಸಿ ವಿಶಯಾಧಾರಿತ ಪಠ್ಯಕ್ರಮವೊಂದನ್ನು ಜಾರಿಗೊಳಿಸಲಾಯಿತು. ಪಠ್ಯಕ್ರಮದ ನಿರ್ಧಾರದ ಮಾದರಿಯೇ ಖಾಸಗಿ ಪ್ರಕಾಶಕ, ಲೇಖಕ ಮತ್ತು ಪಠ್ಯಪುಸ್ತಕ ಸಮಿತಿಗಳ ನಡುವಿನ ಅನವಶ್ಯಕ ಸಂಬಂಧಗಳನ್ನು ದೂರವಿರಿಸಿತು. ಬಹುಮುಖೀ ನೆಲೆಯ ಸಾಮಾಜಿಕ ಪಠ್ಯಗಳು ಕಲಿಕೆಯ ಭಾಗವಾದವು]

**ಮೊದಲ ಸೆಮಿಸ್ಟರ್:** ಪರಿಸರ, ಊರು-ಭಾಶೆ, ದೈನಂದಿನ ಲಯ, ಸೃಜನಶೀಲತೆ,
**ಎರಡನೆ ಸೆಮಿಸ್ಟರ್:** ಯುದ್ಧ ಮತ್ತು ಶಾಂತಿ, ಕನಸು, ಕಾಲ ಮತ್ತು ಮನುಶ್ಯ, ಮನರಂಜನೆ/ಬಿಡುವು

| | | |
|---|---|---|
| ಬಿಎ: ಸಾಹಿತ್ಯ ಸಂವಾದ_೧ | ಸಂ: ಡಾ.ಕೆ.ವೈ. ನಾರಾಯಣಸ್ವಾಮಿ/ ಡಾ. ಸೆಲ್ವಕುಮಾರಿ | ಬೆಂಗಳೂರು ವಿ.ವಿ |
| ಬಿಕಾಂ: ಸಾಹಿತ್ಯ ಸಂವಾದ_೧ | ಸಂ: ಎಸ್.ಎನ್.ಮುರಳೀಧರ/ಪಿ.ಎಸ್. ಗೀತಾ | ,, |
| ಬಿಎಸ್ಸಿ: ಸಾಹಿತ್ಯ ಸಂವಾದ_೧ | ಸಂ: ಡಾ.ರಂಗಾರೆಡ್ಡಿ ಕೋಡಿರಾಂಪುರ/ಡಾ.ಕೆ. ಕೃಷ್ಣಪ್ಪ | ,, |
| ಬಿಬಿಎಂ: ಸಾಹಿತ್ಯ ಸಂವಾದ-೧ | ಸಂ: ಡಿ.ಸಿ.ಗೀತಾ/ಆರ್.ಚಲಪತಿ | ,, |

(ಮೊದಲ ಸೆಮಿಸ್ಟರ್: ಸೃಜನಶೀಲತೆ, ಪರಿಸರ, ದೈನಿಕ ಲಯಗಳು ಮತ್ತು ಸಂವಹನ ಕೌಶಲ
ಎರಡನೆ ಸೆಮಿಸ್ಟರ್: ಯುದ್ಧ ಮತ್ತು ಶಾಂತಿ, ಕನಸು, ಕಾಲ ಮತ್ತು ಮನುಶ್ಯ ಮತ್ತು ಸಂವಹನ ಕೌಶಲ)

**೨೦೦೮-೦೯ ಹೊಸ ಸ್ವರೂಪದ ಪಠ್ಯಕ್ರಮ**

**ಮೂರನೆ ಸೆಮಿಸ್ಟರ್:** ಸಾವು, ಜ್ಞಾನದ ರಾಜಕಾರಣ, ಲೈಂಗಿಕತೆ, ವಿಜ್ಞಾನದ ತಾತ್ವಿಕತೆ
**ನಾಲ್ಕನೆ ಸೆಮಿಸ್ಟರ್:** ಕ್ರೀಡೆ, ವಾಣಿಜ್ಯ ರಾಜಕಾರಣ, ಧರ್ಮ/ಜಾತಿ/ಕೋಮುವಾದ, ಜಾಗತಿಕತೆ/ಸ್ಥಳೀಯತೆ,

| | | |
|---|---|---|
| ಬಿಎ: ಸಾಹಿತ್ಯ ಸಂವಾದ_೨ | ಸಂ: ಪ್ರೊ.ಎಂ.ಜಿ.ಚಂದ್ರಶೇಖರಯ್ಯ/ ಡಾ.ಎಂ.ಎಸ್.ಆಶಾದೇವಿ ಡಾ.ಲಿಂಗರಾಜಯ್ಯ | ,, |
| ಬಿಎಸ್ಸಿ: ಸಾಹಿತ್ಯ ಸಂವಾದ-೨ | ಸಂ: ಡಾ.ರಂಗಾರೆಡ್ಡಿ ಕೋಡಿರಾಂಪುರ/ಡಾ.ಕೆ. ಕೃಷ್ಣಪ್ಪ/ಬಿ.ಎನ್.ಶಾರದ | ,, |
| ಬಿಕಾಂ: ಸಾಹಿತ್ಯ ಸಂವಾದ-೨ | ಸಂ: ಡಾ.ಎಚ್.ಎನ್, ಮುರಳೀಧರ/ಪ್ರೊ.ಟಿ.ಎಲ್ಲಪ್ಪ | ,, |

(ಮೂರನೆ ಸೆಮಿಸ್ಟರ್: ಸಾವು, ವಾಣಿಜ್ಯದ ರಾಜಕಾರಣ ಮತ್ತು ವ್ಯವಹಾರಿಕ ಕನ್ನಡ
ನಾಲ್ಕನೆ ಸೆಮಿಸ್ಟರ್: ಆಟ, ಜಾಗತಿಕ ಮತ್ತು ಸ್ಥಳೀಯ, ವ್ಯಾವಹಾರಿಕ ಕನ್ನಡ)

| | | |
|---|---|---|
| ಬಿಬಿಎಂ: ಸಾಹಿತ್ಯ ಸಂವಾದ-೨ | ಸಂ: ಡಾ.ಎಚ್.ಎನ್, ಮುರಳೀಧರ/ಪ್ರೊ.ಟಿ.ಎಲ್ಲಪ್ಪ | ,, |

(ಮೂರನೆ ಸೆಮಿಸ್ಟರ್: ಸಾವು, ವಾಣಿಜ್ಯದ ರಾಜಕಾರಣ, ವ್ಯಾವಹಾರಿಕ ಕೌಶಲ
ನಾಲ್ಕನೆ ಸೆಮಿಸ್ಟರ್: ಆಟ, ಜಾಗತಿಕ ಮತ್ತು ಸ್ಥಳೀಯ, ವ್ಯಾವಹಾರಿಕ ಕೌಶಲ

ಅನುಬಂಧ–೩

**ವಿವಿಧ ಪದವಿ ತರಗತಿಗಳ ಪ್ರಶ್ನೆಪತ್ರಿಕೆಯ ಮಾದರಿಗಳು**

**ಟಿಪ್ಪಣಿ**: ಪ್ರಶ್ನೆ ಪತ್ರಿಕೆಯ ಒಟ್ಟು ಮಾದರಿಯು ನೆನಪನ್ನೇ ಮುಖ್ಯ ಮಾಡಿಕೊಂಡ ಭಾವಾರ್ಥ, ಆಶಯ, ಸ್ವಾರಸ್ಯ ಅಥವಾ ಸಾರಾಂಶವನ್ನು ಗುರಿಯಾಗಿಸಿಕೊಂಡಿರುವುದನ್ನು ಗಮನಿಸಿಕೊಳ್ಳಬಹುದಾಗಿದೆ. ಇದು ಎಲ್ಲ ಕಾಲದ, ಎಲ್ಲ ಪದವಿ ತರಗತಿಗಳ ಕಲಿಕೆಯ ಸಾಮಾನ್ಯ ಸಂಗತಿಯಾಗಿದೆ.

DK-588

BANGALORE UNIVERSITY
I BA/BSc Examination, October 1969
(Revised sheme)
First Language Kannada
Paper I-Texts : Detailed and Non detailed

Time-3 hours Max. Marks-90

1 (ಅ) ಕೆಳಗಿನ ಪದ್ಯಗಳ ಭಾವವನ್ನು ವಿವರಿಸಿ:–

(1)ಕೂರ್ಮನ ಬೆನ್ನಿಂದೇಳುವ
ಮಂದರ ಪರ್ವತದಂದದಿ
ಚಣಚಣಕೂ ಹಿರಿದಹುದೀ
ರೋದೋಂತದ ಮುಗಿಲು;
ಘಳ್ಳನೆ ನೀಳ್ಮಿಂಚಿದಿಗೋ
ದೇವಾಸುರರೆಳೆದಾಟಕೆ
ಚಣಚಣಕೂ ಹೊರಳಾಡುವ
ವಾಸುಕಿ ತನು ಎನಲು, ೫

(2)ಎಲೆ ಮಹದೇವಾಯ್ತು ಹಾಲಾ
ಹಲ ಸುಧಾರಸವುಕ್ಕಿದುರಿಯ
ಗ್ಗಳದ ಶೀತಲವಾಯ್ತು ಸಿಡಿಲಾಟೋಪ ನಯವಾಯ್ತು
ಕೊಳುಗುಳಕೆ ಪವಮಾನ ನಂದನ
ನಳುಕಿದನು ಮಝು ಮಾಯೆ ಕುಂತೀ
ಲಲನೆ ಪಡೆದಳೊ ಮಗನನೆಂದನು ದಾನವಧ್ವಂಸಿ ೫

(ಆ) ಈ ಕೆಳಗಿನವುಗಳಲ್ಲಿ ಮೂರಕ್ಕೆ ಮಾತ್ರ ಸಂದರ್ಭವನ್ನು ಸೂಚಿಸಿ ಟಿಪ್ಪಣಿ ಬರೆಯಿರಿ:–

(೧) ಕರಿಮುಗಿಲಿನ ಪಂಜರದೊಳು
ಪರದಾಡುವ ಮಿಂಚಿನವೊಲು
ಹೊಯ್ದಾಡುವುದೆನ್ನೆದೆಯೊಳು
ಆಸೆ–ಅದೆಂತು.

(೨)ಇನ್ನಗಲಿಕೆ ಇಲ್ಲದವೊಲು
ತಹೆ ತಾಯಿಯ ಮುದದೆ.

(೩)ಜಗವೆಲ್ಲವ ತುಂಬುತ ಮಿಕ್ಕಿಹಗೆ
ಹೊರತಾವುದು ಇನಿದಾವುದು ವಿಭುಗೆ

(೪)ಆ ಲತಾಂಗಿಯ ಗಮನವೇ ಮಳೆಗಾಲದಂತಿರೆ

(೫)ಹರಿಯ ಹಗೆ ಹೊಗೆದೋರದುರುಹದೆ ಬರಿದೆ ಹೋಹುದೆ.

(೬)ಇರುಳು ಮೇಲ್ವಾಳವರನು ಹೈಡಿಂಬಿ

(ಇ) ಅದ್ರಿಕ್ಕಾನ್ಯವಿಮುಖ, ವಾತಾಪಿ, ಗೋಗ್ರಹಣ, ಚಿತ್ರಸೇನ–ಇವುಗಳಲ್ಲಿ ಎರಡಕ್ಕೆ ಟಿಪ್ಪಣಿ ಬರೆಯಿರಿ ೬

2. 'ಇದೇ ಕನಸೋ, ಅದೇ ನನಸೋ ನಾನರಿಯೆ' ಎನ್ನುತ್ತಾಳೆ ಅಹಲ್ಯೆ. ಅವಳಿಗೆ ಕನಸಿನ ಭ್ರಮೆಯನ್ನುಂಟುಮಾಡಿದ ಘಟನೆಗಳಾವುವು? ವಿಶದಪಡಿಸಿ ಅಥವಾ

ಗೌತಮನು 'ದುಗುಡವ ಬಿಡುಕಾಂತೆ' ಎಂದು ಅಹಲ್ಯೆಯನ್ನು ಸಾಂತ್ವನ ಪಡಿಸುವ ದೃಶ್ಯದ ಸೊಗಸನ್ನು ತಿಳಿಸಿ ೧೦

3. 'ಅಹಲ್ಯೆ' ನಾಟಕದ ನಾಂದಿ ಪದ್ಯದ ಅರ್ಥವನ್ನು ನಾಟಕದ ವಸ್ತುವಿಗೆ ಹೊಂದಿಸಿ ವಿವರಣೆ ನೀಡಿ

ಅಥವಾ

ಗೌತಮನು ಮಾರನ ವಿಚಾರವಾಗಿ 'ವಿಧಿಗೆಂತಿವನುಪಯೋಗಂ' ಎಂದು ಚಿಂತಿಸಿ. ಅರಿತ ಉತ್ತರವೇನು? ನಿಮ್ಮ ಮಾತುಗಳಲ್ಲಿ ನಿರೂಪಿಸಿ ೧೦

4. ಅರ್ಜುನನಿಗೆ ಕೃಷ್ಣನು ಸಾರಥಿಯಾಗಿರಲು ಒಪ್ಪಿದ ಸನ್ನಿವೇಶವನ್ನು ಕುಮಾರವ್ಯಾಸನು ಹೇಗೆ ನಿರೂಪಿಸಿದ್ದಾನೆ?

ಅಥವಾ

ವಿಧುರನ ಭಕ್ತಿ ಎಂಥದು? ಉದ್ಯೋಗ ಪರ್ವದ ಕಥೆಯ ಸಹಾಯದಿಂದ ಸ್ಪಷ್ಟಪಡಿಸಿ ೧೦

5. ಕರ್ಣ, ಕುಂತಿ–ಇವರ ಸಂಭಾಷಣೆಯ ಸಾರಾಂಶವನ್ನು ತಿಳಿಸಿ, ಈ ಸಂದರ್ಭದಲ್ಲಿ ವ್ಯಕ್ತವಾಗುವ ಕರ್ಣನ ಗುಣಗಳನ್ನು ವಿಶದಪಡಿಸಿ.

ಅಥವಾ

'ಕಾಳಗವನೇ ಬಲಿದು ಬಹೆನು' ಎಂದು ದ್ರೌಪದಿಗೆ ಕೃಷ್ಣನು ಮಾತುಕೊಟ್ಟ ಪ್ರಸಂಗದಲ್ಲಿರುವ ಸ್ವಾರಸ್ಯವನ್ನು ಕುಮಾರವ್ಯಾಸನು ಹೇಗೆ ಚಿತ್ರಿಸಿದ್ದಾನೆ? ೧೦

6. ಸಂತೋಷಬಾಬು, ದಿವಾಣ–ಇವರಿಬ್ಬರ ವ್ಯಕ್ತಿಪರಿಚಯವನ್ನು ಮಾಡಿಕೊಡಿ

ಅಥವಾ

ಸುಧೆ 'ಅಕ್ಕ ತಂಗಿ' ಕಾದಂಬರಿಯ ಅಂತಸ್ಸತ್ವ ಎಂದು ಹೇಳಬಹುದೆ? ಅಥವಾ

'ಜಗದೀಶ'ನು ಅಕ್ಕ–ತಂಗಿ ಕಾದಂಬರಿಗೆ ಅನಗತ್ಯವಾದ ಪಾತ್ರ ಎಂಬ ಅಭಿಪ್ರಾಯವನ್ನು ವಿಮರ್ಶಿಸಿ ೧೫

7. ಇವುಗಳಲ್ಲಿ ಒಂದನ್ನು ಕುರಿತು ಎರಡು ಪುಟಗಳ ಒಂದು ಪ್ರಬಂಧವನ್ನು ಬರೆಯಿರಿ:–

(೧) ದೇಶದ ಆಹಾರ ಸಮಸ್ಯೆಯ ಪರಿಹಾರದ ಉಪಾಯಗಳು
(೨) ಕನ್ನಡತನ–ಈ ದೃಷ್ಟಿ ಹೇಗಿರಬೇಕು.
(೩) ಇಂದಿನ ಪ್ರಜಾರಾಜ್ಯ ೧೦

**ಎರಡನೆಯ ಬಿಎ ಮತ್ತು ಬಿಎಸ್ಸಿ ಪರೀಕ್ಷೆ ನವಂಬರ್/ಡಿಸೆಂಬರ್ ೧೯೮೪**
**(ಹೊಸ ವ್ಯವಸ್ಥೆ)**
**ಕನ್ನಡ**
**ಭಾಗ–೧, ಪ್ರಥಮಭಾಷೆ–ಕನ್ನಡ ಪತ್ರಿಕೆ–೨**

ಕಾಲ: ಮೂರು ಗಂಟೆಗಳು ಅಂಕಗಳು: ೧೦೦

೧. (ಅ) ಇವುಗಳಲ್ಲಿ ಒಂದರ ಭಾವವನ್ನು ವಿವರಿಸಿ:– ೫

(೧) ಭಾವಾವೇಶದಿ ನೋಡುತ ನಿಂತೆ
ಹೃದಯದೊಳುರಿಯಿತು ರಸಮಯ ಚಿಂತೆಃ
'ಉರಿ–ಕಿಡಿ'ದೆನು ಹಿಮ ಮಣಿಯಂತೆ!
ಕಲ್ಲಿನ ಯುಗಯುಗದಿರವೊ ಶೂನ್ಯ
ಹುಲ್ಲಿನ ಅರೆನಿಮಿಶದ ಹನಿಧನ್ಯ!
ತಳತಳಿಪುದೆ ಸಾರ್ಥಕ ಪುಣ್ಯ!

(೨) ಕುರುಡು ಧರ್ಮಕ್ಕೆ ಸ್ಮಾರಕವು ನಿಂತಂತಾಕೆ
ಮೈಮರೆತು ನಿಂತಾಗ್ಗೆ ಗೂಗೆ ಹಾಡಿತ್ತು
ಮುದ್ರೆಯೊತ್ತುವ ಕಣ್ಣು ಮೋರೆ ನೋಡಿತ್ತೊ ಮೈ
ಜಾರ ಕೃಷ್ಣನ ಕಥೆಗೆ ಕೋಡು ಮೂಡಿತ್ತು!

(ಆ) ಇವುಗಳಲ್ಲಿ ಎರಡು ವಾಕ್ಯಗಳ ಸ್ವಾರಸ್ಯವನ್ನು ಸಂದರ್ಭದೊಡನೆ ವಿವರಿಸಿ:– ೩+೩

(೧) ಪೌರುಷವನು ದುಂಡಗೆ ಸುತ್ತಿ ಹೆಣವಾಗಿ ಮಲಗಿಸಿದ್ದೇನೆ

(೨) ತೆಗೆ! ಜಡವೆಂಬುದೆ ಬರಿಸುಳ್ಳು!

(೩) ಜಡೆಯಾಚೆ ತಿರುಗಿಸಿದ ತಾಯ ಮುಖ ಮಾತ್ರ ಇಂದಿಗೂ ಕಾಣದಲ್ಲ!

(೪) ಕೊಡದಿರು ಶರಧಿಗೆ ಶಟ್ಪದಿಯ ದೀಕ್ಷೆಯನು!

(ಇ) ಇವುಗಳಲ್ಲಿ ಎರಡಕ್ಕೆ ಟಿಪ್ಪಣಿ ಬರೆಯಿರಿ:– ೨+೨

ಸಾನೆಟ್, ಭಾವಗೀತೆ, ಕುವೆಂಪು, ರಾಜರತ್ನಂ, ಜಿ.ಎಸ್.ಶಿವರುದ್ರಪ್ಪ

೨. ಇವುಗಳಲ್ಲಿ ಎರಡು ಪ್ರಶ್ನೆಗಳಿಗೆ ಉತ್ತರ ಬರೆಯಿರಿ:– ೧೦+೧೦

(೧) ಪ್ರತಿಜ್ಞೆ ಕವನದ ವೈಶಿಷ್ಟ್ಯವೇನು?

(೨) ನೀ ಹೀಂಗ ನೋಡಬ್ಯಾಡ ನನ್ನ ಕವನದಲ್ಲಿ ದುಃಖಿತಳಾದ ಪತ್ನಿಯನ್ನು ನಾಯಕ ಸಂತೈಸುವ ಬಗೆಯನ್ನು ವಿವರಿಸಿ

(೩) ಭೂಮಿ ಮತ್ತು ಮಾನವನಿಗೆ ಇರುವ ಸಂಬಂಧ 'ಮಣ್ಣಿನ ಮೆರವಣಿಗೆ' ಕವನದಲ್ಲಿ ವ್ಯಕ್ತವಾಗಿರುವ ಬಗೆ ಹೇಗೆ? ವಿವರಿಸಿ.

(೪) ತಮೋಭೀತಿ, ಗಂಗಾಮಾಯಿ, ರಾಮನ್ ಸತ್ತ ಸುದ್ಧಿ, ವಿಶ್ವಕುಟುಂಬಿಯ ಕಷ್ಟ–ಈ ಕವನಗಳಲ್ಲಿ ಒಂದರ ಸ್ವಾರಸ್ಯವನ್ನು ವಿವರಿಸಿ.

೩. ಇವುಗಳಲ್ಲಿ ಒಂದರ ಭಾವವನ್ನು ವಿವರಿಸಿ:– ೫

(೧) ಆವಾತನತ್ತಣಿಂದಲೆ ಭೀರು ನೀಂ ತಿರಸ್ಕಾರವನು ಶಂಕಿಸುವೆಯಿಂದು
ನಿನ್ನನೊಡಗೂಡುವೊಂದಾತುರದೊಳಾತನೆಯೆ ನಿಂದಿಹನು ನಿನ್ನ ಬಳಿಸಂದು
ಲೋಕದೊಳು ಲಕ್ಷ್ಮಿ ದಯೆಗೈದು ತಾನೆರದವರಿಗೊಲಿಯಬಹುದೊಲಿಯದಿರಬಹುದು
ಲಕ್ಷ್ಮಿಯೆ ಅಪೇಕ್ಷೆಗೈದವನದೆಂತಾಕೆಗಿನ್ನಹನು ನಿಜದೆ ದುರ್ಲಭನು.

(೨) ನಿರ್ನಿಮಿತ್ತದ ಹಿಸಿತದಿಂ ನಸುತೋರ್ಪ ಪಲ್ಮುಗುಳೆಸದಿರೆ
ಅಸ್ಫುಟಾಕ್ಷರದುಚ್ಚರಂ ಬೆರೆದೊಂದು ತೊದಲುಲಿ ಮೆರೆದಿತೆ
ತೊಡೆಯನೇರುವ ಬಯಕೆಯನು ತಳೆದಣುಗ ಕೂಸುಗಳೈತರೆ
ಧನ್ಯರಹ ದಿಟ ಅವರ ಮೈಧೂಳಂಟಿ ಕೊಳೆಯಹ ಜನಕರೆ!

(ಆ) ಇವುಗಳಲ್ಲಿ ಎರಡು ವಾಕ್ಯಗಳ ಸ್ವಾರಸ್ಯವನ್ನು ಸಂದರ್ಭದೊಡನೆ ವಿವರಿಸಿ:– ೩+೩

(೧) ದೀನರಕ್ಷಣೆಗಸ್ತ್ರವಲ್ಲದೆ ಮುಗ್ಧಜೀವಿಯನೆಸೆವುದೆ?

(೨) ಇದರಲ್ಲಿ ನನಗೆ ವಿಶ್ವಾಸವಿಲ್ಲ. ಆರ್ಯಪುತ್ರನೇ ತೊಟ್ಟಿರಲಿ

(೩) ನಿನಗೆ ತಪೋವನವೂ ಉಪವನವಾಯಿತೆಂದು ಭಾವಿಸುತ್ತೇನೆ.

(೪) ಜ್ಞಾನಕ್ಕಿಂತ ಅಜ್ಞಾನವೇ ಅಶ್ಚರ್ಯಕರವಾಗಿದೆ.

(ಇ) ಇವುಗಳಲ್ಲಿ ಎರಡಕ್ಕೆ ಟಿಪ್ಪಣಿ ಬರೆಯಿರಿ:– ೨+೨

ಕಂಚುಕ, ನಾಂದಿ, ಸಾನುಮತಿ, ವಿಷ್ಕಂಬಕ, ಕಾಳಿದಾಸ

೪. ಇವುಗಳಲ್ಲಿ ಎರಡು ಪ್ರಶ್ನೆಗಳಿಗೆ ಉತ್ತರ ಬರೆಯಿರಿ:– ೧೦+೧೦

(೧) ಶಕುಂತಲೆಗೆ ಬಂದ ಶಾಪವೇನು? ಅದು ಪರಿಹಾರವಾದ ಬಗೆ ಹೇಗೆ? ವಿವರಿಸಿ.
(೨) ಶಕುಂತಲಾ ನಾಟಕದ ಕೊನೆಯ ಅಂಕದ ವೈಶಿಷ್ಟ್ಯವೇನು? ವಿಶದಪಡಿಸಿ.
(೩) ದುಶ್ಯಂತನ ಗುಣಶಿಲಗಳನ್ನು ಚಿತ್ರಿಸಿ.
(೪) ಗೌತಮಿ, ವಿದೂಷಕ, ಶಾಜ್ಞರವ–ಇವರಲ್ಲಿ ಇಬ್ಬರ ಪಾತ್ರ ಪರಿಚಯ ಮಾಡಿಕೊಡಿ.

೫. ಕರ್ವಾಲೊ ಕಾದಂಬರಿಯ ನಿರೂಪಕನ ಪಾತ್ರದ ವೈಶಿಷ್ಟ್ಯವೇನು? ೧೫

ಅಥವಾ

ಕರಿಯಪ್ಪ, ಕಿವಿ, ಪ್ರಭಾಕರ–ಇವರಲ್ಲಿ ಇಬ್ಬರ ಪಾತ್ರವನ್ನು ಪರಿಚಯ ಮಾಡಿಕೊಡಿ.

ಅಥವಾ

ಕರ್ವಾಲೊ ಕಾದಂಬರಿಯಲ್ಲಿ ಜೇನುಹುಳುವಿನ ಜೀವನಕ್ರಮ ಯಾವ ರೀತಿಯಲ್ಲಿ ಚಿತ್ರಿತವಾಗಿದೆ? ವಿವರಿಸಿ.

೬. "ಸೌಂದರ್ಯ ನಿರ್ಧಾರದ ಅಪಮಾರ್ಗಕ್ಕೆ ರಾಜಕಾರಣದ ಚೋದನೆಗಳೇ ಕಾರಣವೆನ್ನಬಹುದು"– ಲೋಹಿಯಾರ ಈ ಹೇಳಿಕೆಯನ್ನ 'ಸೌಂದರ್ಯ ಮತ್ತು ಮೈಬಣ್ಣ' ಪ್ರಬಂಧದ ಆಧಾರದಿಂದ ವಿವೇಚಿಸಿ. ೧೫

ಅಥವಾ

"ಇಂಗ್ಲಿಶನ್ನು ಬಿಡುವಂತಿಲ್ಲ, ಆದರೆ ಅದಕ್ಕೆ ಹಿಂದಿದ್ದ ಸ್ಥಾನವನ್ನು ಕೊಡುವಂತೆಯೂ ಇಲ್ಲ"– ಕುವೆಂಪು ಅವರ ಈ ಮಾತನ್ನು ಚರ್ಚಿಸಿ.

ಅಥವಾ

ಮಾನಸಿಕ ದೌರ್ಬಲ್ಯಕ್ಕೆ ಕಾರಣಗಳೇನು? ಡಾ. ನರಸಿಂಹಯ್ಯನವರ ಅಭಿಪ್ರಾಯಗಳನ್ನು ಸಂಗ್ರಹಿಸಿ.

–––––––

**ಟಿಪ್ಪಣಿ**: ವ್ಯವಹಾರಿಕವಾಗಿ ಕಛೇರಿಯಲ್ಲಿ ಈ ಬಗೆಯ ಕನ್ನಡ ಬಳಕೆಯಾಗುತ್ತದೆ ಎಂಬ ಕಲ್ಪಿತ ಉದ್ದೇಶವನ್ನಿಟ್ಟುಕೊಂಡು ವಾಣಿಜ್ಯ(ಬಿಕಾಂ) ಪದವಿಯ ಕನ್ನಡ ಪಠ್ಯಕ್ರಮ ಇದೆ. ಆದರೆ ಇದು ಬಳಕೆಯ ವಾಸ್ತವದಿಂದ ದೂರವಿರುವುದನ್ನು ಇಲ್ಲಿ ಗಮನಿಸಿಕೊಳ್ಳಬಹುದಾಗಿದೆ. ವಾಣಿಜ್ಯ ಕನ್ನಡ ಕಲಿಯುವವರೆಲ್ಲರೂ ಕಛೇರಿಯ ವ್ಯವಹಾರಗಳಿಗೆ ಸಂಬಂಧಿಸಿದ ಮಾಹಿತಿ ಮತ್ತು ಪತ್ರ ರಚನೆಯ **ವಿಧಾನ**ಗಳ ತಿಳುವಳಿಕೆಯನ್ನು ಪಡೆದುಕೊಳ್ಳುವುದೇ ಕನ್ನಡಭಾಷೆಯ ಕೌಶಲ ಎಂದು ತಿಳಿಯಲಾಗಿದೆ. ಈ ಕಾರಣವಾಗಿ ಈ ಪ್ರಶ್ನೆ ಪತ್ರಿಕೆಯನ್ನು ಗಮನಿಸಿಕೊಳ್ಳಬಹುದಾಗಿದೆ.

AE-006

II B.com Examination, March/april 2004
(New sheme)
Kannada (paper-II, part-I) Language-I

Time:3 hours Max arks:100

1. ಈ ಗದ್ಯ ಭಾಗವನ್ನು ಸಂಕ್ಷೇಪಿಸಿ, ಸೂಕ್ತ ಶೀರ್ಷಿಕೆಯನ್ನು ಕೊಡಿ. 10

ಸಂವಿದಾನಕ್ಕೆ ಹೊಸದಾಗಿ ತಂದ ತಿದ್ದುಪಡಿಗಳಿಗೆ ಕೆಲವರ ವಿರೋಧದ ನಡುವೆಯೂ ಸಂಸತ್ತು ಅಂಗೀಕಾರ ನೀಡಿದೆ. ಈ ಎರಡೂ ತಿದ್ದುಪಡಿಗಳನ್ನು ತರಲು ಅನುಭವವೇ ಆಧಾರ. ಚುನಾವಣಾ ಕಾನೂನುಗಳಲ್ಲಿ ಸಾಕಷ್ಟು ಬದಲಾವಣೆಗಳನ್ನು ಮಾಡಿದ್ದರೂ ಆಯಾರಾಂ ಗಯಾರಾಂಗಳ ಹಾವಳಿ ಮಾತ್ರ ನಿಲ್ಲಲಿಲ್ಲ. ಕಾನೂನಿನಲ್ಲಿದ್ದ ದೌರ್ಬಲ್ಯಗಳು ಪಕ್ಷಾಂತರಿಗಳಿಗೆ ಹಾಗೂ ಅಧಿಕಾರದ ಆಸೆಬುರುಕರಿಗೆ ಅನುಕೂಲ ಮಾಡತೊಡಗಿದವು. ಹಣ,ಅಧಿಕಾರ ಮತ್ತಿತರ ಆಮಿಶಗಳನ್ನು ತಡೆಯುವಲ್ಲಿ ಈಗ ಅಸ್ತಿತ್ವದಲ್ಲಿದ್ದ ಪಕ್ಷಾಂತರ ನಿಶೇದ ಕಾನೂನು ವಿಫಲವಾದ ಹಿನ್ನೆಲೆಯಲ್ಲಿ ಹೊಸ ತಿದ್ದುಪಡಿ ತರಲಾಗಿದೆ. ಈ ತಿದ್ದುಪಡಿಯಾನ್ವಯ ಪಕ್ಷಾಂತರಗೊಂಡ ಯಾವುದೇ ಹುದ್ದೆಯನ್ನು ವಹಿಸಿಕೊಳ್ಳುವಂತಿಲ್ಲ. ಆಮಿಶಗಳಿಗೆ ಒಳಗಾಗಿ ಪಕ್ಷಾಂತರ ಮಾಡುವ ಪಿಡುಗನ್ನು ತಪ್ಪಿಸುವಲ್ಲಿ ಇದೊಂದು ಮಹತ್ವದ ಬದಲಾವಣೆಯೇ ಸರಿ. ಸರ್ಕಾರಗಳನ್ನು ಉರುಳಿಸುವ ಪಿತೂರಿ ರಾಜಕಾರಣಕ್ಕೆ ಅಂತ್ಯ ಹಾಡಲು ಇದರಿಂದ ಅನುಕೂಲ. ಪ್ರಾಮಾಣಿಕವಾಗಿ ಸರ್ಕಾರ ಬದಲಾಯಿಸಬೇಕೆಂದು ಬಯಸುವವರು ಹಾಗೆ ಮಾಡಬಹುದು. ಆದರೆ ಯಾವುದೇ ಸ್ಥಾನಮಾನ ಪಡೆಯುವಂತಿಲ್ಲ. ಸಚಿವ ಸಂಪುಟದ ಗಾತ್ರವನ್ನು ಮಿತಿಗೊಳಿಸುವ ಬಗ್ಗೆಯೂ ಹೊಸ ನಿಯಮಗಳನ್ನು ರೂಪಿಸಲಾಗಿದೆ. ಈ ಬದಲಾವಣೆಗಳಿಂದ ರಾಜಕಾರಣಕ್ಕೆ ಸ್ವಲ್ಪ ಬೆಲೆ ಬಂದಂತಾಗಿದೆ.

ಭಾರತದಲ್ಲಿ ರಾಜಕೀಯವು ಧರ್ಮ, ಜಾತಿ, ಪಕ್ಷ, ಪ್ರದೇಶ, ಭಾಶೆ ಮುಂತಾದವುಗಳಿಗೆ ಸಂಬಂಧಿಸಿದ ಗೋಜಲುಗಳಲ್ಲಿ ಸಿಕ್ಕಿಕೊಂಡು ಗೊಂದಲಮಯವಾಗಿದೆ. ರಾಜಕೀಯ ಭ್ರಶ್ಟಾಚಾರ ಪ್ರಜಾತಂತ್ರದ ಬೇರುಗಳನ್ನೇ ಅಲುಗಾಡಿಸುತ್ತಿದೆ. ನೈತಿಕ ಮೌಲ್ಯಗಳು ಕುಸಿದು ಬಿದ್ದಿರುವ ಈ ಸಂದರ್ಭದಲ್ಲಿ ಪ್ರಜಾತಂತ್ರದ ಮೌಲ್ಯಗಳನ್ನು ಉಳಿಸಲು ಯಾವುದೇ ತಿದ್ದುಪಡಿ ತಂದರೂ ಸ್ವಾಗತಾರ್ಹವೇ. ಕಾನೂನು ತಿದ್ದುಪಡಿಯಿಂದ ಸುಧಾರಣೆ ಸಾಧ್ಯವಾಗದು. ಅವು ಪೂರ್ಣವಾಗಿ ಜಾರಿಗೊಂಡರೆ ಮಾತ್ರ ಪರಿಸ್ಥಿತಿಯಲ್ಲಿ ಸುಧಾರಣೆ ಸಾಧ್ಯ.

2. ವಾಣಿಜ್ಯ ಪತ್ರದ ವಿವಿಧ ಅಂಗಗಳನ್ನು ಉದಾಹರಣೆ ಸಹಿತ ವಿವರಿಸಿ. 15

ಅಥವಾ

ಪರಾಮರ್ಶನ ಪತ್ರ ಎಂದರೇನು? ಧಾರವಾಡದಲ್ಲಿ ಆಟಿಕೆ ಸಾಮಾನುಗಳನ್ನು ಮಾರಾಟ ಮಾಡುತ್ತಿರುವ 'ಮಹಾವೀರ ಮತ್ತು ಸಂಸ್ಥೆ'ಯ ಬಗ್ಗೆ ಮಹೇಂದ್ರ ಆಟದ ಸಾಮಾನು ಸಂಸ್ಥೆಯ ಮಾಲೀಕರು ರಚಿಸುವ ಅನನುಕೂಲ ಪರಾಮರ್ಶನ ಪತ್ರದ ಮಾದರಿಯೊಂದನ್ನು ರಚಿಸಿ.

3. ವ್ಯವಹಾರೋಜ್ಜೀವನ ಪತ್ರ ಎಂದರೇನು? ಆದೇಶ ನೀಡದೆ ವ್ಯವಹಾರ ನಿಲ್ಲಿಸಿರುವ 'ಉಲ್ಲಾಸ್ ದಿನಸಿ ವ್ಯಾಪಾರಿ'ಗಳಿಗೆ ಬೆಂಗಳೂರಿನ 'ಹರ್ಶಿತ ವ್ಯಾಪಾರ ಸಂಸ್ಥೆ' ಬರೆಯುವ ವ್ಯವಹಾರೋಜ್ಜೀವನ ಪತ್ರದ ಮಾದರಿಯನ್ನು ರಚಿಸಿ. 15

ಅಥವಾ

ಬ್ಯಾಂಕ್ ಠೇವಣಿಗಳೆಂದರೇನು? ಅವುಗಳಲ್ಲಿ ಎಶ್ಟು ವಿಧ ವಿವರಿಸಿ.

4. ಇವುಗಳಲ್ಲಿ ಎರಡಕ್ಕೆ ಟಿಪ್ಪಣಿ ಬರೆಯಿರಿ: 10

1) ಅನುಗತ ಪತ್ರ
2) ಆದೇಶ ತಿರಸ್ಕಾರ
3) ಸರ್ಕಾರಿ ಸುತ್ತೋಲೆ
4) ಹಾಜರಾತಿ ವರದಿ

5. ಅ) ಒಂದು ಪದ್ಯ ಭಾಗದ ಭಾವವನ್ನು ವಿವರಿಸಿ: 6

1) ಭವದ ಮಾಯೆ ಅಡಗುವಂತೆ
ಅಹಂಕಾರ ಕರಗುವಂತೆ
ನಿನ್ನ ಗಾನದನುರಾಗವು
ಬದುಕ ತುಂಬಲನುಗಾಲವು

2) ತಾರಕಂಬಕ್ಕೆ ಕಿವಿ ಹಚ್ಚಿಯಾವ ಬಾಲ ಗೋಪಾಲ
ನೂರು ಲೋಕದ ಹಾಡು ಕೇಳುತ್ತಲಿಹನೋ
ಯಾವ ಗುಡ್ಡಾಹತ್ತಿ ಯಾವ ಕಣವಿ ಇಳಿದು
ಈ ಕಂಬ ಈ ತಂತಿ ನಿನ್ನ ಬಳಿ ಬಂದಿವೆಯೋ....

ಆ) ಇವುಗಳಲ್ಲಿ ಮೂರನ್ನು ಕುರಿತು ಸಂದರ್ಭ ಸಹಿತ ಟಿಪ್ಪಣಿ ಬರೆಯಿರಿ: 9

೧) ಶತಮಾನಗಳು ಬರಿಯ ಜಡಶಿಲೆಯ ಪೂಜಿಸಾಯ್ತು
೨) ಕುಡುದ್ಬುಟ್ ಆಡ್ರೆ ತೋಲ್ತಾದಣ್ಣ ನಾಲ್ಗೆ-ಬಾಳ ಗೋಳು!
೩) ಮುಳುಗಿದವರಿಗೆ ಪಾತಾಳ ಖಚಿತ
೪) ಹೆಗಲಿಗೆ ಹೆಗಲು ಪಾತಾಳಕೆ ಪ್ರಾಣಗಳು
೫) ನಿನ್ನ ಗರ್ಭದ ಗುಪ್ತ ಸಾಮ್ರಾಜ್ಯಗಳಲ್ಲಿ ನಗರ ನಾಡುಗಳೆಷ್ಟು ಹೊರಳುತ್ತಿವೆ?
೬) ನಾನೊಂದು ಕುರೂಪಿ ಕಪ್ಪೆಯಾದರೆ ನೀನೊಂದು ಕೇರೆ ಹಾವು.

ಇ) ಇವುಗಳಲ್ಲಿ ಎರಡನ್ನು ಕುರಿತು ಟಿಪ್ಪಣಿ ಬರೆಯಿರಿ:

ಕುವೆಂಪು, ನವೋದಯ, ಚನ್ನವೀರ ಕಣವಿ, ಜಿ.ಎಸ್. ಶಿವರುದ್ರಪ್ಪ

6. ಇವುಗಳಲ್ಲಿ ಎರಡು ಪ್ರಶ್ನೆಗಳಿಗೆ ಉತ್ತರಿಸಿ: 10+10

1) ಚಿಗರಿಕಂಗಳ ಚಲುವಿಯ ಆಕ್ರಂದನ, ಕೊರಗು ವ್ಯಕ್ತವಾಗಿರುವ ಬಗೆಯನ್ನು ಕುರಿತು ಬರೆಯಿರಿ.
2) 'ದೈವದ ಪ್ರೀತಿಯು ಬದುಕನ್ನು ಅನುಗಾಲವೂ ತುಂಬಿರಬೇಕು' ಎಂಬುದು 'ನಿಲ್ಲಿಸದಿರು ವನಮಾಲಿ' ಕವನದಲ್ಲಿ ಹೇಗೆ ವ್ಯಕ್ತವಾಗಿದೆ? ವಿವರಿಸಿ.
3) 'ಚಿಂತಾಮಣಿಯಲ್ಲಿ ಕಂಡ ಮುಖ' ಅಥವಾ 'ದಲಿತರು ಬರುವರು'-ಇವುಗಳಲ್ಲಿ ಒಂದು ಕವಿತೆಯ ಸ್ವಾರಸ್ಯವನ್ನು ಬರೆಯಿರಿ.
4) ಅಕ್ಕ-ತಂಗಿ, ಬೇಲಿಯ ಮೇಲಿನ ನೀಲಿಯ ಹೂಗಳು, ರಾಜಮಾರ್ಗ-ಒಳಮಾರ್ಗ-ಇವುಗಳಲ್ಲಿ ಎರಡು ಕವಿತೆಗಳ ಭಾವವನ್ನು ವಿವರಿಸಿ.

7. ಒಂದು ಪ್ರಶ್ನೆಗೆ ಉತ್ತರಿಸಿ: 10

1) ಸಾವಿನ ಬಗ್ಗೆ ಇವಾನ್ ಇಲ್ಯಿಚ್‌ನ ಪ್ರತಿಕ್ರಿಯೆಯನ್ನು ಕುರಿತು ಬರೆಯಿರಿ.
2) 'ಆಲ್ಬರ್ಟ್'ನ ವ್ಯಕ್ತಿತ್ವವನ್ನು ಚಿತ್ರಿಸಿ.
3) ರೈತನ ಅತಿಯಾಸೆಯ ಪರಿಣಾಮವನ್ನು 'ಒಬ್ಬನಿಗೆ ಎಷ್ಟು ಭೂಮಿ ಬೇಕು' ಎಂಬ ಕತೆ ಹೇಗೆ ಚಿತ್ರಿಸುತ್ತದೆ? ವಿವರಿಸಿ.

--------

ಟಿಪ್ಪಣಿ: ವ್ಯಾವಹಾರಿಕ ನಿರ್ವಹಣೆಯ(ಬಿಬಿಎಂ) ಪದವಿಯಲ್ಲಿ ನಮ್ಮ ಸಾಮಾಜಿಕ ಸಂದರ್ಭದ ಮಾಧ್ಯಮಗಳು, ಅವುಗಳ ಚಾರಿತ್ರಿಕ ಸಂಗತಿಗಳು, ಅವುಗಳಿಂದಾಗುವ ಒಳಿತು ಕೆಡಕುಗಳು ಮತ್ತು ಮತ್ತಿತರೆ ಸಾಮಾಜಿಕ ಮಾಹಿತಿಗಳನ್ನು ಪಡೆದುಕೊಳ್ಳುವುದನ್ನು ಕನ್ನಡ ಕಲಿಕೆ ಎಂದು ತಿಳಿಯಲಾಗಿದೆ. ಈ ಪ್ರಶ್ನೆ ಪತ್ರಿಕೆಯನ್ನು ಗಮನಿಸಿ.

AE-008

I B.B.M. Examination, April 1996
(New sheme)
Kannada ಕನ್ನಡ ಪತ್ರಿಕೆ

Time:3 hours Max marks:90

Instructions: ಬರವಣಿಗೆ ತಪ್ಪಿಲ್ಲದೆ ಸ್ಪುಟವಾಗಿರಲಿ

೧. ಇವುಗಳಲ್ಲಿ ಎರಡು ಪ್ರಶ್ನೆಗಳಿಗೆ ಉತ್ತರ ಬರೆಯಿರಿ: ೧೦+೧೦

ಅ) ಸಮೂಹ ಸಂವಹನದ ಚಾರಿತ್ರಿಕ ಹಿನ್ನೆಲೆಯನ್ನು ಪರಿಚಯ ಮಾಡಿಕೊಡಿ.

ಆ) ಸರ್ಕಾರಿ ಸಮೂಹ ಮಾಧ್ಯಮಗಳಿಗೂ ಖಾಸಗಿ ಸಮೂಹ ಮಾಧ್ಯಮಗಳಿಗೂ ಇರುವ ಪ್ರಮುಖ ವ್ಯಾತ್ಯಾಸಗಳನ್ನು ಗುರುತಿಸಿ.

ಇ) ಸಮೂಹ ಸಂವಹನ ಕ್ಷೇತ್ರದಲ್ಲಿ ಸಂಶೋಧನೆ ಮತ್ತು ಅಭಿವೃದ್ಧಿಗೆ ಇರುವ ಮಹತ್ವವನ್ನು ತಿಳಿಸಿ.

೨. ಅ) ಇವುಗಳಲ್ಲಿ ಒಂದು ಪ್ರಶ್ನೆಗೆ ಉತ್ತರ ಬರೆಯಿರಿ: ೧೦

೧) 'ಯುವಜನತೆ ಮತ್ತು ದೂರದರ್ಶನ' ಈ ವಿಶಯಕ್ಕೆ ಸಂಬಂಧಿಸಿದಂತೆ ಒಳಿತು ಕೆಡಕುಗಳನ್ನು ಚರ್ಚಿಸಿ.

೨) ಕರ್ನಾಟಕದಲ್ಲಿ ಆಗಿರುವ ಪತ್ರಿಕೋದ್ಯಮದ ಬೆಳವಣಿಗೆಯನ್ನು ಮಾಡಿಕೊಡಿ.

ಆ) ಇವುಗಳಲ್ಲಿ ಒಂದಕ್ಕೆ ಟಿಪ್ಪಣಿ ಬರೆಯಿರಿ: ೫

ಗಣಕ ಯಂತ್ರ, ಗೋಡೆ ಬರಹ, ವ್ಯಂಗ್ಯಚಿತ್ರ

೩. ಅ) ಇವುಗಳಲ್ಲಿ ಒಂದಕ್ಕೆ ಉತ್ತರ ಬರೆಯಿರಿ: ೧೦

i) ಹೆದ್ದಾರಿಗಳಲ್ಲಿ ನಡೆಯುತ್ತಿರುವ ದರೋಡೆಗಳಿಂದ ಜನಮನದಲ್ಲಿ ಉಂಟಾಗಿರುವ ಭೀತಿಯನ್ನು ಕುರಿತು ಪತ್ರಿಕಾ ಸಂಪಾದಕರಿಗೆ ಒಂದು ಪತ್ರವನ್ನು ಬರೆಯಿರಿ.

ii) ಆರನೆಯ ಕ್ರಿಕೆಟ್ ವಿಶ್ವಕಪ್ ನಡೆದ ಸಂದರ್ಭದಲ್ಲಿ ಯುವ ಜನತೆಯಲ್ಲಿ ಕಂಡು ಬಂದ ಪ್ರತಿಕ್ರಿಯೆಯನ್ನು ಕುರಿತು ಒಂದು ಪತ್ರಿಕಾ ಸಂಪಾದಕೀಯವನ್ನು ಬರೆಯಿರಿ.

ಆ) ಇದರ ಸಂಕ್ಷೇಪ ಲೇಖನವನ್ನು ಸಿದ್ಧಪಡಿಸಿ: ೫

ದೇಹಾನುಭವವೇ ಎಲ್ಲ ಅನುಭವಗಳನ್ನೂ ಅಳೆಯುವುದಕ್ಕೆ ಮೂಲಮಾನ. ದೇಹದ ಸಂತೋಶ ಕ್ಷಣಿಕವಾದದ್ದು. ಆದರೆ ಆ ಸಂತೋಶವು ಮನಸ್ಸಿನಲ್ಲಿ ಅವತಾರವೆತ್ತಿದಾಗ ಅಲ್ಲಿ ಆದ ಪರಿಣಾಮ ಚಿರಕಾಲದ್ದಾಗಿರುತ್ತದೆ. ಈ ಪರಿಣಾಮವೇ ರಸಿಕತೆ. ರಸದ ಉತ್ತಮ ಪರಿಣಾಮವು ಮನಸ್ಸಿನಲ್ಲಾಗಿ ಅಲ್ಲಿಂದ ಅದು ಜೀವವನ್ನು ಮುಟ್ಟುತ್ತದೆ. ಹೀಗೆ ರಸಿಕತೆ ಸಂಸ್ಕಾರಕವಾದದ್ದು. ಅದು ಮನಸ್ಸಿನಲ್ಲಿ ಆಹ್ಲಾದಜನಕವಾಗಿ ಜೀವದಲ್ಲಿ ವಿಕಾಸಕಾರಕವಾಗಿ ಮನುಶ್ಯನ ಬಹಿರಂಗ ವ್ಯಾಪಾರದಲ್ಲಿ ನಯ, ವಿನಯ, ಸಹನೆ, ಸಭ್ಯತೆ, ಗುಣ, ಸಂತೋಶ–ಈ ಪ್ರಕಾರದ ಪರಿಣಾಮಗಳನ್ನು ಆಗುಮಾಡಿಸುತ್ತದೆ. ಈ ಕಾರಣದಿಂದ ರಸಿಕತೆಗೆ ಮುಖ್ಯ ಪೋಶಕಗಳಾದ ಸಂಗೀತ ಸಾಹಿತ್ಯಗಳು ಲೋಕದಲ್ಲಿ ಬೆಲೆ ಪಡೆದುಕೊಂಡಿರುತ್ತವೆ.

೪. ಆವರಣದಲ್ಲಿರುವ ಪದಗಳಲ್ಲಿ ಸರಿಯಾದುದನ್ನು ಆರಿಸಿ ಬರೆಯಿರಿ: ೧೦

೧) ಆಂದ್ರದ ಎನ್.ಟಿ.ಆರ್ ಮೂರನೆ ಬಾರಿ ಮುಖ್ಯಮಂತ್ರಿಯಾಗಿದ್ದು
(ಏಳು ತಿಂಗಳು, ಒಂಬತ್ತು ತಿಂಗಳು, ಹತ್ತು ತಿಂಗಳು)

೨) ಜಲವಿವಾದ ಬಗೆಹರಿಸಲು 'ಕಾವೇರಿ ನ್ಯಾಯ ಮಂಡಲಿ' ರಚನೆಯಾದದ್ದು
(೧೯೮೫ರಲ್ಲಿ, ೧೯೯೦ರಲ್ಲಿ, ೧೯೮೧ರಲ್ಲಿ)

೩) ಸೌರಮಂಡಲದ ಹೊಸ್ತಿಲನ್ನು ದಾಟಿದ ಮೊದಲ ಅಂತರಿಕ್ಷ ನೌಕೆ

(ಪಯೋನಿಯರ್ II ಸೂಯಜ್ I, ಅಪಲೊ I)

೪) ಭಾರತದ ಮೊದಲ ಫೀಲ್ಡ್ ಮಾರ್ಶಲ್
(ಮಾಣಿಕ್ ಶಾ, ಕಾರ್ಯಪ್ಪ, ತಿಮ್ಮಯ್ಯ)

೫) ೧೯೯೫ರ ಕೇಂದ್ರ ಸಾಹಿತ್ಯ ಅಕಾಡೆಮಿ ಬಹುಮಾನ ಪಡೆದ ಕನ್ನಡ ಕೃತಿ
(ಮಹಾಚೈತ್ರ, ಉರಿಯ ನಾಲಗೆ, ತೆರೆದ ಮನ)

೬) ಅಲ್ಲಾ ರಾಖ ನುಡಿಸುವುದು
(ಸಂತೂರ್, ತಬಲ, ಸಿತಾರ್)

೭) ನಾಗಾಲ್ಯಾಂಡಿನ ಅಧಿಕೃತ ರಾಜ್ಯಭಾಶೆ
(ನಾಗಾ, ಇಂಗ್ಲಿಶ್, ಮಣಿಪುರಿ)

೮) ವಿಶ್ವಬ್ಯಾಂಕ್ ಇರುವ ಸ್ಥಳ
(ಬ್ಯಾಂಕಾಕ್, ಮನಿಲಾ, ವಾಶಿಂಗ್ಟನ್)

೯) ಅಡಿಗೆ ಉಪ್ಪಿನ ರಾಸಾಯನಿಕ ಹೆಸರು
( ಸೋಡಿಯಂ ಹೈಡ್ರಾಕ್ಸೈಡ್, ಸೋಡಿಯಂ ನೈಟ್ರೇಟ್, ಸೋಡಿಯಂ ಕ್ಲೋರೈಡ್)

೧೦) ಭಾರತದಲ್ಲಿ ಎಶ್ಟು ಅಂಚೆ ವಲಯಗಳಿವೆ
(೯, ೮, ೬)

೫. ಅ) ಇವುಗಳಲ್ಲಿ ಎರಡು ಪ್ರಶ್ನೆಗಳಿಗೆ ಉತ್ತರ ಬರೆಯಿರಿ ೫+೫

I. ಕುವೆಂಪು ಕಂಡ 'ಪಕ್ಶಿ'ಯ ಸ್ವರೂಪವನ್ನು ವಿವರಿಸಿ

II. 'ಮೆರವಣಿಗೆ ಕವನದ ಸ್ವಾರಸ್ಯವನ್ನು ತಿಳಿಸಿ

III. 'ನೀಲಾಂಬಿಕೆ'ಯ ವ್ಯಕ್ತಿತ್ವ ಹೇಗೆ ಮೂಡಿ ಬಂದಿದೆ

IV. ಹೋರಾಟದ ಬದುಕಿನ ಅರಿವನ್ನು 'ಬಂಡಾಯ'ಕವನದಲ್ಲಿ ಹೇಗೆ ಸೂಚಿಸಲಾಗಿದೆ.

ಅಥವಾ

I. 'ಚಿಂತಾಮಣಿಯಲ್ಲಿ ಕಂಡ ಮುಖ' ಕವನದಲ್ಲಿ ಜೀವನದ ಸಾರ್ಥಕತೆಯನ್ನು ಕಂಡುಕೊಳ್ಳುವ ರೀತಿಯನ್ನು ಹೇಗೆ ವಿವರಿಸಿದ್ದಾರೆ.

II. 'ನೀ ಹೀಂಗ ನೋಡಬ್ಯಾಡ ನನ್ನ' ಕವನದಲ್ಲಿ ಹೆಣ್ಣಿನ ಅಸಹಾಯಕತೆಯ ಚಿತ್ರ ಹೇಗೆ ಮೂಡಿಬಂದಿದೆ?

III. ಕಲೆಯ ಬಗ್ಗೆ ಕಲಾವಿದನಿಗಿರುವ ಮನೋಭಾವವನ್ನು ತಿಳಿಸಿ.

IV. 'ಧ್ಯಾನ ಫಲಿಸಿದರೆ' ಕವನದ ಸ್ವಾರಸ್ಯವೇನು?

ಆ) ಈ ಪ್ರಯೋಗಗಳ ಕವಿಯ ಮತ್ತು ಕವನದ ಹೆಸರನ್ನು ಬರೆಯಿರಿ ೫

1. ಉಕ್ಕಿದುದು ಎಲ್ಲರೆದೆಯೊಳಗೆ ಆನಂದ
2. ತನ್ನೊಳಗೆ ತನ್ನ ನಿಜದ ನೆಲೆ ಪುಟವನಕ
3. ಮಾಗಿಲ್ಲವೇ ಬಾಳ ಗಾಯ
4. ಭಗವಚ್ಚರಣ ಚಿದಂಬರ ಯಾತ್ರಿ
5. ಗಿಡ ಗಂಟೆಯಾ ಕೊರಳೊಳಗಿಂದ ಹಕ್ಕಿಗಳ ಹಾಡು

ಅಥವಾ

1. ಪೊದೆಗಳ ಗುಹೆಯನು ಸೇರಿದವು
2. 'ಬಾ ಪೇಟೆಗೆ' ಎಂದನು
3. ಕಂಭ ಸುತ್ತುವ ಪುರೋಗಮನ ಸ್ಥಿತಿ
4. ಮತ್ತೆ ನನ್ನನ್ನು ಹೀಗೆ ಕೇಳುವುದು ಏನು

5. ರಾಣಿ ಕೊಂಕುಳಿನ ಪುಂಡ ಹೂಡಿದ್ದ ರಂಪ

೬. ಅ) ಇವುಗಳಲ್ಲಿ ಎರಡು ಪ್ರಶ್ನೆಗಳಿಗೆ ಉತ್ತರವನ್ನು ಬರೆಯಿರಿ ೫+೫

1. ಸುಬ್ಬಣ್ಣ ಸುಬ್ರಹ್ಮಣ್ಯ ಶಾಸ್ತ್ರಿಯಾಗಲಿಲ್ಲ ಯಾಕೆ
2. ಸುಬ್ಬಣ್ಣ ಬೊಂಬಾಯಿಯಲ್ಲಿ ಕಂಡ ಕನಸನ್ನು ವಿವರಿಸಿ
3. ಸುಬ್ಬಣ್ಣ ಮತ್ತೆ ಮೈಸೂರಿಗೆ ಬಂದಾಗ ಕಂಡದ್ದೇನು?
4. ಸುಬ್ಬಣ್ಣನ ಬದುಕಿನಲ್ಲಿ ಲಲಿತೆಯ ಪಾತ್ರವೇನು?

ಆ) ಆವರಣದಲ್ಲಿರುವ ಪದಗಳಲ್ಲಿ ಸರಿಯಾದುದನ್ನು ಆರಿಸಿ ಬರೆಯಿರಿ ೫

1. ವಿಶಮಶೀತ ಜ್ವರದಲ್ಲಿ ಸತ್ತದ್ದು ಸುಬ್ಬಣ್ಣನ
   (ಮಗಳು, ಮಗ, ಹೆಂಡತಿ)
2. ಸುಬ್ಬಣ್ಣ ಸತ್ತಾಗ ಬ್ಯಾಂಕಿನಲ್ಲಿದ್ದ ಹಣ
   (ರೂ 200, ರೂ 210, ರೂ 238)
3. ಸುಬ್ಬಣ್ಣ ತನ್ನ ಪಿಟೀಲನ್ನು ಕಳೆದುಕೊಂಡದ್ದು
   (ಬಂಡೆಗೆ ಜಜ್ಜಿ, ನೀರಿಗೆಸೆದು, ಬೆಂಕಿಗೆ ಹಾಕಿ)
4. ಸುಬ್ಬಣ್ಣ ಮನೆಬಿಟ್ಟು ಹೊರಟಾಗ
   (30 ವರುಶ, 25 ವರುಶ, 20 ವರುಶ)
5. ನಾರಾಯಣ ಶಾಸ್ತ್ರಿಗಳಿಗೆ ಇದ್ದ ಹೆಣ್ಣು ಮಕ್ಕಳು
   ( ಮೂವರು, ನಾಲ್ವರು, ಇಬ್ಬರು)

ಅಥವಾ

ಇವುಗಳಲ್ಲಿ ಎರಡಕ್ಕೆ ಟಿಪ್ಪಣಿ ಬರೆಯಿರಿ

೧. ವೆಂಕಟರಮಣ
೨. ನೀಲಸಾನಿ
೩. ತೊರೆಯಾಪುರದ ಸುಬೇದಾರರು
೪. ಲಕ್ಶ್ಮಿ

*********

**ಟಿಪ್ಪಣಿ:** ಕನ್ನಡ **ಭಾಷೆ**ಯ ಪ್ರಶ್ನೆ ಪತ್ರಿಕೆಗೂ ಕನ್ನಡ **ಸಾಹಿತ್ಯ** ಪರೀಕ್ಷೆಯ ಪ್ರಶ್ನೆ ಪತ್ರಿಕೆಗೂ ಹೇಳಿಕೊಳ್ಳುವಂತಹ ಯಾವುದೇ ವ್ಯತ್ಯಾಸವಿಲ್ಲ. ಅದೇ ಸಾರ, ಸ್ವಾರಸ್ಯ, ಆಶಯ ಕುರಿತ ಸ್ಮೃತಿ ಪರಂಪರೆಯ ಹೊರತಾಗಿ. ಹೆಚ್ಚೆಂದರೆ ವರ್ತಮಾನವನ್ನು ನಿರಾಕರಿಸುವ ಸಾಹಿತ್ಯ ಚರಿತ್ರೆ, ಕಾವ್ಯ ಮೀಮಾಂಸೆ ಮತ್ತು ವಿಮರ್ಶೆಯ ಅಂಶಗಳು ಮಾತ್ರ ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತವೆ. ಈ ಅಂಶಗಳೂ ಸಹ ಸಂಸ್ಕೃತ ಪರಂಪರೆಯನ್ನೇ ಪೋಶಿಸುತ್ತವೆ. ಈ ಪ್ರಶ್ನೆ ಪತ್ರಿಕೆಯನ್ನು ಗಮನಿಸಿ;

**UK -32**

ಬೆಂಗಳೂರು ವಿಶ್ವವಿದ್ಯಾಲಯ

ಎರಡನೆ ಬಿ.ಎ. ಪರೀಕ್ಷೆ, ಜೂನ್ 1981

(NEW SCHEME)

ಐಚ್ಛಿಕ ಕನ್ನಡ : ಭಾಗ II : ಪತ್ರಿಕೆ II :

ಪಠ್ಯಪುಸ್ತಕಗಳು ಮತ್ತು ವಿಮರ್ಶೆಯ ಮೂಲ ತತ್ವಗಳು

ಕಾಲ : ೩ ಗಂಟೆ] [ಅಂಕಗಳು : ೧೦೦

೧ ಇವುಗಳಲ್ಲಿ <u>ಒಂದರ</u> ಸ್ವಾರಸ್ಯವನ್ನು ವಿವರಿಸಿ. ೫

(ಅ) ತೊಡೆಗಳಿಗೆ ಸಂಕ್ಯೆಮವೇ ನಿ
ನ್ನೊಡೆಯನವನೊಡವುಟ್ಟಿದನ ಮೈ
ಆಡಿದುದೇ ಪಾಲಿಸಿದಡನಿಬರಿಗಹಂದಂ ರುಧಿರಜಲ
ಒಡನೆ ಹುಟ್ಟಿದ ನೂಱುವರು ಮೈ
ಗೆಡರಲೇ ಬೆಸಗೊಂಬುದಂಜದೆ
ಯೊಡೆಯರಿಗಿ ಹೊಣೆಗೊಂಡೆ ಹೇಳೆಂದಟ್ಟಿದನು ಭೀಮ

(ಆ) ಎಲೆಲೆ ಶಿವಲಿಂಗ ದೃಢನೀಬಂದನೀ ಬಂದ
ಎಲೆಲೆ ನಿರ್ಮಳಸಿದ್ಧನೀಬಂದನೀ ಬಂದ
ಎಂಬಂತೆ ಕೋಗಿಲೆಗಳಲ್ಲಲ್ಲಿಯುಳಿಯಂತಿರೆ
ಇಂಬಿನಿಂದರಗಿಳಿಗಳಡಿಗಡಿಗೆ ಜಡಿಯಂತಿರೆ
ನಡೆದುದೇ ಬಟ್ಟೆಯಾದುದು ಶಿವನ ಮದಕರಿಗೆ
ನುಡಿದುದೇ ವೇದವಾದುದು ಲಿಂಗವಂತರಿಗೆ
ಮುಟ್ಟಿದ ಮರಂ ಮನುಜರಾಗಿ ನಡೆವುವು ಕೆಲವು
ಮೆಟ್ಟಿದಾ ಪ್ರಾಣಿ ಸ್ವರ್ಗಕ್ಕೆ ನಡೆವುವು ಕೆಲವು
ಮರವೊಡನೆ ನೆಳಲಾಗಿ ಬರುತುಮಿರ್ಪುವು ನೋಡ
ಗಿರಿಕೆಲಕೆ ಸಾರ್ದು ಸೈವಟ್ಟೆಗುಡುವುವು ನೋಡ.

೨ ಕರ್ಣ ಮತ್ತು ಕೃಷ್ಣರಲ್ಲಿ ನಡೆದ ಸಂವಾದವನ್ನು ತಿಳಿಸಿ ಅಲ್ಲಿ ವ್ಯಕ್ತವಾಗುವ ಅವರ ಗುಣಶೀಲಗಳನ್ನು ಚಿತ್ರಿಸಿ.

ಅಥವಾ

ರಾಯಭಾರಕ್ಕೆ ಹೊರಟ ಕೃಷ್ಣ 'ಕಾಳೆಗವನೇ ಬಲಿದು ಬಹೆನು' ಎಂದು ಹೇಳುವುದರ ಔಚಿತ್ಯವೇನು ? ವಿಶದಪಡಿಸಿ.

ಅಥವಾ

ದುರ್ಯೋಧನನ ಪಾತ್ರ ಚಿತ್ರಣದಲ್ಲಿ ಕುಮಾರವ್ಯಾಸ ಮೆರೆದಿರುವ ಕಲಾಕೌಶಲವನ್ನು ನಿರೂಪಿಸಿ. ೧೫

೩ ' ವಿರಹಮಂ ತೆಗೆದು ಹರನ ಮೇಲಿಕ್ಕಿದಂ '--ಈ ಮಾತಿನ ಹಿನ್ನೆಲೆಯಲ್ಲಿ ಮಲುಹಣನ ವ್ಯಕ್ತಿತ್ವವನ್ನು ನಿರೂಪಿಸಿ.

ಅಥವಾ

ಪ್ರಭುದೇವರ ರಗಳೆಯ ಸ್ವಾರಸ್ಯವನ್ನು ವಿಶದಪಡಿಸಿ.

ಅಥವಾ

ಹರಿಹರನ ವರ್ಣನಾ ವೈಕರಿಯನ್ನು ಉದಾಹರಣೆಗಳೊಡನೆ ನಿರೂಪಿಸಿ. ೧೫

೪ 'ಕೀರ್ತನ ಸಾಹಿತ್ಯ ಪ್ರಕಾರದಲ್ಲಿ ಪುರಂದರದಾಸನ ಹೆಸರಿಗೆ ಸಮಸಮನಾಗಿ ನಿಲ್ಲುವ ಮತ್ತೊಂದು ಹೆಸರು ಕನಕದಾಸನದು '--ಈ ಹೇಳಿಕೆಯ ಯಥಾರ್ಥತೆಯನ್ನು ಚರ್ಚಿಸಿ.

ಅಥವಾ

ಕೀರ್ತನ ಸಾಹಿತ್ಯ ಪ್ರಕಾರದಲ್ಲಿ ಶ್ರೀಪಾದರಾಯರ ಸ್ಥಾನವೇನು ? ವಿಶದಪಡಿಸಿ.

ಅಥವಾ

ಪುರಂದರದಾಸರ ಕೀರ್ತನೆಗಳ ಸ್ವಾರಸ್ಯವನ್ನು ನಿರೂಪಿಸಿ. ೧೫

೫ ಕಾವ್ಯ ಪ್ರಯೋಜನಗಳು ಯಾವುವು ? ಆಲಂಕಾರಿಕರ ಅಭಿಪ್ರಾಯಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ವಿವರಿಸಿ.

ಅಥವಾ

ಜೀವನಕ್ಕೂ ಸಾಹಿತ್ಯಕ್ಕೂ ಇರುವ ಸಂಬಂಧ ಯಾವ ರೀತಿಯದು ? ವಿಶ್ಲೇಷಿಸಿ.

ಅಥವಾ

ವಿಮರ್ಶೆ ಎಂದರೇನು ? ಕವಿ ಮತ್ತು ಸಹೃದಯರಿಗೆ ಇದರಿಂದಾಗುವ ಪ್ರಯೋಜನಗಳಾವುವು ? ನಿರೂಪಿಸಿ. ೨೦

೬ ಪ್ರತಿಭೆ ಎಂದರೇನು ? ವಿವರಿಸಿ.

ಅಥವಾ

ವ್ಯುತ್ಪತ್ತಿ ಕಾವ್ಯರಚನೆಗೆ ಎಷ್ಟರ ಮಟ್ಟಿಗೆ ಅಗತ್ಯ ? ವಿವರಿಸಿ.

ಅಥವಾ

ಸಾಹಿತ್ಯ ಮತ್ತು ನೀತಿ__ಇವುಗಳಿಗಿರುವ ಸಂಬಂಧವನ್ನು ನಿರೂಪಿಸಿ. ೧೦

೭ ಇವುಗಳಲ್ಲಿ ಎರಡನ್ನು ಕುರಿತು ಟಿಪ್ಪಣಿ ಬರೆಯಿರಿ.
ಶೈಲಿ, ಧ್ವನಿ, ರೂಪಕ, ಅರ್ಥಾಂತರನ್ಯಾಸ. ೫+೫

೮ ವಸ್ತು, ರಸ, ನೀತಿ__ಇವುಗಳನ್ನು ಆಧರಿಸಿ ಒಂದು ಪದ್ಯವನ್ನು ವಿಮರ್ಶಿಸಿ.

(ಅ) ನಾನು ಬಡವಿ ಆತ ಬಡವ
ಒಲವೆ ನಮ್ಮ ಬದುಕು
ಬಳಸಿಕೊಂಡೆವದನೆ ನಾವು
ಅದಕು ಇದಕು ಎದಕು
ಹತ್ತಿರಿರಲಿ ದೂರವಿರಲಿ
ಅವನೆ ರಂಗಸಾಲೆ
ಕಣ್ಣು ಕಟ್ಟುವಂಥ ಮೂರ್ತಿ
ಕಿವಿಗೆ ಮೆಚ್ಚಿನೋಲೆ
ಚಳಿಗೆ ಬಿಸಿಲಿಗೊಂದೆ ಹದನ
ಅವನ ಮೈಯ ಮುಟ್ಟೆ
ಅದೇಗಳಿಗೆ ಮೈಯು ಮುಟ್ಟೆ
ನನಗೆ ನವಿರು ಬಟ್ಟೆ
ಆತ ಕೊಟ್ಟ ವಸ್ತು ಒಡವೆ
ನನಗೆ ಅವಗೆ ಗೊತ್ತು
ತೋಳುಗಳಿಗೆ ತೋಳ ಬಂದಿ
ಕೆನ್ನೆ ತುಂಬ ಮುತ್ತು

ಕುಂದುಕೊರತೆ ತೋರಲಿಲ್ಲ
        ಬೇಕು ಹೆಚ್ಚಿಗೇನು ?
ಹೊಟ್ಟೆಗಿತ್ತ ಜೀವ ಫಲವ
        ತುಟಿಗೆ ಹಾಲು ಜೇನು.

(ಆ) ಮೇಲೊಂದು ಗರುಡ ಹಾರುತಿಹುದು
ಕೆಳಗದರ ನೆರಳು ಓಡುತಿಹುದು
ಅದಕೊ ಅದರಿಚ್ಛೆ ಹಾದಿ
ಇದಕೊ ಹರಿದತ್ತ ಬೀದಿ
ನೆಲನೆಲದಿ ಮನೆಮನೆಯ ಮೇಲೆ
ಕೊಳಬಾವಿ ಕಂಡು ಕಾಣದೋಲೆ
ಗಿಡಗುಲ್ಮ ತೆವರು ತಿಟ್ಟು
ಎನ್ನದಿದಕೊಂದೆ ನಿಟ್ಟು
ಗಾಳಿಬೆಳಗಿದರ ನೆಲದೊಳೋಟ
ವೇಗಕಡ್ಡಬಹುದಾವ ಹೂಟ ?
ಸಿಕ್ಕು ದಣಿವಿಲ್ಲದಂತೆ
ನಡೆಯಿದಕೆ ನಿಲ್ಲದಂತೆ,--
ಇದನೋಡಿ ನಾನು ನೆನೆವೆನಿಂದು--
ಇಂಥ ನೆಳಲೇನು ಗಾಂಧಿಯೆಂದು !
ಹರಿದತ್ತ ಹರಿಯ ಚಿತ್ತ
ಈ ಧೀರ ನಡೆವನತ್ತ. ೧೦

---

**ಕರ್ನಾಟಕದ ಮೊದಲ ವಿಶ್ವ ವಿದ್ಯಾಲಯವಾದ ಮೈಸೂರು ವಿ.ವಿಯ ಪ್ರಶ್ನೆ ಪತ್ರಿಕೆಯೊಂದರ ಮಾದರಿ**
(ಹೋಲಿಕೆಗಾಗಿ)

ಟಿಪ್ಪಣಿ: ಕರ್ನಾಟಕದ ಮೊದಲ ವಿಶ್ವ ವಿದ್ಯಾಲಯವಾದ ಮೈಸೂರು ವಿಶ್ವ ವಿದ್ಯಾಲಯದ ಸುಮಾರು ೫೦ ವರ್ಷಗಳ ಹಿಂದಿನ ಪ್ರಶ್ನೆ ಪತ್ರಿಕೆಯನ್ನು ಗಮನಿಸಿದರೆ ನಮ್ಮ ಪಠ್ಯಕ್ರಮ, ಬೋಧನೆ, ಕಲಿಕೆ ಪರೀಕ್ಷೆ ಮತ್ತು ಮೌಲ್ಯಮಾಪನಗಳಲ್ಲಿ ಯಾವ ಬದಲಾವಣೆಯೂ ಘಟಿಸದಿರುವುದನ್ನು ಗ್ರಹಿಸಬಹುದಾಗಿದೆ. ಅಲ್ಲದೆ ಉತ್ತರಗಳಲ್ಲಿ ಕಾಗುಣಿತದ ಮತ್ತು ವ್ಯಾಕರಣದ ತಪ್ಪುಗಳಿದ್ದರೆ ಯಥೋಚಿತವಾಗಿ ಅಂಕಗಳನ್ನು ಕಳೆಯಬೇಕೆಂಬ ಪದ್ಧತಿ ಈ ಹಿಂದಿನಿಂದಲೂ ಅಧ್ಯಾಪನ ಸಮುದಾಯದಲ್ಲಿದೆ ಎಂಬುದರ ಸೂಚನೆಯನ್ನೂ ಇಲ್ಲಿ ಗಮನಿಸಬಹುದಾಗಿದೆ. ಇತ್ತೀಚಿನ ಅವಧಿಗಳ ಪ್ರಶ್ನೆ ಪತ್ರಿಕೆಗಳೊಂದಿಗೆ ಈ ಪ್ರಶ್ನೆ ಪತ್ರಿಕೆಯನ್ನು ಗಮನಿಸಿ.

G-365

UNIVERSITY OF MYSORE

SEPTEMBER, 1961

PART II - KANNADA : PAPER I
TEXTS FOR DETAILED STUDY

TIME-3 HOURS] [MAX.MARKS-100

**ವಿಶೇಶ ಸೂಚನೆ** :–ಉತ್ತರಗಳಲ್ಲಿ ಕಾಗುಣಿತದ ಮತ್ತು ವ್ಯಾಕರಣದ ತಪ್ಪುಗಳಿದ್ದರೆ ಯಥೋಚಿತವಾಗಿ ಅಂಕಗಳನ್ನು ಕಳೆಯಲಾಗುವುದು.

೧ (a) ಕೆಳಗಿನ ಪದ್ಯಗಳ ಅರ್ಥವನ್ನು ವಿವರಿಸಿ :–

೧. ನೆಲಸುಗೆ ನಿನ್ನ ವಕ್ಷದೊಳೆ ನಿಶ್ಚಳಮೀ ಭಟಖಡ್ಗಮಂಡಳೋ
ತ್ಪಲವನವಿಭ್ರಮಭ್ರಮರಿಯಪ್ಪ ಮನೋ
ಹರಿ ರಾಜ್ಯಲಕ್ಷ್ಮಿ ಭೂ
ವಲಯಮನಯ್ಯನಿತ್ತುದುಮನಾಂ ನಿನಗಿತ್ತೆನಿದೇವುದಣ್ಣ ನೀ
ನೊಲಿದ ಲತಾಂಗಿಗಂ ಧರೆಗೆಮಾಟಿಸಿ
ದಂದು ನೆಗಳ್ತೆ ಮಾಸದೇ ೭

೨. ಹರಿ ಬೇಡೆ ಕವಚಮಂ ನೀ
ನರಿದಿತ್ತಯ್ ಕೊಂತಿ ಬೇಡೆ ಬೆಗಡದೆ ಕೊಟ್ಟಯ್
ಪುರಿಗಣೆಯಂ ನಿನಗೆಣೆ ಕಸ
ವರಗಲಿ ಮೆಯ್ಗಲಿಯುಮಾವನಂಗಾಧಿಪತೀ

**ಅಥವಾ**

ದಯಿತಾವಿಯೋಗಾಗ್ನಿಯಿಂಧನಶರೀರನಂ,
ರೂಕ್ಷರೂಪದ ರಾಮನಂ ಕಂಡು ಮಂದಾಕ್ಷಿ,
ಶಬರಿ, ಬೇಡಂಗೆತ್ತಳೆನೆ, ಮೈಥಿಲೀಪ್ರಿಯನ
ದಾರುಣಸ್ಥಿತಿಗೇತಕಿನ್ ಬೇರೆ ಸಾಕ್ಷಿ ? ೫

(b) ಕೆಳಗಿನ ಗದ್ಯಭಾಗವನ್ನು ಸರಳವಾದ ಹೊಸಗನ್ನಡಕ್ಕೆ ತಿರುಗಿಸಿ :--

ಎಂದು ಶೋಕರಸಮಂ ಕೋಪರಸದ ಮೇಲಿಕ್ಕಿ ಮಾರ್ಪಡೆಯೆಯ್ತುರ್ಪುದಂ ನೋಡಿ ನಡೆವ ದಂದಶೂಕಪತಾಕನ ಮುಳಿಸಿನಂದಮನಱಿದು ಸಂಜಯನೆಂದಂ:- 'ಎಲೆ ದೇವಾ ಭೀಷ್ಮರಿತ್ತಲಿರ್ದಪರ್: ಇತ್ತ ಬಿಜಯಂಗೆಯ್ಯಿಂ; ಎಂತುಂ ನಿಜಗುರುಜನಪ್ರಾರ್ಥನಾಭಂಗಂ ಮಾಡಲಾಗದು ಇಂ ನೀಂ ನೆಗೞ್ವ ಕಜ್ಜಮಾವುದುಮಂ ನಿಮ್ಮಜ್ಜನೊಳಾಳೋಚಿಸಿ ನೆಗೞ್ವುದು' ಎಂದು ಪೇೞ್ವುದುಂ ಸಂಜಯನ ಮಾತಂ ಮೀಱದೆ ಶರಶಯನಗತನಾಗಿರ್ದ ನದೀನಂದನನ ಚರಣಾರವಿಂದವಂದನಂಗೆಯ್ಯಲೆಂದು ಗಾಂಧಾರೀನಂದನಂ ಎಯ್ದೆವಂದಂ. ೬

(c) ಅವಕುಂಠನ, ಕರವಾಳ್, ಧೂರ್ಜಟಿ, ಮದಿಲ್, ಶೀತಕರ, ಅಕಶೇರು, ಬೃಂದಾರಕ, ಪೇಶಲ, ತ್ರಿಯಾಮೆ, ಗಸಣಿ, ಅವರಜ, ಆಭೀಳ

–ಇವುಗಳಲ್ಲಿ **ಎಂಟಕ್ಕೆ** ಅರ್ಥ ಬರೆಯಿರಿ. ೪

೨ (a) ಕೆಳಗಿನ ವಾಕ್ಯಗಳಲ್ಲಿ **ನಾಲ್ಕರ** ಸಂದರ್ಭವನ್ನು ತಿಳಿಸಿ, ಸ್ವಾರಸ್ಯವನ್ನು ವಿಶದಪಡಿಸಿ :--

(೧) ಪಸುರೆಲೆಗೆವೇಳ್ಕು ಮುಚಪರ್ಯೆ; ಪಣ್ಣೆಲೆಗೇಕೆ ?

(೨) ಸಮಯಕಪ್ಪ ಕೆಳೆಯೆನಲಾ ವಿಶಮತೆಯೊಳು ತೊರೆವರೆ ?

(೩) ನಾಥ–ಸ್ನೇಹಿತನು ಜಲದ ನಾನು

(೪) ಸತಿಯ ದಯದಿ ಬದುಕಿಬಂದೆ, ಜೀಯ, ನಾನಿಂದು

(೫) ಇವರ ನೆಗೞ್ತೆ ಕರಂ ಪಿರಿದು

(೬) ಎತ್ತರಗಳಿರುವುದು ಎಲ್ಲರೂ ಹತ್ತುತ್ತಾರೆಂದಲ್ಲ, ಎಲ್ಲರೂ ಹತ್ತಬೇಕೆಂದು

(೭) ನಿರ್ಮಳರ ಸಂಗವು ಕಳೆಯದಿಹುದೇ ಮನದ ಮೈಲಿಗೆಯ ೧೨

(b) (೧) ' ಈ ಮಹಾಶ್ವೇತೆ ಆ ಜನಕಕನ್ಯೆಗೆ ಹೆಗಲೆಣೆಯಾಗಿದ್ದಾಳೆ ',

(೨) ' ಕಾಮವಶೀ ಕ್ರೋಧವಶೀ ನಶ್ಚಾತ್ಮಂ ವಿರಸಿ ',

(೩) ' ನಿಜ ಸಾಹಸೈಕದೇಶಾನುಮರಣಮೆಮಗಕ್ಕೆ '

ಇವುಗಳಲ್ಲಿ **ಎರಡನ್ನು** ಕುರಿತು ಟಿಪ್ಪಣಿ ಬರೆಯಿರಿ. ೬

೩ ಕೆಳಗಿನವನ್ನು ಕುರಿತು **ಸಂಕ್ಷೇಪವಾಗಿ** ವಿವೇಚಿಸಿ :--

(a) ಯುದ್ಧದಲ್ಲಿ ಗೆದ್ದ ಬಾಹುಬಲಿಯ ಪಶ್ಚಾತ್ತಾಪ.

**ಅಥವಾ**

ಯದುಗಿರಿಯ ಮೂಡಣ ಕಣಿವೆಯಲ್ಲಿ ಚಿಗುರಿದ ಮೌನದ ಸೌಂದರ್ಯ ೧೦

(b) ' ಅಹಲ್ಯೆ 'ಯ ಪೂರ್ವಾಂಕದಲ್ಲಿ ಹಸುಳೆಗಳಿಂದ ಆಗಿರುವ ಪ್ರಯೋಜನ

**ಅಥವಾ**

ಅಹಲ್ಯೆ ಇಂದ್ರನಿಗೆ ವಶಳಾದ ಪ್ರಕರಣದ ಸ್ವಾರಸ್ಯ. ೧೦

(c) ' ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ಪ್ರಸಿದ್ಧರೂ ಪೂಜ್ಯರೂ ಆಗಿರುವ ಮಹಿಳೆಯರೆಲ್ಲರೂ ತಪಸ್ಸಿಲ್ಲದೆ ಆ ಮಹತ್ತಿಗೇರಿಲ್ಲ ' ಎಂಬುದನ್ನು ಕುರಿತು.

**ಅಥವಾ**

ಪಂಪನು ವರ್ಣಿಸಿರುವ ಆದಿದೇವನ ಜನ್ಮಾಭಿಶೇಕದ ಭವ್ಯತೆ. ೧೦

೪ ಕುರುಕ್ಷೇತ್ರದಲ್ಲಿ ದುರ್ಯೋಧನನಿಗೆ ಶೋಕವೂ ಕ್ರೋಧವೂ ಏಕಕಾಲದಲ್ಲಿ ಉಂಟಾಗುತ್ತಿದ್ದುದನ್ನು ರನ್ನನು ಹೇಗೆ ಚಿತ್ರಿಸಿದ್ದಾನೆ ? ವಿಶದಪಡಿಸಿ.

**ಅಥವಾ**

' ಭಗವದಾಗಮನೆಮೇಂ ಭಕ್ತನ ನಿರೀಕ್ಷಿಸಿದ ರೂಪದಿಂ ಬಂದಪುದೆ ? ' ಎಂಬುದಕ್ಕೆ ಶಬರಿಯ ಪ್ರಕರಣ ಏನು ಉತ್ತರ ಹೇಳುತ್ತದೆ ? ವಿವರವಾಗಿ ನಿರೂಪಿಸಿ. ೧೫

೫ " 'ಅಹಲ್ಯೆ' ನಾಟಕದ ನಾಯಕಿ ಒಬ್ಬಳೇ ಆದರೂ ಅದರ ಮೂರು ಅಂಕಗಳಿಗೆ ಮೂವರು ಬೇರೆ ಬೇರೆ ನಾಯಕರು "--ಈ ಹೇಳಿಕೆಯನ್ನು ಪರಿಶೀಲಿಸಿ.

**ಅಥವಾ**

' ಮಹೋಪಮೆ ' ಎಂದರೇನು ? ಪಾಶ್ಚಾತ್ಯ ಸಾಹಿತ್ಯದಲ್ಲಿಯೂ ಮಹೋಪಮೆಗೆ ಏನು ಸ್ಥಾನವಿದೆ ? ಉದಾಹರಣೆ ಕೊಟ್ಟು ವಿವರಿಸಿ. ೧೫

----

ಅನುಬಂಧ-೪

## **ಪರೀಕ್ಷೆ ಮತ್ತು ಮೌಲ್ಯಮಾಪನದ ಕಾರಣವಾಗಿ ಗಮನಿಸಬೇಕಾದ ಒಂದು ದಾಖಲೆ**

(ಮ.ಗಂ. ರೇಣುಕಾ ಪ್ರಸನ್ನರ 'ಮೌಲ್ಯರಹಿತ ಮೌಲ್ಯಮಾಪನ' ಲೇಖನದಿಂದ)

ಕನ್ನಡ ಉತ್ತರ ಪತ್ರಿಕೆಗಳ ಮೌಲ್ಯಮಾಪನದ ಬಗ್ಗೆ 'ಪ್ರಜಾವಾಣಿ'ಯ ೪.೬.೧೯೭೮ರ 'ಸಾಪ್ತಾಹಿಕ ಪುರವಣಿ'ಯಲ್ಲಿ ಪ್ರಕಟವಾದ ಶ್ರೀ ಎಚ್.ವಿ ಶ್ರೀನಿವಾಸ ಶರ್ಮರ 'ಉತ್ತರ ಪತ್ರಿಕೆಗಳ ಸ್ಯಾಂಪಲ್' ಎಂಬ ಲೇಖನ ಮತ್ತು ಆ ಲೇಖನದ ಮೇಲೆ ೧೮.೬.೧೯೭೮ರ ಸಾಪ್ತಾಹಿಕ ಪುರವಣಿಯಲ್ಲಿ ಪ್ರಕಟವಾದ ಪ್ರತಿಕ್ರಿಯೆಗಳು ಗಂಭೀರ ಪರಿಶೀಲನೆಗೆ ಅರ್ಹವಾಗಿವೆ.

ಶ್ರೀನಿವಾಸ ಶರ್ಮರ ಲೇಖನದಲ್ಲಿ,

"ವಿದ್ಯಾರ್ಥಿಗಳ ಉತ್ತರ ಪತ್ರಿಕೆಗಳ ಮೌಲ್ಯಮಾಪನ ಇತ್ತೀಚೆಗೆ ಮುಗಿಯಿತು. ಕನ್ನಡವೆಂದರೆ ಏನು ಬೇಕಾದರೂ ಬರೆಯಬಹುದು ಎಂದು ತಿಳಿದುಕೊಂಡಿರುವ ವಿದ್ಯಾರ್ಥಿಗಳು ಯಾವ ರೀತಿ ಬರೆಯುತ್ತಾರೆ ಎನ್ನುವುದಕ್ಕೆ ಕೆಲವು ಉದಾಹರಣೆಗಳು ಇಲ್ಲಿವೆ. ಈ ಹಿನ್ನೆಲೆಯಲ್ಲಿ ಪರೀಕ್ಷಕರು ಕನ್ನಡದಲ್ಲಿ ಅಂಕಗಳನ್ನು ಯಾಕೆ ದಾರಾಳವಾಗಿ ಕೊಡುವುದಿಲ್ಲ ಎನ್ನುವ ಪ್ರಶ್ನೆಗೆ ಉತ್ತರ ಹುಡುಕಬೇಕು" ಎಂದು ಪ್ರಜಾವಾಣಿ ಬರೆದಿತ್ತು.

"ಕೊಳದಲ್ಲಿ ಅಡಗಿದ್ದ ದುರ್ಯೋಧನನನ್ನು ಕುರಿತು ಭಿಂಅನು ಹೀಗೆ ಹೇಳುತ್ತಾನೆ-ಈಡಿಯಟ್, ರ್‍ಯಾಸ್ಕಲ್, ನೀರಿನಲ್ಲಿ ಏಕೆ ಮುಳುಗಿದ್ದೀಯೆ, ಹೆಂಗಸರಂತೆ...ಬಾ...ಇಲ್ಲದಿದ್ದರೆ ನಾನೆ ಬರುತ್ತೇನೆ...ದುರ್ಯೋಧನನು ಕೋಪಗೊಂಡು ಹೊರಬಂದಾಗ ರನ್ನನು ಅವನನ್ನು ಕತ್ತಿಯಿಂದ ಹೊಡೆದು ಕೊಂದನು(ಗದಾಯುದ್ಧ)"

ವಿದ್ಯಾರ್ಥಿಗಳು ಬರೆದಿದ್ದ ಇಂತಹ ಹಲವಾರು 'ಸ್ವಾರಸ್ಯಕರ' ಉತ್ತರಗಳನ್ನು ಶರ್ಮರು ತಮ್ಮ ಲೇಖನದಲ್ಲಿ ಉಲ್ಲೇಖಿಸಿದ್ದಾರೆ. ಆದರೆ ವಿದ್ಯಾರ್ಥಿಗಳು ಏಕೆ ಹೀಗೆ ಬರೆಯುತ್ತಾರೆಂಬುದರ ಬಗ್ಗೆ ಶ್ರೀ ಕೆ.ವಿ. ಅಕ್ಷರ ಎಂಬ ವಿದ್ಯಾರ್ಥಿ 'ಬುರುಡೆ ಬಿಡಲು ಕಾರಣಗಳೇನು' ಎಂಬ ಶೀರ್ಷಿಕೆಯಡಿಯಲ್ಲಿ ವ್ಯಕ್ತಪಡಿಸಿದ ವಿದ್ಯಾರ್ಥಿಯ ಪ್ರತಿಕ್ರಿಯೆ ಇಂತಿದೆ(ಪ್ರಜಾವಾಣಿ ೧೮.೬.೧೯೭೮):

"ಶ್ರೀ ಶ್ರೀನಿವಾಸ ಶರ್ಮ ಅವರು ೪.೬.೧೯೭೮ನೇ ಪ್ರಜಾವಾಣಿ ಸಾಪ್ತಾಹಿಕ ಪುರವಣಿಯಲ್ಲಿ ಒಂದು ಲೇಖನ ಬರೆದು ಪಿ.ಯು.ಸಿ. ವಿದ್ಯಾರ್ಥಿಗಳ ಕನ್ನಡ ಉತ್ತರದ ಮಾದರಿಗಳನ್ನು ತೋರಿಸಿದ್ದಾರೆ. ಈ ಅಸಂಬದ್ಧತೆಯನ್ನು ರುಚಿಕಟ್ಟಾಗಿ ವಿವರಿಸಿ ತಮ್ಮ ಲೇಖನ 'ಹೌದು' ಅನ್ನಿಸುವಂತೆ ಮಾಡುವಲ್ಲಿ ಸಫಲರಾಗಿದ್ದಾರೆ. ಆದರೆ ಈ ಸಮಸ್ಯೆಯ ಒಂದು ಭಾಗವನ್ನೇ ಇವರು ಗಮನಿಸಿಲ್ಲ. ನಮ್ಮ ವಿದ್ಯಾರ್ಥಿಗಳು ಹಾಗೆ ಉತ್ತರ ಬರೆದರು, ಹೀಗೆ ಉತ್ತರ ಬರೆದರು ಎಂದು ಬರೆಯುವ ಈ ಮೇಸ್ಟರುಗಳು ಪ್ರಶ್ನೆ ಕೇಳುವ ರೀತಿಯೇನು? 'ಭೀಮನಿಗೆ ಸಿಟ್ಟು ಬಂದ ಬಗೆಯನ್ನು ವರ್ಣಿಸಿ'(ವೇಣಿ ಸಂಹಾರ) 'ಸನತ್ಕುಮಾರ ಚಕ್ರವರ್ತಿಗೆ ವೈರಾಗ್ಯ ಉಂಟಾಗಲು ಕಾರಣಗಳೇನು?'(ವಡ್ಡಾರಾಧನೆ) ಇಂಥ ಅಸಂಬದ್ಧ ಪ್ರಶ್ನೆಗಳನ್ನು ಕೇಳಿದರೆ ಸುಮ್ಮನೆ ಬುರುಡೆ ಬಿಡುವುದಲ್ಲದೆ ವಿದ್ಯಾರ್ಥಿಗಳು ಬೇರೇನು ಬರೆಯಬೇಕು? ಸಾಹಿತ್ಯದ ಸತ್ವವನ್ನೇ ವಿದ್ಯಾರ್ಥಿಗಳಿಗೆ ತಿಳಿಸದೆ, ಅವರಿಗೆ ಆಸಕ್ತಿಯೇ ಹುಟ್ಟದೆ ಸುಮ್ಮನೆ ಹಳಗನ್ನಡದ ಕತೆಯನ್ನು ಹೊಸಗನ್ನಡದಲ್ಲಿ ಬರೆಯುವುದಾದರೆ ಸಹಜವಾಗಿ ವಿದ್ಯಾರ್ಥಿ ಯಾವುದಾದರೂ ಮೂರನೇ ದರ್ಜೆಯ ಗೈಡ್ ಓದಿ ಪರೀಕ್ಷೆಯಲ್ಲಿ ನೆನಪಿದ್ದಷ್ಟನ್ನು ಕಾರುತ್ತಾನೆ.

ಶ್ರೀಯವರು ತಮ್ಮ ಲೇಖನದಲ್ಲಿ ಮಾಡಿದಂತೆ ಇಂಥ ಅಸಂಬದ್ಧತೆಗಳನ್ನು ಹೆಕ್ಕಿ ಖುಶಿ ಪಡುವುದಕ್ಕಿಂತ ನಾವು ಇನ್ನೂ ಸಮಸ್ಯೆಯ ಆಳವನ್ನು ನೋಡಬೇಕಾಗುತ್ತದೆ. ಇಂಥ ಉತ್ತರಗಳನ್ನು ವಿದ್ಯಾರ್ಥಿಗಳು ಯಾಕೆ ಬರೆಯುತ್ತಾರೆ? ತೀರಾ ಸಂಕೀರ್ಣ ವಿಶ್ಲೇಶಣೆಗೆ ಒಳಗಾಗಬೇಕಾದ ಪ್ರಶ್ನೆಯಾದರೂ ಇದಕ್ಕೆ ಒಂದು ಕಾರಣ ಉರು ಹೊಡೆಸುವ ನಮ್ಮ ಶಿಕ್ಷಣ ಕ್ರಮ. ವಿಜ್ಞಾನವಾಗಲಿ, ಸಾಹಿತ್ಯವಾಗಲೀ ವ್ಯಕ್ತಿಯ ಆಳಕ್ಕಿಳಿದು ಕಲಕದೆ ಹೋದರೆ ಇವರ ಶಿಕ್ಷಣ ಸಂಪೂರ್ಣ ವ್ಯರ್ಥ. ಅದು ಯಾರದ್ದೋ ಮಾತನ್ನು ಯಾರರದ್ದೋ ಬಾಯಿಯಲ್ಲಿ ಆಡಿಸುವ ಅಸಂಬದ್ಧ ಪ್ರಯತ್ನ-ಅಷ್ಟೆ.

ಶ್ರೀಯುತರು ಮಾಡಿದಂತೆಯೇ ಈ ಸಮಸ್ಯೆಯ ಇನ್ನೊಂದು ಮುಖವನ್ನು ತೋರಿಸುವುದಕ್ಕೋಸ್ಕರ ನಮ್ಮ ಮೇಶ್ಟರುಗಳು ಕೊಟ್ಟ ಕೆಲವು 'ನೋಟ್ಸು'ಗಳನ್ನು ಇಲ್ಲಿ ಬರೆದು ಜನರಿಗೆ ಪುಕ್ಕಟೆ ಮನರಂಜನೆ ಒದಗಿಸಬಹುದು. ಆದರೆ ಅದು ನನಗೆ ಇಶ್ಟವಿಲ್ಲ. ನಾನು ಹೇಳಬೇಕಾದ್ದು ಇಶ್ಟೆ-ಶ್ರೀಯುತರು ಸಮಸ್ಯೆಯ ಒಂದು ಮುಖವನ್ನಶ್ಟೇ ಸರಳವಾಗಿ ಗೇಲಿ ಮಾಡಿದ್ದಾರೆ. ಆದರೆ ಗಂಭೀರವಾಗಿ ಯೋಚಿಸಿದರೆ ಈ ಸಮಸ್ಯೆ ಇಶ್ಟು ಸಣ್ಣದೂ ಅಲ್ಲ; ಸರಳವೂ ಅಲ್ಲ, ಗೇಲಿ ಮಾಡಬಹುದಾದ್ದಕ್ಕಿಂತ ಇದು ತುಂಬಾ ಸಂಕೀರ್ಣ''

ವಿದ್ಯಾರ್ಥಿಯ ಈ ಪ್ರತಿಕ್ರಿಯೆಯನ್ನು ಪ್ರಬುದ್ಧವೆಂದು ಮೆಚ್ಚುವುದರ ಹೊರತು ಬೇರೆ ವ್ಯಾಖ್ಯಾನ ನೀಡುವ ಅಗತ್ಯವಿಲ್ಲ. ಇಂತಹ ಪ್ರಬುದ್ಧ ವಿದ್ಯಾರ್ಥಿಗಳಿಗೆ ಇದುವರೆಗೂ ವಿಶ್ಲೇಶಿಸಿರುವ ಮೌಲ್ಯಮಾಪನದ ವಿರೋಧಾಭಾಸಗಳು ತಿಳಿದರೆ ಅಧ್ಯಾಪಕರ ಸ್ಥಾನ ಎಲ್ಲಿಗೆ ಇಳಿಯಬಹುದು? ಅಧಿಕಾರಶಾಹಿಯ ಗತ್ತು ಹೇಗಾಗಬಹುದು?( ಮ.ಗಂ. ರೇಣುಕಾ ಪ್ರಸನ್ನ: ೧೯೭೯,)

ಅನುಬಂಧ-೫

**ಅಧ್ಯಾಪನ ಸಮುದಾಯಕ್ಕೆ ಸಂಬಂಧಿಸಿದ ಪ್ರಶ್ನೆಗಳು ಮತ್ತು ಆಯ್ಕೆಯ ಉತ್ತರಗಳ ಸರಣಿ**
(ಅಭಿಪ್ರಾಯಬೇದಗಳನ್ನು ಅಂಕೆಗಳಲ್ಲಿ ಸೂಚಿಸಲಾಗಿದೆ)

೧. ಪದವಿ ತರಗತಿಯಲ್ಲಿ ಕನ್ನಡ ಭಾಶೆಯ ಕಲಿಕೆ ಎಂದರೆ,

ಅ) ಪಠ್ಯವಿಶಯದ ತಿಳುವಳಿಕೆ- ೦೮
ಬ) ಕನ್ನಡ ಸಾಹಿತ್ಯ, ಸಂಸ್ಕೃತಿಯ ಬಗೆಗಿನ ತಿಳುವಳಿಕೆ- ೬೮
ಕ) ಕನ್ನಡ ಭಾಶೆಯ ಕೌಶಲ್ಯಗಳ ತಿಳುವಳಿಕೆ- ೨೪
ಇ) ಇತರೆ- ವ್ಯಾಕರಣ ಕುರಿತ ತಿಳುವಳಿಕೆ ೦೪

೨. ಪದವಿ ಹಂತದಲ್ಲಿ ಕನ್ನಡ ಭಾಶಾ ಕಲಿಕೆಯ ತರಗತಿಯಲ್ಲಿ

ಅ)ಕಲಿಕಾರ್ಥಿಗಳಿಗೆ ನೈತಿಕ ಶಿಕ್ಶಣ ಮುಖ್ಯವಾಗುವಂತೆ ಚರ್ಚೆಗೆ ಪಠ್ಯವಿಶಯ ಯೋಜಿಸಬೇಕು- ೪೬
ಬ)ಕನ್ನಡ ಭಾಶೆಯ ಬಳಕೆ ಮತ್ತು ಕೌಶಲ್ಯಗಳ ತಿಳುವಳಿಕೆಗಳ ಚರ್ಚೆಯಾಗಬೇಕು- ೩೮
ಕ)ಓದು ಮತ್ತು ಅರ್ಥಗ್ರಹಿಕೆಗೆ ಅವಕಾಶವನ್ನು ಒದಗಿಸಿದರೆ ಸಾಕು- ೦೬
ಇ) ಇತರೆ(ನಮೂದಿಸಿ)-ವ್ಯಕ್ತಿತ್ವ ವಿಕಸನ-೧/ಸಾಹಿತ್ಯಕ ಅಂಶಗಳ ತಿಳುವಳಿಕೆಯಿರಬೇಕು-೧೦೨

೩. ಪದವಿ ಹಂತದಲ್ಲಿ ಸಾಹಿತ್ಯೇತರ ಕನ್ನಡ ಪಠ್ಯದಿಂದಲೂ ಕನ್ನಡ ಭಾಶಾ ಕಲಿಕೆ

ಅ)ಆಗಬೇಕಾಗಿದೆ, ಸಾಹಿತ್ಯದೊಂದಿಗೆ ಇತರೆ ಜ್ಞಾನಶಿಸ್ತುಗಳ ಪಠ್ಯಗಳೂ ಇರಬೇಕು- ೭೯
ಬ)ಬೇಕಾಗಿಲ್ಲ, ಸಾಹಿತ್ಯ ಪಠ್ಯಗಳಲ್ಲಿ ಭಾಶೆಯ ಅಭ್ಯಾಸ ಭಾಗಗಳನ್ನು ಸೇರಿಸಿದರೆ ಸಾಕು- ೦೫
ಕ)ಕನ್ನಡ ಭಾಶಾ ಕಲಿಕೆಯ ಅಗತ್ಯಗಳನ್ನು ಇರುವ ಪಠ್ಯಗಳು ಒದಗಿಸುತ್ತಿದೆ,
ಚಿಂತಿಸಬೇಕಿಲ್ಲ- ೦೩
ಇ) ಇತರೆ(ನಮೂದಿಸಿ)- ಭಾಶಾ ಕಲಿಕೆ ಹೆಚ್ಚು ವಿಸ್ತಾರಗೊಂಡಿದೆ ೦೧

೪. ಪದವಿ ತರಗತಿಯ ಕನ್ನಡ ಭಾಶಾ ಕಲಿಕೆಯ ಪಠ್ಯ ಎಂದರೆ,

ಅ)ಕತೆ,ಕಾವ್ಯ,ನಾಟಕ ಇತ್ಯಾದಿ ಮೂಲವಾದ ಸಾಹಿತ್ಯದ ಮಾದರಿಗಳು- ೪೫
ಬ)ಜಾತಿ, ಪ್ರದೇಶ, ವಯಸ್ಸು, ಸ್ಥಾನಮಾನ, ಸಮೂಹ ಮಾಧ್ಯಮ ಇತ್ಯಾದಿ
ಮೂಲವಾದ ಕನ್ನಡ ಬಳಕೆಯ ಮಾದರಿಗಳು- ೧೨
ಕ)ಮಾತು, ಓದು, ಬರಹ, ಅರ್ಥೈಸುವಿಕೆ ಇತ್ಯಾದಿ ಮೂಲವಾದ ಕೌಶಲ್ಯದ ಮಾದರಿಗಳು- ೩೪
ಇ)ಇತರೆ(ನಮೂದಿಸಿ)-ಜೀವನ ಮೌಲ್ಯಗಳನ್ನುತಿಳಿಸುವ ಪಠ್ಯ- ೦೧

೫. ಪದವಿ ತರಗತಿಗಳಲ್ಲಿ ಕನ್ನಡ ಭಾಶೆಯನ್ನು ಕಲಿಸುವುದು ಎಂದರೆ,

ಅ) ಕನ್ನಡ ಭಾಶೆಯ ಕೌಶಲ್ಯಗಳು, ಬಳಕೆಯ ಮಾದರಿಗಳ ಅರಿವು ಮೂಡಿಸುವುದು- ೨೪
ಬ) ಅಧ್ಯಾಪಕರು ನಿಯಮಿತ ಕನ್ನಡ ಪಠ್ಯವಿಶಯವನ್ನು ಅರ್ಥಮಾಡಿಸುವುದು- ೦೬
ಕ) ಭಾಶೆ, ಸಾಹಿತ್ಯ, ಸಂಸ್ಕೃತಿ ಬೋಧನೆಯ ಮೂಲಕ ಕನ್ನಡಾಭಿಮಾನ ಮೂಡಿಸುವುದು- ೬೬
ಇ)ಇತರೆ(ನಮೂದಿಸಿ)- ವ್ಯಕ್ತಿತ್ವ ವಿಕಸನ-೧/ಭಾಶೆಯ ಸಾಧ್ಯತೆ-೧ ೦೩

೬. ಪದವಿ ತರಗತಿಗಳಲ್ಲಿ ಕಲಿಯುವ ಕನ್ನಡ-ಮಾತಿನ ಕನ್ನಡದ ಸಂಬಂಧ,

ಅ)ಇಲ್ಲ-ಇರಬೇಕು- ೦೩

ಬ)ಪ್ರಾಸಂಗಿಕವಾಗಿದೆ-ಮತ್ತಷ್ಟು ಅಗತ್ಯವಿದೆ- ೫೦
ಕ)ಮಾತು ಮತ್ತು ಬರವಣಿಗೆ ಒಂದೇ ಆಗಬೇಕಾಗಿಲ್ಲ- ೩೪
ಇ)ಇತರೆ(ನಮೂದಿಸಿ)- ಭಾಷಾ ಬಳಕೆಯು, ಪಠ್ಯದ ಮೂಲಕ ವೇದ್ಯವಾಗುವ
ವಿಚಾರ ಪ್ರತ್ಯೇಕ,ಸಮಾಜೋ ಆರ್ಥಿಕ, ಕೌಶಲ್ಯ, ವೃತ್ತಿಶಿಕ್ಷಣ ಮಾದರಿ ಬೇಕು
ಮಾತು ಶುದ್ಧವಾದರೆ ಬರವಣಿಗೆ ಶುದ್ಧವಾಗುತ್ತೆ ೦೩

೭. ಪದವಿ ಹಂತದಲ್ಲಿ ಕನ್ನಡ ಭಾಷಾ ಕಲಿಕೆ ಮತ್ತು ವಿಶಯಾಧಾರಿತ ಕಲಿಕೆಯ ಸಂಬಂಧ

ಅ)ಭಾಶೆಯ ಕಲಿಕೆ-ಭಾಶಿಕ ವಿಚಾರಗಳ ತಿಳುವಳಿಕೆಗೆ, ವಿಶಯಾದಾರಿತ ಕಲಿಕೆ-
ವಿಶಯ ನೈಪುಣ್ಯತೆಗೆ- ೩೭
ಬ)ಕನ್ನಡ ಭಾಶೆಯ ಕಲಿಕೆ ಇತರೆ ವಿಶಯಗಳ ಕಲಿಕೆಗೆ ಭಾಶಾಕೌಶಲ್ಯವನ್ನು ಒದಗಿಸುತ್ತದೆ- ೩೪
ಕ)ಕನ್ನಡ ಭಾಶೆಯ ಕಲಿಕೆ ಕನ್ನಡ ಸಾಹಿತ್ಯವಿಶಯದ ಕಲಿಕೆಗೆ ಪ್ರೇರಕ- ೨೨
ಇ)ಇತರೆ(ನಮೂದಿಸಿ)- ಭಾಶಾ ಸೂಕ್ಷ್ಮತೆ ಇರುವ ಪಠ್ಯದ ಮೂಲಕ ಹೇಳಬಹುದು ೦೧

೮. ಪದವಿಯಲ್ಲಿ ಕನ್ನಡ ಸಾಹಿತ್ಯ ಮತ್ತು ಕನ್ನಡ ಭಾಶಾ ಕಲಿಕೆಯ ಪಠ್ಯಗಳ ವ್ಯತ್ಯಾಸ,

ಅ)ಸಾಹಿತ್ಯ ಮತ್ತು ಭಾಶಾ ಕಲಿಕೆಯ ಪಠ್ಯಗಳು ಬೇರೆಯಲ್ಲ- ೪೭
ಬ)ಬೇರೆಯಾಗಿವೆ ಎನಿಸುವುದಿಲ್ಲ, ಬೇರೆಯಾಗಬೇಕು- ೨೫
ಕ)ಬೇರೆ ಬೇರೆಯಾಗಿವೆ, ಬದಲಾವಣೆಯ ಅಗತ್ಯವಿಲ್ಲ- ೦೯
ಇ)ಇತರೆ(ನಮೂದಿಸಿ)-

೯. ಪದವಿ ಹಂತದಲ್ಲಿ ಕನ್ನಡ ಭಾಶೆಯನ್ನು ಬೋಧಿಸಲು ಸಾಹಿತ್ಯ ಪಠ್ಯವನ್ನು ಬಳಸುವುದು

ಅ)ಸಾಹಿತ್ಯದಲ್ಲಿ ಕನ್ನಡ ಭಾಶೆ ಹೇಗೆ ಬಳಕೆಯಾಗಿದೆ ಎಂಬುದರ ತಿಳುವಳಿಕೆ ಮೂಡಿಸಲು- ೨೩
ಬ)ಸಾಹಿತ್ಯದ ಮೂಲಕ ಕನ್ನಡ ಸಂಸ್ಕೃತಿಯನ್ನು ಸಮರ್ಪಕವಾಗಿ ಪರಿಚಯಿಸಲು- ೪೯
ಕ)ಕನ್ನಡ ಭಾಶೆಯನ್ನು ಕಲಿಸಲು ಕನ್ನಡ ಸಾಹಿತ್ಯದ ಬಳಕೆ ಸಮರ್ಥ ದಾರಿ- ೨೩
ಇ)ಇತರೆ(ನಮೂದಿಸಿ)- ಅನುಭವ ವಿಸ್ತಾರಕ್ಕಾಗಿ- ೦೧

೧೦. ಪದವಿ ಹಂತದಲ್ಲಿ ಕನ್ನಡ ಭಾಶೆಯನ್ನು ಕಲಿಸುವ ವಿಧಾನ

ಅ)ಉಪನ್ಯಾಸದ ಮಾದರಿಯದಾಗಿರಬೇಕು- ೦೫
ಬ)ಚರ್ಚೆಯ ಮಾದರಿಯದಾಗಿರಬೇಕು- ೬೮
ಕ)ಪ್ರಶ್ನೋತ್ತರ ಮಾದರಿಯದಾಗಿರಬೇಕು- ೨೧
ಇ)ಇತರೆ(ನಮೂದಿಸಿ)-ಮೂರೂ ಮಾದರಿಯಿರಬೇಕು ೦೨

೧೧. ಪದವಿಯಲ್ಲಿ ಕನ್ನಡ ಭಾಶಾ ಬೋಧನ ವಿಧಾನ ಎನ್ನುವುದು

ಅ)ಸಿದ್ಧ ಮತ್ತು ಏಕರೂಪಿಯಾದುದು- ೧೬
ಬ)ತರಗತಿಯ ಸಂದರ್ಭದಲ್ಲೇ ನಿರ್ಧಾರವಾಗುವಂತಹುದು- ೨೭
ಕ)ವೈಯುಕ್ತಿಕ ಸಾಮರ್ಥ್ಯಕ್ಕೆ ಸಂಬಂಧಿಸಿದ್ದು- ೪೭
ಇ)ಇತರೆ(ನಮೂದಿಸಿ)-ಕ್ರಿಯಾತ್ಮಕ ಮತ್ತು ಸಮಾಜದೊಡನೆ ಮುಖಾಮುಖಿ- ೦೨
ಪಠ್ಯ ಮತ್ತು ಪ್ರಶ್ನೆ ಪತ್ರಿಕೆಯಲ್ಲಿ ಇದು ಇಲ್ಲ

೧೨. ಪದವಿಯಲ್ಲಿ ಬೋಧನ ವಿಧಾನಗಳ ಬದಲಾವಣೆಯಿಂದ ಭಾಷಾಕಲಿಕೆಯ ಸಾಧ್ಯತೆ

ಅ)ಸಾಧ್ಯವಿದೆ, ಭಾಷಾ ಬಳಕೆ-ಕೌಶಲಗಳನ್ನು ಚರ್ಚೆಗೆ ತರುವ ಮೂಲಕ- ೫೩
ಬ)ಸಾಧ್ಯವಿಲ್ಲ, ಪಠ್ಯದ ವಸ್ತು-ಸಂಗತಿ ವಿವರಿಸಲು ಮಾತ್ರ ಸಮಯವಿದೆ- ೧೭
ಕ)ಪದವಿ ಪಠ್ಯದಲ್ಲಿ ಇದಕ್ಕೆ ವಿಸ್ತೃತ ಅವಕಾಶವನ್ನು ಕಲ್ಪಿಸಿಲ್ಲ- ೧೭
ಇ)ಇತರೆ(ನಮೂದಿಸಿ)-

೧೩. ಪದವಿಯ ಕನ್ನಡ ಭಾಷಾ ಪಠ್ಯಗಳನ್ನು ರೂಪಿಸುವಲ್ಲಿ ನಿಮ್ಮ ಪಾತ್ರ

ಅ)ಪಠ್ಯ ಸಮಿತಿಯ ನಿರ್ಧಾರಗಳನ್ನು ಬೆಂಬಲಿಸುವ ಮೂಲಕ- ೦೩
ಬ)ಅಧ್ಯಾಪಕರ ಆಲೋಚನೆಗಳನ್ನು ಪ್ರತಿನಿಧಿಸುವುದರ ಮೂಲಕ- ೧೮
ಕ)ಸಾಮಾಜಿಕ ಅಗತ್ಯ ಮತ್ತು ಕಲಿಕಾರ್ಥಿಗಳ ನಿರೀಕ್ಷೆಗಳನ್ನು ಪ್ರತಿನಿಧಿಸುವುದರ ಮೂಲಕ- ೬೭
ಇ)ಏನೂ ಇಲ್ಲ/ಇತರೆ(ನಮೂದಿಸಿ)-ಅವಕಾಶವಿಲ್ಲ- ೦೩

೧೪. ಪದವಿಯ ಕನ್ನಡ ಭಾಷಾ ಕಲಿಕೆಯ ಪಠ್ಯಗಳ ಬದಲಾವಣೆಯು

ಅ)ಭಾಷಾ ಕೌಶಲ್ಯಗಳ ಮತ್ತು ಬಳಕೆಯ ಮಾದರಿಗಳನ್ನು ಒಳಗೊಳ್ಳಬೇಕು- ೨೦
ಬ)ಸಮಾಜ, ಸಂಸ್ಕೃತಿ, ನೈತಿಕ ಬೋಧನಾವಿಶಯಗಳನ್ನು ಒಳಗೊಳ್ಳಬೇಕು- ೬೭
ಕ)ಬೇಕಾಗಿಲ್ಲ-
ಇ)ಇತರೆ(ನಮೂದಿಸಿ)- ೦೧

೧೫. ಪದವಿಯ ಕನ್ನಡ ಭಾಷಾ ಪಠ್ಯಗಳ ನಿರ್ಮಾಣ ಕುರಿತಾಗಿ ವಿದ್ಯಾರ್ಥಿಗಳ ಪಾಲುಗೊಳ್ಳುವಿಕೆ

ಅ)ಅಗತ್ಯವಿಲ್ಲ- ೧೮
ಬ)ಪಠ್ಯಕ್ರಮದ ಚರ್ಚೆಯಲ್ಲಿ ಅಗತ್ಯ- ೫೯
ಕ)ಪಠ್ಯ ನಿರ್ಮಾಣ ಕಾರ್ಯದಲ್ಲಿ ಅಗತ್ಯ- ೦೯
ಇ)ಇತರೆ(ನಮೂದಿಸಿ)-ವಿದ್ಯಾರ್ಥಿಗಳಿಗೆ ಸಂಬಂಧಿಸಿದ್ದಲ್ಲ ೦೧

೧೬. ಪದವಿ ಕನ್ನಡ ಭಾಷಾ ಪ್ರಶ್ನೆಪತ್ರಿಕೆ, ಪರೀಕ್ಷೆ ಮತ್ತು ಮೌಲ್ಯಮಾಪನ ವಿಧಾನ

ಅ)ಸರಿಯಾಗಿಲ್ಲ, ಪಠ್ಯದ ವಸ್ತು-ಸಂಗತಿಗಳ ನೆನಪನ್ನು ಮಾತ್ರ ಆಧರಿಸಿದೆ- ೪೨
ಬ)ಸರಿಯಾಗಿದೆ, ಈ ವಿಧಾನದಿಂದ ವಿದ್ಯಾರ್ಥಿಗಳನ್ನು ಶಿಸ್ತಿನಲ್ಲಿಡಲು ಸಾಧ್ಯ- ೧೫
ಕ)ಬದಲಾವಣೆ ಅಗತ್ಯ, ಹ್ಯಾಗೆಂದು ತಿಳಿದಿಲ್ಲ- ೨೩
ಇ)ಇತರೆ(ನಮೂದಿಸಿ)-ಮೌಖಿಕ ಪರೀಕ್ಷೆ, ಓದಿನ ಪರೀಕ್ಷೆ-೨
ಮೌಲ್ಯ ಮಾಪನ ಶಿಬಿರ ಬೇಕು-೨, ಪ್ರಾಥಮಿಕ ಶಾಲಾ ಹಂತಕ್ಕೆ ಎಳೆದೊಯ್ದಂತಾಗುತ್ತದೆ ೦೫

೧೭. ಪದವಿಯಲ್ಲಿ ಭಾಷಾ ಕಲಿಕೆಯನ್ನು ಪರೀಕ್ಷಿಸುವ ಪ್ರಶ್ನಪತ್ರಿಕೆಯು

ಅ)ಭಾಷಾ ತಿಳುವಳಿಕೆ(ಕೌಶಲ, ಬಳಕೆ...)ಯನ್ನು ಪರೀಕ್ಷಿಸುವ ಪ್ರಶ್ನೆಗಳನ್ನು
ಒಳಗೊಂಡಿರಬೇಕು- ೫೧
ಬ)ಪಠ್ಯಸಾರ(ಕಂಟೆಂಟ್)ದ ಗ್ರಹಿಕೆಯ ಪ್ರಶ್ನೆಗಳನ್ನು ಒಳಗೊಂಡಿರಬೇಕು- ೩೦
ಕ)ಪದವಿಯಲ್ಲಿ ಭಾಷಾ ಕಲಿಕೆಯ ಬಗ್ಗೆ ಚಿಂತಿಸುವ ಅಗತ್ಯವಿಲ್ಲ- ೧೨
ಇ)ಇತರೆ(ನಮೂದಿಸಿ)-ವ್ಯಕ್ತಿತ್ವ ವಿಕಸನ-೧/ಸೃಜನಶೀಲ ಪ್ರಶ್ನೆಗಳಿರಬೇಕು-೧ ೦೨

೧೮. ಪದವಿ ಕಲಿಕಾರ್ಥಿಗಳ ಬರವಣಿಗೆಯಲ್ಲಿ ಕಾಣುವ ತಪ್ಪುಗಳಿಗೆ ಕಾರಣ

| | |
|---|---|
| ಅ)ಭಾಷಾ ಕಲಿಕೆಗೆ ಪ್ರಾಮುಖ್ಯತೆ ನೀಡದಿರುವುದು- | ೩೭ |
| ಬ)ಕಲಿಕಾರ್ಥಿಗಳ ಅಶಿಸ್ತು- | ೧೯ |
| ಕ)ಪದವಿಗೂ ಹಿಂದಿನ ತರಗತಿಗಳಲ್ಲಿ ಕಲಿತ ವ್ಯಾಕರಣ ದೋಶಗಳು- | ೪೧ |
| ಇ)ಇತರೆ(ನಮೂದಿಸಿ)-ಅನ್ನ, ಆಶ್ರಯದ ಸಮಸ್ಯೆ | ೦೩ |

೧೯. ಪದವಿ ಹಂತದಲ್ಲಿ ಕನ್ನಡ ಭಾಶೆಯ ಉತ್ತರ ಪತ್ರಿಕೆಗಳ ಮೌಲ್ಯಮಾಪನದ ಉದ್ದೇಶ

| | |
|---|---|
| ಅ)ಕಲಿಕಾರ್ಥಿಗಳ ಬರವಣಿಗೆಯ ಸಾಮರ್ಥ್ಯವನ್ನು ಅಳೆಯುವುದು- | ೧೮ |
| ಬ)ಕಲಿಕಾರ್ಥಿಗಳ ಎಲ್ಲ ಬಗೆಯ ಭಾಶಾ ಕೌಶಲಗಳನ್ನು ಅಳೆಯುವುದು- | ೩೪ |
| ಕ)ಕಲಿಕಾರ್ಥಿಗಳ ಪಠ್ಯವಿಶಯದ ನೆನಪು/ಗ್ರಹಿಕೆಯ ಸಾಮರ್ಥ್ಯವನ್ನು ಅಳೆಯುವುದು- | ೪೯ |
| ಇ)ಇತರೆ(ನಮೂದಿಸಿ)- ನಾಡು, ನುಡಿ ಚಿಂತನೆಯ ಬಗ್ಗೆ ನಡೆಯಬೇಕು | ೦೧ |

೨೦. ೨೦೦೭-೦೮ ರಲ್ಲಿ ಬದಲಾವಣೆಗೆ ಒಳಗಾದ ಕನ್ನಡ ಭಾಶಾ ಕಲಿಕೆಯ ಪಠ್ಯಗಳು

| | |
|---|---|
| ಅ)ಭಾಶೆಯ ಕಲಿಕೆಗೆ ಸಮರ್ಥವಾಗಿವೆ- | ೪೩ |
| ಬ)ಭಾಶಾ ಕಲಿಕೆ ಪ್ರಾಸಂಗಿಕವಾಗಿದ್ದು-ಸಮರ್ಥವಾಗಿ ರೂಪುಗೊಂಡಿಲ್ಲ- | ೨೭ |
| ಕ)ಸರಿಯಿಲ್ಲ, ಅದಕ್ಕೂ ಹಿಂದಿನ ಪಠ್ಯಗಳೇ ಅನುಕೂಲಕರವಾಗಿದ್ದವು- | ೧೮ |
| ಇ)ಇತರೆ(ನಮೂದಿಸಿ)-ಬೋಧಿಸಲು ಅವಧಿ ಸಾಲುತ್ತಿಲ್ಲ | ೦೨ |

ಅನುಬಂಧ-೬

## ಕಲಿಕಾರ್ಥಿಗಳಿಗೆ ಸಂಬಂಧಿಸಿದ ಪ್ರಶ್ನೆಗಳು ಮತ್ತು ಆಯ್ಕೆಯ ಉತ್ತರಗಳ ಸರಣಿ
(ಅಭಿಪ್ರಾಯಬೇದಗಳನ್ನು ಅಂಕೆಗಳಲ್ಲಿ ಸೂಚಿಸಲಾಗಿದೆ)

**೧. ನೀವು, ಪದವಿಯ ಕನ್ನಡ ಭಾಶೆಯ ತರಗತಿಯು ಹೇಗಿರಬೇಕೆಂದು ಬಯಸುತ್ತೀರಿ,**

ಅ) ಮನರಂಜನೆಯ ತರಗತಿ ೪೦
ಬ) ಕನ್ನಡ ಭಾಶೆಯ ಕೌಶಲ್ಯ(ಸ್ಕಿಲ್)ಗಳನ್ನು ತಿಳಿಯುವ ತರಗತಿ ೧೧೭
ಕ) ಕನ್ನಡ ಸಾಹಿತ್ಯವನ್ನು ತಿಳಿಯುವ ತರಗತಿ ೧೦೮
ಇ) ಇತರೆ(ಬರೆಯಿರಿ)-

**೨. ಪದವಿಯಲ್ಲಿ ಕನ್ನಡ ಭಾಶೆಯ ತರಗತಿಯು ಯಾವ ಕಾರಣಕ್ಕಾಗಿ ಅನುಕೂಲ**

ಅ) ಕನ್ನಡದಲ್ಲಿ ವ್ಯವಹಾರಿಕ ಕೌಶಲಗಳನ್ನು ತಿಳಿಯಲು, ೭೬
ಬ) ಕನ್ನಡ ಭಾಶೆಯ ಬಳಕೆಯ ಸ್ವರೂಪವನ್ನು ಅರಿಯಲು, ೧೩೯
ಕ) ಕನ್ನಡದ ಮೇಲಿನ ಅಭಿಮಾನ ಹೆಚ್ಚಲು ೪೮
ಇ) ಇತರೆ(ಬರೆಯಿರಿ)-

**೩. ಪದವಿಯ ಕನ್ನಡ ಭಾಶೆಯ ತರಗತಿಗಳಲ್ಲಿ ಪಡೆದುಕೊಳ್ಳುವ ತಿಳುವಳಿಕೆಯು**

ಅ) ಅರ್ಥಮಾಡಿಕೊಳ್ಳುವ/ಮಾತನಾಡುವ ಕೌಶಲ, ೩೬
ಬ) ಓದುವ ಕೌಶಲ, ಬರಹದ ಕೌಶಲ, ೨೮
ಕ) ಸಾಹಿತ್ಯದ ಮೂಲಕ ಸಾಮಾಜಿಕ ತಿಳುವಳಿಕೆ ೧೮೭
ಇ)ಇತರೆ(ಬರೆಯಿರಿ)-

**೪. ಪದವಿಯಲ್ಲಿ ಕನ್ನಡ ಭಾಶೆಯ ಕಲಿಕೆಯ ತರಗತಿ ಪ್ರಿಯವಾದದ್ದು, ಯಾಕೆಂದರೆ**

ಅ) ಕನ್ನಡ ನನ್ನ ಮನೆ ಭಾಶೆ, ೬೭
ಬ) ಕರ್ನಾಟಕದಲ್ಲಿ ವಾಸವಾಗಿರುವುದರಿಂದ ೫೨
ಕ) ಕನ್ನಡ ಸಾಹಿತ್ಯ ಖುಶಿ ಕೊಡುವುದರಿಂದ ೧೪೮
ಇ) ಇತರೆ(ಬರೆಯಿರಿ)-

**೫. ಪದವಿಯಲ್ಲಿ ಕನ್ನಡ ಭಾಶೆಯ ಕಲಿಕೆ ಪ್ರಮುಖವಾದುದೆ? ಹೌದೆಂದಾದಲ್ಲಿ ಯಾವ ಬಗೆ**

ಅ) ಹೌದು-ಓದು, ಬರಹ, ಮಾತು, ಅರ್ಥಗ್ರಹಿಕೆ ಇತ್ಯಾದಿ
ಭಾಶಾ ಕೌಶಲಗಳ ಕಲಿಕೆಯಿರಬೇಕು ೧೧೮
ಬ) ಹೌದು-ಕೋರ್ಟು, ಕಚೇರಿ, ತಂತ್ರಜ್ಞಾನ ಇತ್ಯಾದಿ ಸಾರ್ವಜನಿಕ
ಉಪಯೋಗಿ ಕನ್ನಡ ಕಲಿಕೆಯಿರಬೇಕು ೯೪
ಕ) ಇಲ್ಲ-ನನಗೆ ವ್ಯವಹಾರಿಕವಾಗಿ ಎಲ್ಲ ಬಗೆಯ ಕನ್ನಡ ಭಾಶೆಯ
ತಿಳುವಳಿಕೆ ಇದೆ. ೧೮
ಇ) ಇತರೆ(ಬರೆಯಿರಿ)-

**೬. ಪದವಿ ಕನ್ನಡ ಭಾಶೆ ಕಲಿಕೆಯ ಸಂದರ್ಭದಲ್ಲಿ ನಿಮ್ಮ ಮತ್ತು ಅಧ್ಯಾಪಕರ ಸಂಬಂಧ**

ಅ) ಸಮಾನವಾಗಿರಬೇಕು ೧೪೩
ಬ) ಅಂತರ ಇರಬೇಕು ೩೪
ಕ) ಇದನ್ನು ಕುರಿತು ಚಿಂತಿಸುವ ಅಗತ್ಯವಿಲ್ಲ ೪೮
ಇ) ಇತರೆ(ಬರೆಯಿರಿ)–

**೭. ನಿಮ್ಮ ಪ್ರಕಾರ ಪದವಿಯಲ್ಲಿ ಕನ್ನಡ ಭಾಶಾ ಕಲಿಕೆಯ ಸಾಮಾಜಿಕ ಹೊಣೆಗಾರಿಕೆ ಎಂದರೆ,**

ಅ) ಕನ್ನಡ ಮಾತನಾಡುವ ಸಮಾಜದ ಸ್ವರೂಪವನ್ನು ಅರ್ಥಮಾಡಿಕೊಳ್ಳುವುದು ೩೨
ಬ) ಕನ್ನಡ ಮಾತನಾಡುವವರ ನಡುವೆ ಸಮಾನ ಅವಕಾಶಗಳನ್ನು
ಕಂಡುಕೊಳ್ಳುವುದು ೧೮
ಕ) ಇವೆರಡೂ ಹೌದು ೧೭೫
ಇ) ಇತರೆ(ಬರೆಯಿರಿ)–

**೮. ನೀವು ಕಲಿಯುವ ಪದವಿಯ ಕನ್ನಡ ಭಾಶೆಯ ಪಠ್ಯ(Text)ವು**

ಅ) ಕನ್ನಡ ಭಾಶೆಯ ಕೌಶಲಗಳನ್ನು ಕಲಿಯಲು ಸೂಕ್ತವಾಗಿರಬೇಕು ೬೩
ಬ) ಕನ್ನಡ ಭಾಶೆಯ ಸಾರ್ವಜನಿಕ ಬಳಕೆಯ ಮಾದರಿಗಳನ್ನು
ತಿಳಿಯಲು ಸೂಕ್ತವಾಗಿರಬೇಕು ೧೦೦
ಕ) ಕನ್ನಡ ಸಾಹಿತ್ಯವನ್ನು ಓದಲು, ತಿಳಿಯಲು ಸೂಕ್ತವಾಗಿರಬೇಕು ೧೩೭
ಇ) ಇತರೆ(ಬರೆಯಿರಿ)–

**೯. ಈಗಿನ ಪದವಿ ಕನ್ನಡ ಭಾಶಿಕ ಪಠ್ಯ(Text)ಗಳು**

ಅ) ಕನ್ನಡ ಮಾತನಾಡುವ ಸಮಾಜದ ಸ್ವರೂಪವನ್ನು
ಅರ್ಥಮಾಡಿಕೊಳ್ಳಲು ಅನುಕೂಲಕರವಾಗಿವೆ ೪೯
ಬ) ಕನ್ನಡ ಮಾತನಾಡುವವರ ನಡುವೆ ಸಮಾನ ಅವಕಾಶಗಳನ್ನು
ಕಂಡುಕೊಳ್ಳಲು ಸಮರ್ಪಕವಾಗಿವೆ ೩೫
ಕ) ಈ ಎರಡೂ ಅಂಶಗಳನ್ನು ಸ್ವಲ್ಪಮಟ್ಟಿಗೆ ಒಳಗೊಂಡಿವೆ,
ಸಮರ್ಪಕವಾಗಿ ರೂಪಿಸಬೇಕು ೧೫೨
ಇ) ಇತರೆ(ಬರೆಯಿರಿ)–

**೧೦. ಪದವಿ ಕನ್ನಡ ಭಾಶೆಯ ಪ್ರಶ್ನೆಪತ್ರಿಕೆಯು,**

ಅ) ನಿಮಗೆ ಗೊತ್ತಿರುವ ಕನ್ನಡ ಭಾಶೆಯ ಕೌಶಲಗಳನ್ನು
ಪರೀಕ್ಷಿಸುವುದಾಗಿರಬೇಕು ೭೨
ಬ) ನಿಮಗಿರುವ ಪಾಠವಿಶಯದ ನೆನಪಿನ ಸಾಮರ್ಥ್ಯವನ್ನು
ಪರೀಕ್ಷಿಸುವುದಾಗಿರಬೇಕು ೯೮
ಕ) ನಿಮಗೆ ಗೊತ್ತಿರುವ ಕನ್ನಡ ಭಾಶಾ ಬಳಕೆಯ ಸ್ವರೂಪವನ್ನು
ತಿಳಿಯುವುದಾಗಿರಬೇಕು ೯೫
ಇ) ಇತರೆ(ಬರೆಯಿರಿ)–

**೧೧. ಪದವಿ ಕನ್ನಡ ಭಾಶೆಯ ಪ್ರಶ್ನೆಪತ್ರಿಕೆಯಲ್ಲಿ**

ಅ) ಭಾಶಾ ಸಾಮರ್ಥ್ಯಕ್ಕೆ ಸಂಬಂಧಿಸಿದ ಪ್ರಶ್ನೆಗಳು ಹೆಚ್ಚಾಗಿಯೆ ಇರುತ್ತವೆ.
ಪಾಠವಿಶಯದ ಪ್ರಶ್ನೆಗಳು ಕಡಿಮೆ ೪೯
ಬ) ಭಾಶಾ ಸಾಮರ್ಥ್ಯಕ್ಕೆ ಸಂಬಂಧಿಸಿದ ಪ್ರಶ್ನೆಗಳು ಕಡಿಮೆ,
ಪಾಠವಿಶಯದ ಪ್ರಶ್ನೆಗಳು ಹೆಚ್ಚು ೭೭
ಕ) ಪ್ರಶ್ನೆಗಳು ಈಗಿರುವಂತೆಯೆ ಇರಲಿ, ಬದಲಾವಣೆ ಅಗತ್ಯವಿಲ್ಲ ೯೨
ಇ) ಇತರೆ(ಬರೆಯಿರಿ)-

**೧೨. ಪದವಿ ಹಂತದ ನಿಮ್ಮ ಕನ್ನಡ ಭಾಶಾ ಸಾಮರ್ಥ್ಯವನ್ನು ಗುರುತಿಸಲು ಇರುವ ಮೌಲ್ಯಮಾಪನ ವ್ಯವಸ್ಥೆಯು**

ಅ) ಸಮರ್ಪಕವಾಗಿದೆ-ನನ್ನ ಸಾಮರ್ಥ್ಯಕ್ಕೆ ಸರಿಯಾಗಿ ಅಂಕಗಳು ಸಿಗುತ್ತಿದೆ ೯೬
ಬ) ತೃಪ್ತಿಕರವಾಗಿಲ್ಲ-ನನ್ನ ಸಾಮರ್ಥ್ಯಕ್ಕೆ ಅನುಗುಣವಾಗಿ ಅಂಕಗಳು
ಸಿಗುತ್ತಿದೆ ಎನಿಸುವುದಿಲ್ಲ ೯೬
ಕ) ಬದಲಾಗಬೇಕು-ಹ್ಯಾಗೆಂದು ತಿಳಿದಿಲ್ಲ ೪೩
ಇ) ಇತರೆ(ಬರೆಯಿರಿ)-

ಅನುಬಂಧ-೭

## ಭಾಶೆ ಮತ್ತು ಶಿಕ್ಶಣ ತಜ್ನರಿಂದ ಮಾಹಿತಿಗಾಗಿ ಸಿದ್ಧಪಡಿಸಿದ ಪ್ರಶ್ನೆಗಳ ಸರಣಿ

(ಪ್ರಶ್ನೋತ್ತರದ ಮಾದರಿಯೊಂದನ್ನು ಇಲ್ಲಿ ಕೊಡಲಾಗಿದೆ)

೧. ಪದವಿ ತರಗತಿಗಳಲ್ಲಿ ಭಾಶಾ ಕಲಿಕೆಯ ಉದ್ದೇಶವೇನು?

ನಿಮ್ಮ ಪ್ರಶ್ನೆಯಲ್ಲಿಯೇ ಉತ್ತರವಿದೆ. ಭಾಶಾ ಕಲಿಕೆ ಆದರೆ ಉಳಿದೆಲ್ಲವು ಆದಂತೆ ಅಲ್ಲವೆ? ಭಾಶೆ-ಸಂಸ್ಕೃತಿಯ ನಡುವಿನ ತೊಡಕನ್ನು ಇಲ್ಲಿ ಚರ್ಚಿಸುವುದು ಬೇಡ. ಭಾಶಿಕ ಸಮಾಜ ಅನ್ನುವುದಕ್ಕಿಂತ 'ಸಮಾಜಗಳು' ಎನ್ನುವುದು ಸರಿಯಾಗುತ್ತದೆ.

ಈ ರೀತಿಯ ಪಠ್ಯ ಮತ್ತು ವಿಶಯಗಳನ್ನು ಪದವಿ ತರಗತಿಗಳಿಗೆ ಕಲ್ಪಿಸಿದವರು ಬ್ರಿಟೀಶರು. ವಸಾಹತುಶಾಹಿ ಆರಂಭಕಾಲದ ವಿದ್ಯಾಭ್ಯಾಸ ಕ್ರಮ ನಮ್ಮಲ್ಲಿ ಇನ್ನೂ ಬೇರೆ ಬೇರೆ ರೂಪದಲ್ಲಿ ಮುಂದುವರಿದಿದೆ. ವಿಶ್ವವಿದ್ಯಾಲಯಗಳು ಎರಡು ಭಾಶೆ ಮತ್ತು ಮೂರು ವಿಶಯಗಳನ್ನು ಬೋಧಿಸುವ ಪಠ್ಯನೀತಿಯನ್ನು ಅಳವಡಿಸಿಕೊಂಡಿರುವುದರಿಂದ, ಇದರ ಹಿಂದೆ ಗಹನವಾದ ಚರ್ಚೆ ನಡೆದಿದೆ ಅಂತ ಅನ್ನಿಸುವುದಿಲ್ಲ. ಒಂದು ಸ್ಥಳೀಯ ಭಾಶೆ ಅದರ ಜೊತೆಗೆ ಇಂಗ್ಲಿಶ್ ಎಂಬ ಚಟುವಟಿಕೆಯೆ ವಸಾಹತುಶಾಹಿಯ ಚಟುವಟಿಕೆಯಂತೆ ತೋರುವುದಿಲ್ಲವೇ? ಸ್ಥಳೀಯ ಭಾಶೆ ಅಂದ ಮಾತ್ರಕ್ಕೆ ಕನ್ನಡವೇ ಆಗಬೇಕಿಲ್ಲ, ಸಂಸ್ಕೃತ, ಹಿಂದಿ, ಅಡಿಶನಲ್ ಇಂಗ್ಲಿಶ್ ಹೀಗೆ ಏನು ಬೇಕಾದರೂ ಆಗಬಹುದು ಎಂಬ ನೀತಿಯೇ ಭಾಶಾ ಕಲಿಕೆಯ ಬಗ್ಗೆ ದೊಡ್ಡ ಚಿಂತನೆ/ಗಂಭೀರವಾದ ಚಿಂತನೆ ಮತ್ತು ಕಾಳಜಿಯಿದೆ ಅಂತ ಅನ್ನಿಸುವುದಿಲ್ಲ.

ಸಾಹಿತ್ಯ ಸಂಸ್ಕೃತಿಯ ವಿಶಯಕ್ಕೆ ಬಂದರೆ, ಪ್ರಾಥಮಿಕ ಹಂತದಿಂದ ಪದವಿ ಹಂತದವರೆಗೆ ನಮ್ಮ ಪಠ್ಯಗಳು ಹೆಚ್ಚಿನ ಮಟ್ಟಿಗೆ ಸಾಹಿತ್ಯ ಪ್ರಧಾನವಾಗಿವೆ. 'ಕನ್ನಡಂಗಳು' ಇರುವಂತೆ 'ಸಂಸ್ಕೃತಿಗಳು' ಇವೆ. ಮಾಸ್ತಿ, ಕಾರಂತ, ಅಡಿಗ, ಪುತಿನ, ಜಿಎಸ್ಎಸ್, ಕಣವಿ, ಶ್ರೀರಂಗ, ಬೇಂದ್ರೆ ಮುಂತಾದವರ ಪಠ್ಯಗಳು ಯಾವ ಸಂಸ್ಕೃತಿಯನ್ನು ಪ್ರತಿನಿಧಿಸುತ್ತವೆ? ಹೀಗಾಗಿ ನಮ್ಮ ಪಠ್ಯಗಳು ಕನ್ನಡದ ಎಲ್ಲಾ ಬೇದಗಳನ್ನು ಮತ್ತು ಸಂಸ್ಕೃತಿಗಳನ್ನು ಪ್ರತಿನಿಧಿಸುತ್ತವೆ ಎಂದು ಹೇಳುವಂತಿಲ್ಲ. ಸಾಹಿತ್ಯ ಸಂಸ್ಕೃತಿಯ ಮಾತು ಬಂದಾಗಲೂ ಅದು ಯಾವುದನ್ನು ಪ್ರತಿನಿಧಿಸುತ್ತಿದೆ ಎಂಬ ಪ್ರಶ್ನೆ ಇದ್ದೇ ಇದೆ. ಪಠ್ಯಕ್ರಮದ ಪಟ್ಟಿಕೆಯಲ್ಲಿ ಹೇಳದಿದ್ದರೂ ಇವು ಅಲಿಖಿತವಾಗಿಯೇ ಇದ್ದು ಜಾರಿಯಲ್ಲಿವೆ.

೨. ಪದವಿ ತರಗತಿಗಳಲ್ಲಿ ಏನ್ನನ್ನು ಕಲಿಯುದು/ಕಲಿಸುವುದಾಗಿರಬೇಕು?

ಯಾವುದೇ ಒಂದು ಮಾತೃ ಭಾಶೆಯನ್ನು ತರಗತಿಯಲ್ಲಿ ಕಲಿಯುವ ವಿದ್ಯಾರ್ಥಿಗೆ ಆ ಭಾಶೆಯಲ್ಲಿ ವ್ಯವಹರಿಸುವ ಸಾಮಾನ್ಯ ಜ್ನಾನವಿರುತ್ತದೆ. ತರಗತಿಗಳಲ್ಲಿ ಹೊಸ ಪಾರಿಭಾಶಿಕ ಪದಗಳು ಪರಿಚಯವಾಗುತ್ತವೆ ಹಾಗೂ 'ಒಂದು' ರೀತಿಯ ಆಲೋಚನಾ ಕ್ರಮಕ್ಕೆ ಮತ್ತು ಆಡುಭಾಶೆಯಿಂದ ಶಿಶ್ಟಭಾಶೆಯ ಕಡೆಗೆ ಅವನ/ಳ ಗಮನ ಹರಿಯುತ್ತದೆ.

ಒಂದು ರೀತಿಯಲ್ಲಿ ಕಲಿಸುವವರು ಮತ್ತು ಕಲಿಯುವವರು ಅಸಹಾಯಕರು. ಪಠ್ಯಕ್ರಮ ಮತ್ತು ಪಠ್ಯವನ್ನು ಸಿದ್ಧಪಡಿಸುವವರೇ ಬೇರೆಯಾಗಿರುತ್ತಾರೆ. ಈಗ ಪರಿಸ್ಥಿತಿ ಸುಧಾರಿಸುತ್ತಿದೆ ಎನಿಸಿದರೂ ವಿ.ವಿಗಳ ಒಟ್ಟು ರಚನಾ ವಿನ್ಯಾಸವೇ ಪ್ಯೂಡಲ್ ಮಾದರಿಯದು-ವಸಾಹತು ಕಲ್ಪನೆಯದು. ಅವು ಇಂದಿಗೂ ಡೆಮಾಕ್ರೆಟಿಕ್ ಆಗಿಯೇ ಇಲ್ಲ.

ಭಾಶಿಕ ಕೌಶಲಗಳು ಮತ್ತು ಭಿನ್ನ ಮಾದರಿಗಳನ್ನೆಲ್ಲಾ ತರಗತಿಯಲ್ಲಿ ಯಾರೋ ಕಲಿಸುತ್ತರೆ ಎನ್ನುವುದಕ್ಕಿಂತ ವಿದ್ಯಾರ್ಥಿ ಕಲಿಯುತ್ತಾನೆ/ಳೆ. ಅವನು/ಳು ಬೇರೆ ಬೇರೆ ವಿಶಯಗಳನ್ನು ಅಭ್ಯಾಸ ಮಾಡುವುದರಿಂದ, ಬೇರೆ ಬೇರೆ ಜ್ನಾನಶಿಸ್ತುಗಳಲ್ಲಿ ಅಗತ್ಯವಾದ ಭಾಶಾ ಮಾದರಿಗಳನ್ನು ಪರಿಚಯಿಸಿಕೊಳ್ಳುತ್ತಾನೆ/ಳೆ. ಆಲೋಚನೆ, ಅಭಿವ್ಯಕ್ತಿಯ ದಾರಿಯಲ್ಲಿ ಒಂದೆರಡು ಹೆಜ್ಜೆ ಸಾಗಬಹುದು.

ಕನ್ನಡ ಸಾಹಿತ್ಯ-ಸಂಸ್ಕೃತಿಯನ್ನು ತರಗತಿಗಳಲ್ಲಿ ಭಾಶಾ ಪಠ್ಯಗಳ ಮೂಲಕ ಕಲಿಸುವುದು ಎಂದರೇನು? ಪಠ್ಯಗಳು ಒಳಗೊಂಡಿರುವುದು ಗ್ರಾಂಥಿಕ ಭಾಶೆಯನ್ನು. ವಿದ್ಯಾರ್ಥಿ 'ಆಡುವುದು' ಆಡುಭಾಶೆಯನ್ನು. ಹೀಗಾಗಿ ಅವನು/ಳು ನಿತ್ಯದ ಮಾತನ್ನು ತರಗತಿಯಲ್ಲಿ ಮರೆತು, ಪಠ್ಯದ ಭಾಶೆಯನ್ನು ಅದು ಬಹಳ ದೊಡ್ಡದು ಎಂಬ

ಕೀಳರಿಮೆಯಲ್ಲಿ ಕಲಿಯುತ್ತಾನೆ/ಳೆ. ನಾವೆಲ್ಲ ಮನೆಯಲ್ಲಿ `ಉತ್ಯೆ' ಅಂತ ಮಾತಾಡ್ತ ತರಗತಿಯಲ್ಲಿ ಮಾತ್ರ 'ಅಳಿಲು' ಅಂತ ಹೇಳುತ್ತಿದ್ದದ್ದು ನೆನಪಾಗುತ್ತದೆ.

ಇನ್ನು ಕನ್ನಡ ಸಾಹಿತ್ಯ ಅಂದರೆ ಶಿಷ್ಟ ಸಾಹಿತ್ಯ ಮಾತ್ರ. ಜನಪದ ಸಾಹಿತ್ಯ ತರಗತಿ ಪ್ರವೇಶಿಸಿದ್ದು ತಡವಾಗಿ, ಅಳುಕಿನಿಂದ.

೩. ಪದವಿ ಕನ್ನಡ ಭಾಶೆಯ ಪಠ್ಯಗಳು ಎಂಥವಾಗಿರಬೇಕು?

ಇಂದಿನ ಜಗತ್ತಿನಲ್ಲಿ ಹಲವು ಜ್ಞಾನಶಿಸ್ತುಗಳು. ಅವುಗಳಲ್ಲಿ ಸ್ಪೆಶಲೈಸೇಶನ್ ಗಳು ಸೃಶ್ಟಿಯಾಗುತ್ತಿವೆ. ವಿದ್ಯಾರ್ಥಿ ಆರಿಸಿಕೊಳ್ಳುವ `ವಿಶಯ`ಗಳನ್ನು ತನ್ನ ಭಾಶೆಯಲ್ಲಿ ಗ್ರಹಿಸಲು, ಆಲೋಚಿಸಲು, ಬರೆಯಲು ಅಗತ್ಯವಾದ ಭಾಶೆಯನ್ನು ಕಲಿಸುವ ಪಠ್ಯಗಳು ಇರಬೇಕು.

ಪ್ರಶ್ನೆ ಎಂದರೆ, ನಮ್ಮ ತರಗತಿಗಳು ಹೇಗಿರುತ್ತವೆಯೆಂದರೆ, ನಮ್ಮ ಜಾತಿ ಸಮಾಜವೇ ಅಲ್ಲಿರುತ್ತದೆ. ಜಾತಿಗೊಂದು ಭಾಶೆ, ಜಾತಿಬೇದದ ಅರಿವು, ಲಿಂಗತಾರತಮ್ಯದ ಭಾಶೆ, ಎಶ್ಟನ್ನು ಕಲಿಸುವುದು. ಇದು ಸಂಕೀರ್ಣ, ಕಶ್ಟದ ಕೆಲಸ.

೪. ಪದವಿ ಕನ್ನಡ ಭಾಶಾ ಪಠ್ಯಗಳನ್ನು ನಿರ್ಧರಿಸುವ ಮಾನದಂಡಗಳು ಯಾವುದಾಗಿರಬೇಕು?

ಹೊಸ ಹೊಸ ಜ್ಞಾನಶಿಸ್ತುಗಳನ್ನು ಪರಿಚಯಿಸುವ ಮತ್ತುಸಂವೇದನಾಶೀಲತೆ, ಕುತೂಹಲಕ್ಕೆ ಅವಕಾಶ ನೀಡುವಂತಿರಬೇಕು. ಬರಡು ಪಠ್ಯಗಳು ಎಲ್ಲವನ್ನು ಹಾಳುಮಾಡುತ್ತವೆ. ಕಲಿಕಾರ್ಥಿಯ ಸಾಮರ್ಥ್ಯದ ಬಗ್ಗೆ ನೂರು ವಿದ್ಯಾರ್ಥಿಗಳಿರುವ ತರಗತಿಯಲ್ಲಿ ಯಾರ ಸಾಮರ್ಥ್ಯ ಎಶ್ಟು ಅಂತ ಹೇಗೆ ಹೇಳುವುದು?

೫. ಕಲಿಕಾರ್ಥಿಯ ಯಾವ ಸಾಮರ್ಥ್ಯವನ್ನು ಭಾಶಾ ಪಠ್ಯಗಳು ಮುಖ್ಯಮಾಡಿಕೊಳ್ಳಬೇಕು?

ಭಾಶಿಕ, ಸಾಂಸ್ಕೃತಿಕ ನೆನಪುಗಳು ಬರುವಂತೆ ಮಾಡುವುದರ ಜೊತೆಗೆ, ಭಾಶೆ ಎನ್ನುವುದು ಕಾಲ-ದೇಶ-ಸಮಾಜವೊಂದರ ಸ್ವರೂಪವನ್ನು ನೀಡುವುದರಿಂದ, ಜೊತೆಗೆ ಭಾಶಾ ಪ್ರಯೋಗ- ಈ ಎಲ್ಲವನ್ನೂ ಕಲಿಸುವಂತಿರಬೇಕು.

೬. ಪದವಿ ಹಂತದಲ್ಲಿ ಬೋಧನೆ ಮತ್ತು ಕಲಿಕೆಯ ಸ್ವರೂಪ ಹೇಗಿರಬೇಕು?

ಆರಂಭಕಾಲದಿಂದಲು ಪಂಪ, ಕುಮಾರವ್ಯಾಸ, ವಚನಗಳು, ಹರಿಹರ- ಹೀಗೆ ದೊಡ್ಡ ದೊಡ್ಡ ಕವಿಗಳ ಕಾವ್ಯ ಭಾಗ ಓದಿದರೆ ಸಾಕು ಎಂಬ ತಿಳುವಳಿಕೆಯಿತ್ತು. ಇದು ೧೯ನೇ ಶತಮಾನದಲ್ಲಿ ಕ್ರಿಶ್ಚಿಯನ್ ಮಿಶನರಿಗಳು ರಚಿಸಿದ ಪಠ್ಯಕ್ರಮದ ಅನುಕರಣೆ. ನಂತರ ಪ್ರಕಾರನಿಶ್ಟ ಪಠ್ಯಗಳು ಬಂದವು. ಈಗ ಬೆಂಗಳೂರು ವಿ.ವಿ ಯ ಪ್ರಯೋಗ ಕುತೂಹಲದಾಯಕವಾಗಿವೆ.

ದೊಡ್ಡ ದೊಡ್ಡ ತರಗತಿಗಳು-`ಕಲಿಕಾರ್ಥಿಯ ತಿಳುವಳಿಕೆ` ಇದನ್ನು ಅಳೆಯುವ ಮಾನದಂಡ, ಸಮಯ ಇಲ್ಲ. ಆದರೆ ಏಕಮುಖಿ ತರಗತಿಗಳನ್ನು ಟೂವೇ ಟ್ರಾಫಿಕ್ ಮಾಡುವುದು

೭. ಕನ್ನಡ ಭಾಶಾ ಪಠ್ಯ ಕನ್ನಡ ಭಾಶಿಕ ಸಮಾಜದ ಬಹುತ್ವವನ್ನು ನೀಗಿಕೊಳ್ಳುವ ಬಗೆ

ಈಗ ಬಹುಶ ಈ ಪ್ರಶ್ನೆಗೆ ಉತ್ತರ ಸಿಕ್ಕಿದೆ. ಕನ್ನಡ ಪಠ್ಯಗಳು ಈ ಕೊರತೆಯನ್ನು ನೀಗಿಕೊಂಡಿವೆ. ಆಡುಭಾಶೆ, ಸ್ಥಳೀಯತೆ, ಬರವಣಿಗೆ, ಮಾಧ್ಯಮ ಭಾಶೆ ಎಲ್ಲವು ಪಠ್ಯದೊಳಗೆ ಬಂದಿದೆ.

೮. ಪದವಿ ಹಂತದಲ್ಲಿ ಕನ್ನಡ ಭಾಶೆಯ ಕಲಿಸುವಿಕೆ/ಕಲಿಕೆಯಲ್ಲಿ ಸಾಮಾಜಿಕ ಹೊಣೆಗಾರಿಕೆಯನ್ನು ಪ್ರತಿನಿಧಿಸುವುದು

ಇದು ಯಾವತ್ತೂ ಇದ್ದದ್ದೆ. ಇಲ್ಲಿ ಗಮನಿಸಬೇಕಾದ ಸಂಗತಿಯೊಂದಿದೆ. ಸಮಾಜದ ಮುಂದುವರಿದ ವರ್ಗ-ಜಾತಿಗಳಿಂದ ಬಂದ ವಿದ್ಯಾರ್ಥಿಗಳ ಕನ್ನಡ ಬರಡಾದ ಗ್ರಾಂಥಿಕ ಕನ್ನಡವಾಗಿರುವುದು. ಹಿಂದುಳಿದ ಜಾತಿ-

ವರ್ಗಗಳಿಂದ ಬಂದವರ ಕನ್ನಡ ಸ್ಥಳೀಯತೆ, ಸಾಂಸ್ಕೃತಿಕ ವಿವರಗಳನ್ನೊಳಗೊಂಡು ಸಮೃದ್ಧವಾಗಿರುವುದು ಕುತೂಹಲದಾಯಕ ಸಂಗತಿ.

೯. ಪದವಿ ತರಗತಿಗಳಲ್ಲಿ ಭಾಶಾ ವಿಶಯದ ಅಗತ್ಯವಿಲ್ಲ ಎಂಬ ಅಭಿಪ್ರಾಯವೂ ಇದೆ. ನಿಮ್ಮ ಅಭಿಪ್ರಾಯ

ಭಾಶಾ ಕಲಿಕೆಗೆ 'ಹಂತ'ಗಳಿಲ್ಲ. ಹೊಸ ಹೊಸ ವಿಶಯಗಳನ್ನು ಕಲಿಯುವಾಗ ಹೊಸ ಭಾಶೆ ಅಗತ್ಯ. ಅಂದರೆ ಆಡುಮಾತು ಬಿಟ್ಟು ಹೊಸಭಾಶೆ ಎಂದಲ್ಲ, ಅದರ ಬೆಳವಣಿಗೆಯ ಬೇರೆ ಬೇರೆ ನೆಲೆಗಳು. 'ಕಲಿಕೆ' ಯಾವತ್ತು ಮುಗಿಯುವ ಸಂಗತಿಯಲ್ಲ.

೧೦. ಉದ್ಯೋಗಕ್ಕಾಗಿ ಕನ್ನಡ ಭಾಶಾ ಬೋಧನೆ ಎಂಬ ವಾತಾವರಣ ನಿರ್ಮಾಣವಾಗುತ್ತಿದೆ. ಇದರ ಬಗ್ಗೆ

ಪ್ರತ್ಯೇಕ ಪಠ್ಯ ಮತ್ತು ಸಮಾನ ಪಠ್ಯಗಳು ಏನೆ ಇರಲಿ, ಭಾಶೆಯ ಕಲಿಕೆ ಎನ್ನುವುದು ಒಂದು ಇರುತ್ತದೆಯಲ್ಲವೇ. ಐಟಿಐ ಮಾಡಿದವರು ಕೈಗಾರಿಕೆಯಲ್ಲಿ ಕೆಲಸ ಹುಡುಕಿದರೆ ತಪ್ಪಿಲ್ಲ, ಕನ್ನಡ ಎಂಎ ಕಲಿತವರು ಒಂದು ಕೆಲಸ ಹುಡುಕಿಕೊಂಡರೆ ತಪ್ಪೆ? ಪ್ರತ್ಯೇಕ ಪಠ್ಯಗಳಿಲ್ಲದಿದ್ದರೆ ಎಲ್ಲ ತರಗತಿಗಳನ್ನು ಕೂಡಿಸಿ ದೊಂಬಿ ತರಗತಿಗೆ ಪಾಠ ಮಾಡುವುದಕ್ಕಿಂತ ಇದು ಉತ್ತಮವಲ್ಲವೆ?

೧೧. ಕನ್ನಡ ಭಾಶೆ/ಸಾಹಿತ್ಯಕ್ಕೆ ಸಂಬಂಧಿಸಿದ ಮೌಲ್ಯಮಾಪನದಲ್ಲಿ ಯಾವುದೇ ಉತ್ತರಕ್ಕೆ ಪೂರ್ಣಾಂಕ ನೀಡಬಾರದು ಎಂಬ ಪೂರ್ವನಿರ್ಧಾರದ ಬಗ್ಗೆ,

ಈಗ ಅಂತ ಮಡಿವಂತರ ಸಂಖ್ಯೆ ಕಡಿಮೆಯಾಗುತ್ತಿದೆ. ಭಾಶೆ ಮತ್ತು ವಿಶಯದ ಅಭಿವ್ಯಕ್ತಿ ಚೆನ್ನಾಗಿದ್ದರೆ, ಭಾಶಾ ಪತ್ರಿಕೆಯಲ್ಲಿಯೇ ೯೫-೯೭ ಪಡೆದ ವಿದ್ಯಾರ್ಥಿಗಳು ಇದ್ದಾರೆ. ಪುನರ್ ಪರಿಶೀಲನೆ ಮಾಡಲೇಬೇಕೆಂಬುದನ್ನು ಉಲ್ಲಂಗಿಸಲಾಗುತ್ತದೆ.

೧೨. ಭಾಶಾ ಕಲಿಕೆಯ ಸಾಮರ್ಥ್ಯಕ್ಕೆ ಪೂರಕವಾಗುವಂತೆ ಪಠ್ಯ-ಪ್ರಶ್ನೆಪತ್ರಿಕೆ-ಪರೀಕ್ಷೆ-ಮೌಲ್ಯಮಾಪನ ವಿಧ್ಯಮಾನಗಳನ್ನು ಹೇಗೆ ಯೋಜಿಸಬಹುದು

ಇದು ಊಹೆಯ ಪ್ರಶ್ನೆ. ಇವೆಲ್ಲ ನಿರಂತ ಪ್ರಯೋಗದ ಮೂಲಕ ಮಾತ್ರ ಸಮಸ್ಯೆಯನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ. ನನಗೆ ಅನ್ನಿಸುವುದು, ಪರೀಕ್ಷೆ ಎಂಬುದು ಇಲ್ಲದಿದ್ದರೆ ಇನ್ನೂ ಚೆನ್ನಾಗಿ ಭಾಶೆ ಕಲಿಸಲು ಸಾಧ್ಯ.

ಅನುಬಂಧ–೮

## ಸಂದರ್ಶನ ಅಥವ ಬರವಣಿಗೆಯ ಮೂಲಕ ಮಾಹಿತಿಯನ್ನು ಒದಗಿಸಿದ ತಜ್ಞರು

೧. ಬೋಧನೆ ಮತ್ತು ಪಠ್ಯಕ್ರಮದ ನೇರವಾದ ದೀರ್ಘ ಸಂಬಂಧದಿಂಧ ನಿವೃತ್ತರಾದ ಚಿಂತಕರು

೧. ಪ್ರೊ. ಚಿ.ಶ್ರೀನಿವಾಸರಾಜು
೨. ಪ್ರೊ. ಶ್ರೀನಿವಾಸ ಶರ್ಮ
೩. ಡಾ. ಸಿ.ಪಿ ನಾಗರಾಜು
೪. ಪ್ರೊ. ಶಿವರಾಮಯ್ಯ
೫. ಪ್ರೊ. ರೇಣುಕಾಪ್ರಸನ್ನ
೬. ಪ್ರೊ. ಜಿ. ಅಶ್ವಥ್ಥನಾರಾಯಣ

೨. ಪ್ರಸ್ತುತ ಅಧ್ಯಾಪನ ಮತ್ತು ಪಠ್ಯಕ್ರಮದ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವ ಚಿಂತಕರು

೧. ಡಾ. ಚಂದ್ರಶೇಖರ ನಂಗಲಿ
೨. ಪ್ರೊ. ಎಂ.ಜಿ. ಚಂದ್ರಶೇಖರಯ್ಯ
೩. ಡಾ. ಕೆ.ವೈ. ನಾರಾಯಣಸ್ವಾಮಿ
೪. ಡಾ. ಬಿ.ಯು. ಸುಮ
೫. ಡಾ. ರಾಮಲಿಂಗಪ್ಪ ಟಿ ಬೇಗೂರು
೬. ಪ್ರೊ. ಮಹಾಲಿಂಗಭಟ್
೭. ಪ್ರೊ. ಸತ್ಯನಾರಾಯಣ ಮಲ್ಲಿಪಟ್ಣ
೮. ಪ್ರೊ. ನರಸಿಂಹ ಮೂರ್ತಿ
೯. ಡಾ. ಶಿವಸ್ವಾಮಿ
೧೦. ಪ್ರೊ. ದುರ್ಗಾದಾಸ್

೩. ಕನ್ನಡಭಾಶೆ, ಸಮಾಜ, ಸಂಸ್ಕೃತಿ ಮತ್ತು ಶಿಕ್ಷಣದ ಕಾಳಜಿಯ ಇತರ ಚಿಂತಕರು

೧. ಡಾ. ಎಂ.ಎಂ. ಕಲಬುರ್ಗಿ
೨. ಡಾ. ಕೆ.ವಿ. ನಾರಾಯಣ
೩. ಡಾ. ರಹಮತ್ ತರೀಕೆರೆ
೪. ಡಾ. ಎಚ್.ಎಸ್. ಶ್ರೀಮತಿ
೫. ಡಾ. ಡಿ. ಡಾಮಿನಿಕ್
೬. ಡಾ. ಸಿ.ಜಿ. ಲಕ್ಶ್ಮೀಪತಿ

ಅನುಬಂಧ-೯

## ಪರಾಮರ್ಶನಕ್ಕಾಗಿ ಬಳಸಿದ ಗ್ರಂಥಗಳು


೧. ಅಲೋಕ್ ಮುಖರ್ಜಿ: ೨೦೦೯, ದಿಸ್ ಗಿಫ್ಟ್ ಆಫ್ ಇಂಗ್ಲಿಶ್: ಇಂಗ್ಲಿಶ್ ಎಜುಕೇಶನ್ ಅಂಡ್ ದ ಫಾರ್ಮೇಶನ್ ಆಫ್ ಅಲ್ಟರ್ನೇಟಿವ್ ಹೆಜಮೊನೀಸ್ ಇನ್ ಇಂಡಿಯ, ಒರಿಯೆಂಟ್ ಬ್ಲಾಕ್‌ಸ್ವಾನ್, ನ್ಯೂ ಡೆಲ್ಲಿ.

೨. ಅಗರ್ವಾಲ್ ಜೆ.ಸಿ/ಅಗರ್ವಾಲ್ ಎಸ್.ಪಿ: ೧೯೯೨, ಎಜುಕೇಶನಲ್ ಪ್ಲಾನಿಂಗ್ ಇನ್ ಇಂಡಿಯ, ಅಶೋಕ್ ಕುಮಾರ್ ಮಿತ್ತಲ್ ಕಾನ್ಸೆಪ್ಟ್ ಪಬ್ಲಿಶಿಂಗ್ ಕಂ, ನ್ಯೂ ಡೆಲ್ಲಿ.

೩. ಅನಂತರಂಗಾಚಾರ್ಯ ಎನ್:೧೯೭೧, ರಾ. ನರಸಿಂಹಾಚಾರ್ಯ ಜೀವನ ಮತ್ತು ಕಾರ್ಯ, ಕ.ಸಾ.ಪ, ಬೆಂಗಳೂರು.

೪. ಅನಂತಮೂರ್ತಿ ಯು.ಆರ್: ಸಮಕ್ಷಮ, ೧೯೮೦, ಅನನ್ಯ ಪ್ರಕಾಶನ, ಮೈಸೂರು.

೫. ಅರವಿಂದ ಚೊಕ್ಕಾಡಿ: ೨೦೦೭, ಬದುಕಿಗಾಗಿ ಶಿಕ್ಷಣ, ಲೋಹಿಯಾ ಪ್ರಕಾಶನ, ಬಳ್ಳಾರಿ.

೬. ಅಶೋಕ ಕುಮಾರ ರಂಜೇರೆ: ೨೦೦೫, ಭಾಶೆ ಮತ್ತು ಶಿಕ್ಷಣ, ನಿಧಿ ಪ್ರಕಾಶನ ಹೊಸಪೇಟೆ.

೭. ಆಲೂರ ವೆಂಕಟರಾಯ: ೧೯೮೨, ಕರ್ನಾಟಕ ಗತವೈಭವ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೮. ಉಮಾದೇವಿ ಕೆ.ಆರ್: ೨೦೦೫, ವಿಶಯಾಧಾರಿತ ಕನ್ನಡ ಭಾಶಾ ಬೋಧನೆ, ಜ್ಞಾನದೀಪಿಕಾ, ಬೆಂಗಳೂರು.

೯. ಕರೀಗೌಡ ಬೀಚನಹಳ್ಳಿ : ೨೦೦೭ ಸಾಹಿತ್ಯ ವಿಸ್ತಾರ, ಅಜಂತ ಪ್ರಕಾಶನ, ಬೆಂಗಳೂರು.

೧೦. ಕಾಳೇಗೌಡ ನಾಗವಾರ/ನಟರಾಜ ಹುಳಿಯಾರ್(ಸಂ): ೧೯೯೮, ಭಾಶೆ ಮತ್ತು ಇತಿಹಾಸ ರಾಮಮನೋಹರ ಲೋಹಿಯಾ ಬರಹಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೧೧. ಕಿಶನ್ ಪಟ್ನಾಯಕ್/ಅನು; ಹಸನ್ ನಯೀಂ ಸುರಕೋಡ: ೨೦೦೯, ಪ್ರತಿಚಿಂತನೆ, ಲೋಹಿಯಾ ಪ್ರಕಾಶನ, ಬಳ್ಳಾರಿ.

೧೨. ಕೀರ್ತಿನಾಥ ಕುರ್ತಕೋಟಿ: ೧೯೮೩, ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ಕರ್ನಾಟಕ ಸರ್ಕಾರ.

೧೩. ಕೃಷ್ಣ ಕೊಲ್ಹಾರ ಕುಲಕರ್ಣಿ: ೨೦೦೮, ನಾ ಶ್ರೀ ರಾಜಪುರೋಹಿತರ ಸಂಶೋಧನಾ ಲೇಖನಗಳು(೧೮೮೭-೧೯೫೩) ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು.

೧೪. ಕೃಷ್ಣಯ್ಯ ಎಂ.ಎಚ್: ೧೯೯೩, ಸಂಕ್ಷಿಪ್ತ ಕನ್ನಡ ಭಾಶೆಯ ಚರಿತ್ರೆ, ಸುವಿದ್ಯಾ ಪ್ರಕಾಶನ, ಬೆಂಗಳೂರು.

೧೫. ಕೊಂಗವಾಡ ಎಸ್.ಬಿ: ೨೦೦೫, ಭಾಶೆ ಮತ್ತು ಕನ್ನಡ ಬೋಧನೆ, ವಿದ್ಯಾನಿಧಿ ಪ್ರಕಾಶನ, ಗದಗ

೧೬. ಗೋಕಾಕ್ ಸಮಿತಿ: ಭಾಶಾ ಸಮಿತಿಯ ವರದಿ( ವರದಿ), ಕನ್ನಡ ಸಾಹಿತ್ಯ ಪರಿಶತ್ತು, ಬೆಂಗಳೂರು.

೧೭. ಗೋಪಾಲಕೃಷ್ಣ ಅಡಿಗ ಎಂ: ೧೯೮೩, ಅಡಿಗರ ಲೇಖನಗಳು ಮುನ್ನುಡಿಗಳು, ಪ್ರಿಂಟರ್ಸ್ ಪ್ರಕಾಶನ, ಬೆಂಗಳೂರು.

೧೮. ಗೋವಿಂದರಾಜು ಸಿ.ಆರ್: ೨೦೦೬, ಕರ್ನಾಟಕ ಏಕೀಕರಣ ಚಳುವಳಿ ಮತ್ತು ಕನ್ನಡ ಸಾಹಿತ್ಯ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.ಶೆ

೧೯. ಗೋವಿಂದರಾಜು ಸಿ.ಆರ್: ೧೯೯೫, ಕನ್ನಡ ಕರ್ನಾಟಕತ್ವ: ಆಲೂರ ವೆಂಕಟರಾಯರ ಚಿಂತನೆಗಳು, ಕನ್ನಡ ವಿ.ವಿ. ಹಂಪಿ

೨೦. ಗೋವಿಂದರಾಜು ಸಿ.ಆರ್: ೨೦೦೫, ಕನ್ನಡಮ್ಮ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೧. ಚಂದ್ರಶೇಖರ್ ಎಸ್: ೨೦೦೬, ವಸಾಹತು ಕಾಲೀನ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೨೨.ಚಂದ್ರಶೇಖರ್ ಎಸ್: ೧೯೯೯, ಸಾಹಿತ್ಯ ಮತ್ತು ಚರಿತ್ರೆ, ನಮ್ಮ ಪ್ರಕಾಶನ, ತಿಪಟೂರು.

೨೩.ಚಂದ್ರಶೇಖರ್ ಎಸ್: ೨೦೦೨, ಆಧುನಿಕ ಕರ್ನಾಟಕದ ಆಂದೋಲನಗಳು, ನಮ್ಮ ಪ್ರಕಾಶನ,ಬಿಳಿಗೆರೆ, ತಿಪಟೂರು.

೨೪.ಡಾಮ್ನಿಕ್ ಡಿ: ೨೦೦೭, ದಮನಿತ ದನಿಗಳ ಚಿಂತನ, ಸಖೀ ಪ್ರಕಾಶನ, ಹೊಸಪೇಟೆ.

೨೫. ಡಾಮ್ನಿಕ್ ಡಿ: ೨೦೦೮, ಕನ್ನಡ ಸಾಹಿತ-ಸಂಸ್ಕೃತಿ: ಏಕರೂಪೀತನದ ಅಪಕಲ್ಪನೆಗಳು, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು

೨೬. ಡಾಮ್ನಿಕ್ ಡಿ: ೨೦೦೫, ಕರ್ನಾಟಕ ಜಾತಿಗಳ ಸಾಂಸ್ಕೃತಿಕ ಪ್ರತಿನಿಧೀಕರಣ ಮತ್ತು ವಸಾಹತುಶಾಹಿ ಅನುಭವ, ಪಿ.ಎಚ್.ಡಿ ಪದವಿಗೆ ಮಂ. ವಿ.ವಿ ಗೆ ಸಲ್ಲಿಸಿದ ಮಹಾಪ್ರಬಂಧ(ಅಪ್ರಕಟಿತ)

೨೭. ಧಾರವಾಡಕರ ರಾ. ಯ: ೧೯೭೫, ಹೊಸಗನ್ನಡ ಸಾಹಿತ್ಯದ ಉದಯಕಾಲ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨೮. ನಟರಾಜ್ ಹುಳಿಯಾರ್: ೨೦೦೪, ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೯. ನಂಜರಾಜ ಅರಸು: ೨೦೦೮, ಮೈಸೂರು ನೂರಿನ್ನೂರು ವರ್ಷಗಳ ಹಿಂದೆ, ಅಭಿರುಚಿ ಪ್ರಕಾಶನ, ಮೈಸೂರು.

೩೦. ನಾಗರಾಜ್ ಡಿ.ಆರ್: ೨೦೦೬, ಸಾಹಿತ್ಯ ಕಥನ, ಅಕ್ಷರ ಪ್ರಕಾಶನ, ಹೆಗ್ಗೋಡು.

೩೧. ನಾಗರಾಜ್ ಡಿ.ಆರ್: ೨೦೦೨, ಸಂಸ್ಕೃತಿ ಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೩೨. ನಾರಾಯಣ ಕೆ.ವಿ:೧೯೯೭, ಬೇರು ಕಾಂಡ ಚಿಗುರು, ವಿವೇಕ ಪ್ರಕಾಶನ, ಬೆಂಗಳೂರು.

೩೩. ನಾರಾಯಣ ಕೆ.ವಿ: ೨೦೦೭, ಕನ್ನಡ ಜಗತ್ತು ಅರ್ಧ ಶತಮಾನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೪. ನಾರಾಯಣ ಕೆ.ವಿ: ೨೦೦೧, ಮತ್ತೆ ಭಾಷೆಯ ಸುತ್ತಮುತ್ತ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೩೫. ನಾರಾಯಣ ಕೆ.ವಿ: ೨೦೦೫, ನಮ್ಮೊಡನೆ ನಮ್ಮ ನುಡಿ, ಲೋಹಿಯಾ ಪ್ರಕಾಶನ, ಬಳ್ಳಾರಿ.

೩೬. ನಾರಾಯಣ ಕೆ.ವಿ(ಸಂ): ೨೦೦೭, ಭಾಶೆ;ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ , ಕನ್ನಡ ವಿ.ವಿ. ಹಂಪಿ.

೩೭. ನಾಯಕ್ ಜೆ.ಪಿ/ಅನು;ಮಹಾಬಲೇಶ್ವರರಾವ್: ೧೯೮೭, ಶಿಕ್ಷಣ ಆಯೋಗ: ಪೂರ್ವೋತ್ತರ, ಐಬಿಎಚ್, ಬೆಂಗಳೂರು.

೩೮. ನಾಯಕ ಜಿ.ಎಚ್: ೧೯೮೪, ನಿರಪೇಕ್ಷ, ಅಕ್ಷರ ಪ್ರಕಾಶನ, ಹೆಗ್ಗೋಡು.

೩೯. ಪರಮೇಶ್ವರ ಭಟ್ಟ ಎಸ್.ವಿ: ೧೯೮೩, ಕನ್ನಡ ಅಭಿಜ್ಞಾನ ಶಾಕುಂತಲ. ಶಾರದಾ ಮಂದಿರ, ಮೈಸೂರು.

೪೦. ಫಣಿರಾಜ್ ಕೆ: ೨೦೦೩, ಅಂಟೋನಿಯೊ ಗ್ರಾಮ್ಸಿ, ಅಭಿನವ, ಬೆಂಗಳೂರು.

೪೧. ಪುಟ್ಟಯ್ಯ ಬಿ.ಎಂ: ೨೦೦೭, ಒಂದನೆ ತರಗತಿಯಿಂದಲೆ ಉರುಳು. ದುಡಿಮೆ ಪ್ರಕಾಶನ, ಬೆಂಗಳೂರು.

೪೨. ಪೂರ್ಣಚಂದ್ರ ತೇಜಸ್ವಿ ಕೆ.ಪಿ: ೨೦೦೯, ವಿಮರ್ಶೆಯ ವಿಮರ್ಶೆ, ಪುಸ್ತಕ ಪ್ರಕಾಶನ ಮೈಸೂರು.

೪೩. ಬರಗೂರು ರಾಮಚಂದ್ರಪ್ಪ: ೨೦೦೭, ಕನ್ನಡ ಸಾಹಿತ್ಯವೆಂಬ ಸ್ವಾತಂತ್ರ್ಯ ಹೋರಾಟ, ಅಂಕಿತ ಪುಸ್ತಕ, ಬೆಂಗಳೂರು.

೪೪. ಬಸವರಾಜ ಕಲ್ಗುಡಿ: ೨೦೦೬, ಸುವರ್ಣ ವಿಚಾರ ಸಾಹಿತ್ಯ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೪೫. ಬಂಜಗೆರೆ ಜಯಪ್ರಕಾಶ್: ೨೦೦೦, ಕನ್ನಡ ರಾಷ್ಟ್ರೀಯತೆ, ಕ್ರಾಂತಿಸಿರಿ ಪ್ರಕಾಶನ, ಬೆಂಗಳೂರು.

೪೬. ಭಾಸ್ಕರರಾವ್ ಬಿ: ೧೯೮೨ ಇಂದಿನ ಶಿಕ್ಷಣ ಪದ್ದತಿ, ಅಸಂಗತ, ಅವೈಜ್ಞಾನಿಕ, ನವಕರ್ನಾಟ ಬೆಂಗಳೂರು.

೪೭. ಮಣಿಪಾಲ ಆರ್ಕೆ: ೨೦೦೦, ಶಿಕ್ಷಣ ಮತ್ತು ವೈಚಾರಿಕತೆ, ಸಂವಾದ ಪ್ರಕಾಶನ, ಮಣಿಪಾಲ.

೪೮. ಮಣಿಪಾಲ ಆರ್ಕೆ: ೧೯೮೬, ಸಾಹಿತ್ಯ ಸಿದ್ಧಾಂತ ಮತ್ತು ಹೋರಾಟ, ನವಕರ್ನಾಟಕ, ಬೆಂಗಳೂರು.
೪೯. ಮಲ್ಲಿಕಾರ್ಜುನ ಭ./ಯದುರಾಜನ್ ಎಸ್.ಎಸ್: ೨೦೦೦, ನಿರಂತರ, ಭಾರತೀಯ ಭಾಷೆಗಳ ಕೇಂದ್ರ ಸಂಸ್ಥೆ, ಮೈಸೂರು.
೫೦. ಮಹಾದೇವಯ್ಯ ಪಿ: ೨೦೦೬, ಕನ್ನಡ ಬಳಕೆ ಸಾಮಾಜಿಕ ವಿನ್ಯಾಸ, ವಿಜಯಲಕ್ಷ್ಮಿ ಪ್ರಕಾಶನ, ಮೈಸೂರು.
೫೧. ಮಾಸ್ತಿ ವೆಂಕಟೇಶ ಅಯ್ಯಂಗಾರ್: ೧೯೭೨, ಸಾಹಿತ್ಯ, ಜೀವನ ಕಾರ್ಯಾಲಯ, ಬೆಂಗಳೂರು.
೫೨. ಮುಗಳಿ ರಂ.ಶ್ರೀ: ೧೯೯೩, ಕನ್ನಡ ಸಾಹಿತ್ಯ ಚರಿತ್ರೆ, ಗೀತಾ ಬುಕ್ ಹೌಸ್, ಮೈಸೂರು.
೫೩. ಮೇಟಿ ಎಸ್.ಎ/ಎಂ.ಎಸ್ ಜೋಶಿ: ೨೦೦೪. ಶಿಕ್ಷಣದ ಆಧಾರಗಳು. ವಿನುತಾ ಪ್ರಕಾಶನ, ಬಿಜಾಪುರ.
೫೪. ಮೊಗಳ್ಳಿ ಗಣೇಶ್: ೨೦೦೮, ತಕರಾರು, ಪಲ್ಲವ ಪ್ರಕಾಶನ, ಚನ್ನಪಟ್ಟಣ.
೫೫. ಮೊಗಳ್ಳಿ ಗಣೇಶ್: ೨೦೦೮, ನಡುಗಾಲದ ಕನ್ನಡ ನಾಡು, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೫೬. ರಹಮತ್ ತರೀಕೆರೆ: ೨೦೦೪, ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
೫೭. ರಹಮತ್ ತರೀಕೆರೆ: ೧೯೯೯, ಬಹುಭಾಶಿಕ ಸಂಸ್ಕೃತಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೫೮. ರಹಮತ್ ತರೀಕೆರೆ: ೨೦೦೭, ಇಂಗ್ಲಿಶ್ ಗೀತಗಳು ಸಾಂಸ್ಕೃತಿಕ ಮುಖಾಮುಖಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
೫೯. ರಾಜಾರಾಮ ಹೆಗಡೆ(ಸಂ): ೨೦೦೪, ಭಾರತೀಯ ಇತಿಹಾಸ, ಸಮಾಜ ಮತ್ತು ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
೬೦. ರಾಜೇಶ್. ಇ.ಬೆಳ್ಳೇರ್: ೨೦೦೪, ಪಠ್ಯಕ್ರಮ ಸಂವಹನಾ ತತ್ವಗಳು, ಕಾವೇರಿ ಪ್ರಕಾಶನ, ಬೆಂಗಳೂರು.
೬೧. ರಾಯಬರ್ಗ್ ಡಬ್ಲ್ಯ.ಎಂ/ಅನು;ಎಸ್.ಎ. ಬುರ್ಲಿ: ೧೯೯೧, ಭಾರತದಲ್ಲಿ ಮಾತೃ ಭಾಶೆಯ ಬಗ್ಗೆ ಸಲಹೆಗಳು, ಕರ್ನಾಟಕ ವಿ.ವಿ. ಧಾರವಾಡ.
೬೨. ರೇಣುಕಾ ಪ್ರಸನ್ನ ಮ.ಗಂ: ೧೯೭೯, ಪ್ರಚಲಿತ ಶಿಕ್ಷಣ ಒಂದು ಚಿಂತನೆ. ವಿಶ್ವನಾಥ ಪ್ರಕಾಶನ, ಮೈಸೂರು.
೬೩. ರೇಣುಕ ಪ್ರಸನ್ನ ಮ.ಗಂ(ಸಂ); ೧೯೭೫, ಒರೆಗಲ್ಲು, ಅಧ್ಯಾಪಕರ ಸಂಘ, ಜೆ.ಎಸ್.ಎಸ್.ಕಾಲೇಜು ಮೈಸೂರು.
೬೪. ರೇಣುಕ ಪ್ರಸನ್ನ ಮ.ಗಂ; ೧೯೯೬, ಮತ್ತಶ್ಟು ಶೈಕ್ಶಣಿಕ ಚಿಂತನೆಗಳು, ಸಂವಹನ, ಮೈಸೂರು.
೬೫. ಲಕ್ಶ್ಮಣ ಸ್ವಾಮಿ ಮುದಲಿಯಾರ್ ಎ/ಅನು;ಮೆಂಚ ಜಿ.ಬಿ: ೧೯೭೨, ಭಾರತದಲ್ಲಿ ಶಿಕ್ಶಣ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
೬೬. ಲಕ್ಶ್ಮಿನಾರಾಯಣ ಭಟ್ಟ ಎನ್.ಎಸ್: ೧೯೮೯, ಕನ್ನಡ ಸಾಹಿತ್ಯ ಪ್ರತಿಭೆಯ ಸ್ವರೂಪ, ಬೆಂಗಳೂರು ವಿಶ್ವವಿದ್ಯಾಲಯ.
೬೭. ವಸು ಎಂ.ವಿ: ೨೦೦೯, ಕನ್ನಡದೊಳ್ ಭಾವಿಸಿದ ಜನಪದಂ, ಚಿಂತನ ಪುಸ್ತಕ, ಬೆಂಗಳೂರು.
೬೮. ವಿನಯ ಲಾಲ್/ ಆಶೀಶ್ ನಂದಿ: ೨೦೦೭, ಹೊಸ ಶತಮಾನಕ್ಕೆ ಹೊಸ ಪರಿಭಾಶೆ, ಅಕ್ಶರ ಪ್ರಕಾಶನ, ಹೆಗ್ಗೋಡು.
೬೯. ವೆಂಕಟರಾಮು ಎಸ್: ೧೯೮೩, ದುಡಿಯುವವರ ದನಿ ಮತ್ತು ಇತರ ಲೇಖನಗಳು, ಪ್ರಿಂಟರ್ಸ್ ಪ್ರಕಾಶನ, ಬೆಂಗಳೂರು.
೭೦. ಶಂಕರಭಟ್ ಡಿ.ಎನ್: ೨೦೦೬, ಕನ್ನಡ ನುಡಿಯ ಬಗೆಗಿನ ಚಿಂತನೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.
೭೧. ಶಂಕರ ಬಟ್ ಡಿ.ಎನ್: ೨೦೦೭, ಕನ್ನಡ ನುಡಿ ನಡೆದು ಬಂದ ದಾರಿ, ಭಾಶಾ ಪ್ರಕಾಶನ ಹೆಗ್ಗೋಡು.
೭೨. ಶಂಕರ ಬಟ್ ಡಿ.ಎನ್: ೨೦೦೨, ಭಾಶೆಯ ಬಗೆಗೆ ನೀವೇನು ಬಲ್ಲಿರಿ, ಭಾಶಾ ಪ್ರಕಾಶನ ಮೈಸೂರು.

